# ಸೇವಾಶ್ರೀ

ಶ್ರೀ ಹೊಂ. ಶ್ರೀನಿವಾಸಯ್ಯ ಅಭಿನಂದನ ಗ್ರಂಥ



# ಸೇವಾಶ್ರೀ

(ಶ್ರೀ ಹೊ. ಶ್ರೀನಿವಾಸಯ್ಯ ಅಭಿನಂದನ ಗ್ರಂಥ)



ಸಂಪಾದಕರು

ಶ್ರೀ ಹೆಚ್. ಆರ್. ದಾಸೇಗೌಡ

ಶ್ರೀ ಬೆ. ಗೋ. ರಮೇಶ್

ಶ್ರೀ ಪಿ. ರಾಮಯ್ಯ

ಶ್ರೀ ಹ. ಕ. ರಾಜೇಗೌಡ

ಶ್ರೀ. ಎಂ.ವಿ. ಸೀತಾರಾಮಯ್ಯನವರಿಗೆ

9/11/83

ಪ್ರಕಾಶಕರು

ಶ್ರೀ ಹೊ. ಶ್ರೀನಿವಾಸಯ್ಯ ಅಭಿನಂದನಾ ಸಮಿತಿ

ಗಾಂಧಿ ಸಾಹಿತ್ಯ ಸಂಘ

8ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು–560 003

SEVASHREE — Felicitation Volume to Sri H. Sreenivasaiah
Published by Sri H. Sreenivasaiah Felicitation Committee
Gandhi Sahitya Sangha, 8th Cross, Malleswaram,
Bangalore-560 003. PP XVI+212; Price Rs. 25/-



ಪ್ರಕಟಣೆ ವರ್ಷ 1982

ಬೆಲೆ : ಸಾದಾ ಪ್ರತಿ ಇಪ್ಪತ್ತೈದು ರೂಪಾಯಿಗಳು

ಲೈಬ್ರರಿ ಪ್ರತಿ ಮೂವತ್ತು ರೂಪಾಯಿಗಳು

ಮುಖಚಿತ್ರದ ವಿನ್ಯಾಸ : ಶ್ರೀ ಕಮಲೇಶ್



ಮುದ್ರಕರು :

ಚಿತ್ರಾ ಪ್ರಿಂಟರ್ಸ್
ನಂ. 193, ಲಿಂಕ್ ರಸ್ತೆ
ಮಲ್ಲೇಶ್ವರಂ, ಬೆಂಗಳೂರು-560 003
ದೂರವಾಣಿ : 3 4 3 6 7



ಪ್ರಕಾಶಕರು :

ಶ್ರೀ ಹೊ. ಶ್ರೀನಿವಾಸಯ್ಯ ಅಭಿನಂದನಾ ಸಮಿತಿ

ಮಲ್ಲೇಶ್ವರಂ : : ಬೆಂಗಳೂರು-560 003



# ಅಭಿನಂದನಾ ಸಮಿತಿಯ ಪರವಾಗಿ . . .

ಸ್ವಾತಂತ್ರ್ಯ ಹೋರಾಟಗಾರರೂ, ಗಾಂಧೀವಾದಿಗಳೂ, ಸಾಹಿತಿಗಳೂ, ತಾಂತ್ರಿಕ ತಜ್ಞರೂ, ಸಮಾಜ ಧುರೀಣರೂ, ಪರೋಪಕಾರಿಗಳೂ, ಸ್ನೇಹಪರರೂ, ಸಹೃದಯರೂ ಒಬ್ಬರೇ ಆಗಿರುವುದು ನಮ್ಮಲ್ಲಿ ತುಂಬಾ ವಿರಳ. ಇಂತಹ ಅಪೂರ್ವ ಗುಣಗಳನ್ನು ಪಡೆದಿರುವವರಲ್ಲಿ ಶ್ರೀ ಹೊ. ಶ್ರೀನಿವಾಸಯ್ಯನವರು ಒಬ್ಬರು.

ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕು ಚೌದರಿಕೊಪ್ಪಲಿನಲ್ಲಿ ಜನಿಸಿದ ಶ್ರೀನಿವಾಸಯ್ಯನವರು ಬಾಲ್ಯದಿಂದಲೂ ಕಷ್ಟಪಟ್ಟು ವಿದ್ಯಾರ್ಜನೆ ಮಾಡಿ 1949ರಲ್ಲಿ ತಾಂತ್ರಿಕ ಪದವಿ ಪಡೆದರು. ವಿದ್ಯಾರ್ಥಿ ದೆಸೆಯಲ್ಲಿರುವಾಗಲೇ ಇವರು ವಿದ್ಯಾರ್ಥಿ ಸಂಘದ ಸಕ್ರಿಯ ಸದಸ್ಯರಾಗಿದ್ದುಕೊಂಡು 1942ರಲ್ಲಿ ನಡೆದ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಾನಾ ರೀತಿಯಲ್ಲಿ ಭಾಗವಹಿಸಿದರು. ಮೊದಲಿನಿಂದಲೂ ಮಹಾತ್ಮ ಗಾಂಧಿಯವರ ರಚನಾತ್ಮಕ ಕಾರ್ಯಗಳಿಗೆ ಮನಸೋತ ಇವರು ವಯಸ್ಕರ ಶಿಕ್ಷಣ, ಅಸ್ಪೃಶ್ಯತಾ ನಿವಾರಣೆ, ಹರಿಜನರಿಗೆ ದೇವಸ್ಥಾನಗಳಲ್ಲಿ ಪ್ರವೇಶ ದೊರಕಿಸಿ ಕೊಡುವುದು, ಖಾದಿ ಪ್ರಚಾರ ಮುಂತಾದ ಕಾರ್ಯಗಳಲ್ಲಿ ತುಂಬ ಆಸಕ್ತಿವಹಿಸಿ ದುಡಿದರು. ಸಂಘ ಸಂಸ್ಥೆಗಳ ವಿಚಾರದಲ್ಲಿ ಶ್ರೀನಿವಾಸಯ್ಯನವರಿಗೆ ಅಪಾರ ಅಭಿಮಾನ. ಕೆಲವು ಸಂಘ ಸಂಸ್ಥೆಗಳನ್ನು ಪುನರುಜ್ಜೀವನಗೊಳಿಸಿರುವುದಲ್ಲದೆ, ಸಮಾಜದ ಹಿತದೃಷ್ಟಿಯಿಂದ ಕೆಲವು ವಿದ್ಯಾ ಸಂಸ್ಥೆಗಳನ್ನು, ಸಹಕಾರ ಸಂಸ್ಥೆಗಳನ್ನು ಸ್ಥಾಪಿಸಿ ಬಡಜನರಿಗೆ ತುಂಬಾ ಉಪಕಾರ ಮಾಡಿದ್ದಾರೆ. ಗಾಂಧೀ ಸಾಹಿತ್ಯ ಸಂಘ, ಪ್ರಕೃತಿ ಜೀವನ ಕೇಂದ್ರ, ಕರ್ನಾಟಕ ಪ್ರದೇಶ ಪ್ರಾಕೃತಿಕ ಚಿಕಿತ್ಸಾ ಪರಿಷತ್, ಶ್ರೀ ರಾಮ ಮಂದಿರ ಟ್ರಸ್ಟ್, ಶ್ರೀರಾಮ ಕಲ್ಯಾಣ ಮಂಟಪ ಮತ್ತು ವಿದ್ಯಾರ್ಥಿನಿಲಯ, ಬೆಂಗಳೂರು ಎಜುಕೇಷನ್ ಸೊಸೈಟಿ, ಚೌದರಿಕೊಪ್ಪಲು ಶ್ರೀರಾಮ ರೈತ ಯುವಕ ಸೇವಾ ಸಂಘ, ವಿ.ವಿ. ಪುರಂ ಕಲಾ ಮತ್ತು ವಾಣಿಜ್ಯ ಕಾಲೇಜ್, ಬೆಂಗಳೂರು ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಬಿ.ಟಿ.ಎಲ್. ಎಜುಕೇಷನಲ್ ಟ್ರಸ್ಟ್, ದಕ್ಷಿಣ ಭಾರತ ಗೋಸೇವಾ ಸಂಘ ಮುಂತಾದ ಸಂಸ್ಥೆಗಳಲ್ಲಿ ಜವಾಬ್ದಾರಿ ಸ್ಥಾನವಹಿಸಿ ಈಗಲೂ ಸೇವೆ ಸಲ್ಲಿಸುತ್ತಿದ್ದಾರೆ.

1949ರಲ್ಲಿ ತಾಂತ್ರಿಕ ಪದವಿ ಪಡೆದ ಹೊ. ಶ್ರೀನಿವಾಸಯ್ಯನವರು ಅದೇ ವರ್ಷ ಹಿಂದೂಸ್ಥಾನ್ ವಿಮಾನ ಕಾರ್ಖಾನೆಯನ್ನು ಸೇರಿ ಹಂತಹಂತವಾಗಿ ಮೇಲೆ ಬಂದು

ಈಗ ಭಾರತ್ ಅರ್ತ್ ಮೂವರ್ಸ್ ಕಾರ್ಖಾನೆಯ ರೈಲ್‌ಕೋಚ್ ವಿಭಾಗದಲ್ಲಿ ಉತ್ಪಾದನಾ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಕಾ ರ್ಖಾ ನೆ ಯ ಮುಖಾಂತರ ಜರ್ಮನಿ, ಶ್ರೀಲಂಕಾ ಮುಂತಾದ ದೇಶಗಳಲ್ಲಿ ಸುತ್ತಾಡಿ ವಿಶೇಷ ತಾಂತ್ರಿಕ ಜ್ಞಾನ ಸಂಪಾದಿಸಿದ್ದಾರೆ. ವಿದ್ಯಾರ್ಥಿದೆಸೆಯಿಂದಲೂ ಸಾಹಿತ್ಯದಲ್ಲಿ ವಿಶೇಷ ಅಭಿರುಚಿಯುಳ್ಳ ಇವರು ಕೆಲವು ಜೀವನ ಚರಿತ್ರೆ, ಪ್ರವಾಸ ಸಾಹಿತ್ಯ ಹಾಗೂ ಮಕ್ಕಳ ಪುಸ್ತಕಗಳನ್ನು ಬರೆದಿದ್ದಾರೆ. 'ನಾ ಕಂಡ ಜರ್ಮನಿ' ಎಂಬ ಇವರ ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಬಂದಿದೆ. ಅಲ್ಲದೆ ಕೆಲವು ವರ್ಷ ಈ ಪುಸ್ತಕ ಪಿ. ಯು. ಸಿ. ತರಗತಿಗೆ ಪಠ್ಯಪುಸ್ತಕವಾಗಿಯೂ ಇತ್ತು. ಇವರ ಕೆಲವು ಉಪನ್ಯಾಸಗಳನ್ನು ಮಕ್ಕಳ ಪುಸ್ತಕಗಳನ್ನು ಮೈಸೂರು ವಿಶ್ವವಿದ್ಯಾಲಯ ಹಾಗೂ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿವೆ.

ಈ ವರ್ಷದ ಜನವರಿ 4ರಂದು ಶ್ರೀ ಹೊ. ಶ್ರೀನಿವಾಸಯ್ಯನವರಿಗೆ 57 ವರ್ಷ ತುಂಬಿತು. ಈ ಸಂದರ್ಭದಲ್ಲಿ ಶ್ರೀಯುತರ ತಾಂತ್ರಿಕ ಸೇವೆ, ಸಾಹಿತ್ಯ ಸೇವೆ ಹಾಗೂ ಸಮಾಜ ಸೇವೆಯನ್ನು ಗುರುತಿಸಿದ ಅನೇಕ ಜನ ಅವರ ಅ ಭಿ ಮಾ ನಿ ಗ ಳು ಶ್ರೀನಿವಾಸಯ್ಯನವರಿಗೆ ತಮ್ಮ ಗೌರವ ಸೂಚಿಸಲು ಉನ್ನತಮಟ್ಟದ ಒಂದು ಅಭಿನಂದನಾ ಸಮಾರಂಭವನ್ನು ನಿರ್ವಹಿಸಬೇಕೆಂದು ತೀರ್ಮಾನಿಸಿ ಅದಕ್ಕಾಗಿ ರಾಜ್ಯ ಮಟ್ಟದ ಒಂದು ಸಮಿತಿಯನ್ನು ರಚಿಸಿದ್ದಾರೆ. ಹೊ. ಶ್ರೀ ಅಭಿಮಾನಿಗಳ ಅಪೇಕ್ಷೆಯಂತೆ ಬೆಂಗಳೂರು ನಗರದಲ್ಲಿ ರಾಜ್ಯ ಮಟ್ಟದ ಒಂದು ಅಭಿನಂದನಾ ಸಮಾರಂಭವನ್ನು ಏರ್ಪಡಿಸುವುದು, ಸಮಾರಂಭದ ಅಂಗವಾಗಿ ಸಂಭಾವನಾ ಗ್ರಂಥ ಮತ್ತು ನೆನಪಿನ ಸಂಚಿಕೆಯನ್ನು ಪ್ರಕಟಿಸುವುದು, ಶ್ರೀಯುತರ ಹೆಸರಿನಲ್ಲಿ ಒಂದು ಟ್ರಸ್ಟ್ ಸ್ಥಾಪಿಸಿ ಅದರ ಮೂಲಕ ಪ್ರತಿವರ್ಷ ಸಾಹಿತ್ಯ, ಶಿಕ್ಷಣ, ಸಂಸ್ಕೃತಿ ಮತ್ತು ಸಮಾಜ ಸೇವೆಯ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡುವುದು ಸಮಿತಿಯ ಉದ್ದೇಶವಾಗಿದೆ. ಈ ಎಲ್ಲ ಕಾರ್ಯಗಳು ಒಬ್ಬ ವ್ಯಕ್ತಿಯ ಹೆಸರಿನಲ್ಲಿ ನಡೆದರೂ ಇದರ ಪ್ರಯೋಜನ ಸಾರ್ವಜನಿಕವಾಗಿ ಶಿಕ್ಷಣ, ಸಾಹಿತ್ಯ ಹಾಗೂ ಸಮಾಜಸೇವಾ ಚಟುವಟಿಕೆಗಳಿಗೆ ಪೋಷಕವಾಗಿರುತ್ತದೆ.

ಲಕ್ಷಾಂತರ ರೂಪಾಯಿ ವೆಚ್ಚ ತಗಲುವ ಈ ಯೋಜನೆಗಳು ಸಾರ್ವಜನಿಕರ ಸಹಾಯ ಸಹಕಾರಗಳಿಲ್ಲದಿದ್ದರೆ ಯಶಸ್ವಿಯಾಗುವುದು ಕಷ್ಟ. ಅದನ್ನು ಮನಗಂಡು ಸಾರ್ವಜನಿಕರ ಸಹಾಯ ಪಡೆಯಲು "ಶ್ರೀ ಹೊ. ಶ್ರೀನಿವಾಸಯ್ಯ ಅಭಿನಂದನಾ ಸಮಿತಿ"ಯ ಹೆಸರಿನಲ್ಲಿ ಒಂದು ಮನವಿಯನ್ನು ಹೊರಡಿಸಲಾಯಿತು. ನಮ್ಮ ಪ್ರಾರ್ಥನೆಗೆ ಮಹಾಜನರಿಂದ ಒಳ್ಳೆಯ ಪ್ರೋತ್ಸಾಹ ದೊರೆಯಿತು. ನಾಡಿನ ಬೇರೆ ಬೇರೆ ಭಾಗಗಳಲ್ಲಿ ಹಾಗೂ ವಿದೇಶಗಳಲ್ಲಿರುವ ಹೊ. ಶ್ರೀಯವರ ಅಭಿಮಾನಿಗಳು

ಇದೊಂದು ಪುಣ್ಯ ಕಾರ್ಯವೆಂದು ಭಾವಿಸಿ ತಮ್ಮ ಶಕ್ತಿಮೀರಿ ಕಾಣಿಕೆ ಸಲ್ಲಿಸಿದ್ದಾರೆ. ಕೆಲವು ಸಂಘ ಸಂಸ್ಥೆಗಳೂ ಉದಾರವಾಗಿ ಧನ ಸಹಾಯ ನೀಡಿವೆ. ಸಮಿತಿ ಪ್ರಕಟಿಸಿರುವ "ಜಯಶ್ರೀ" ನೆನಪಿನ ಸಂಚಿಕೆಗೆ ಅನೇಕ ಸಂಸ್ಥೆಗಳು ಜಾಹೀರಾತು ಕೊಟ್ಟು ಪ್ರೋತ್ಸಾಹ ನೀಡಿವೆ. ಈ ಎಲ್ಲ ಮಹನೀಯರ, ಸಂಘ ಸಂಸ್ಥೆಗಳ, ಜಾಹೀರಾತುದಾರರ ಸಹಾಯವನ್ನು ಸಮಿತಿ ಎಂದೂ ಮರೆಯುವುದಿಲ್ಲ. ಇವರೆಲ್ಲರಿಗೂ ಅಭಿನಂದನಾ ಸಮಿತಿ ತನ್ನ ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಅಭಿನಂದನಾ ಗ್ರಂಥ ಮತ್ತು ನೆನಪಿನ ಸಂಚಿಕೆ ಪ್ರಕಟನಾ ಕಾರ್ಯ ತುಂಬ ಗುರುತರವಾದದ್ದು. ಶ್ರೀಗಳಾದ ಹೆಚ್. ಆರ್. ದಾಸೇಗೌಡ, ಪಿ. ರಾಮಯ್ಯ, ಹ. ಕ. ರಾಜೇಗೌಡ ಮತ್ತು ಬಿ. ಗೋ. ರಮೇಶ್ ಇವರುಗಳು ಸಂಪಾದಕರುಗಳಾಗಿ 'ಅಭಿನಂದನಾ ಗ್ರಂಥ'ದ ಹೊಣೆಯನ್ನು ಹೊತ್ತುಕೊಂಡದ್ದು, ಶ್ರೀ ಬಿ. ಎಸ್. ಗುಂಡೂರಾವ್ ಅವರು ನೆನಪಿನ ಸಂಚಿಕೆ ಜವಾಬ್ದಾರಿಯನ್ನು ವಹಿಸಿಕೊಂಡದ್ದು ಸಮಿತಿಯ ಹೊರೆಯನ್ನು ತುಂಬ ಹಗುರ ಮಾಡಿಕೊಟ್ಟಿತು. ಇವರುಗಳ ಸಹಕಾರದಿಂದ "ಸೇವಾಶ್ರೀ" ಅಭಿನಂನನಾ ಗ್ರಂಥ ಮತ್ತು "ಜಯಶ್ರೀ" ನೆನಪಿನ ಸಂಚಿಕೆ ಬಹು ಅಚ್ಚುಕಟ್ಟಾಗಿ ಹೊರಬಂದಿವೆ. ಅದಕ್ಕಾಗಿ ಈ ಎರಡು ಪ್ರಕಟಣೆಗಳ ಸಂಪಾದಕ ಮಹಾಶಯರಿಗೆ ಅಭಿನಂದನಾ ಸಮಿತಿ ತುಂಬ ಆಭಾರಿಯಾಗಿದೆ. ಕರ್ನಾಟಕ ಪವರ್ ಕಾರ್ಪೊರೇಶನ್ನಿನಲ್ಲಿ ಗ್ರೂಪ್ ಇಂಜಿನಿಯರಾಗಿರುವ ಸಾಹಿತಿ ಶ್ರೀ ಬಿ. ಗೋ. ರಮೇಶ್ ಅವರ ಶ್ರಮವಂತೂ ಶ್ಲಾಘನೀಯ. ಅವರಿಗೆ ವಿಶೇಷ ವಂದನೆಗಳು ಸಲ್ಲುತ್ತವೆ. ಈ ಪ್ರಕಟಣೆಗಳನ್ನು ಅಲ್ಪ ಅವಧಿಯಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಚಿತ್ರಾ ಪ್ರಿಂಟರ್ಸ್‌ನ ಮಾಲೀಕರಿಗೂ, ಸ್ವತಂತ್ರ ಮುದ್ರಣಾಲಯದ ಮಾಲೀಕರಿಗೂ ರಕ್ಷಾಪುಟದ ನಕ್ಷೆಯನ್ನು ಬರೆದುಕೊಟ್ಟ ಶ್ರೀ ಕಮಲೇಶ್ ಅವರಿಗೂ ನಮ್ಮ ವಂದನೆಗಳು.

ಅಭಿನಂದನಾ ಸಮಿತಿ ಕಾರ್ಯ ಆರಂಭವಾದಂದಿನಿಂದ ಸನ್ಮಾನ ಸಮಾರಂಭ ನಡೆಯುವವರೆಗೂ ವಿಶೇಷವಾಗಿ ದುಡಿದವರೆಂದರೆ ಖಜಾಂಚಿಗಳಾದ ಶ್ರೀ ಕೆ, ಹೆಚ್. ರಂಗಯ್ಯನವರು. ಅವರ ನಿಷ್ಠೆ, ಪ್ರಾಮಾಣಿಕತೆ, ಬೇಸರವಿಲ್ಲದ ದುಡಿಮೆ ಇವು ಶ್ರೀ ಹೊ. ಶ್ರೀನಿವಾಸಯ್ಯ ಸನ್ಮಾನ ಸಮಿತಿಯ ಕಾರ್ಯ ಯಶಸ್ವಿಯಾಗಿ ನಡೆಯಲು ಬಹುಮಟ್ಟಿಗೆ ಕಾರಣವಾಯಿತೆಂದರೆ ಇದರಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ಇಂಥವರ ಸಹಕಾರವಿದ್ದರೆ ಎಂಥ ಬೃಹತ್ ಕಾರ್ಯವನ್ನಾದರೂ ಸಾಧಿಸಬಹುದು. ಶ್ರೀ ರಂಗಯ್ಯನವರಿಗೆ ದೇವರು ಆಯುರಾರೋಗ್ಯವನ್ನು ಕೊಟ್ಟು ಕಾಪಾಡಲೆಂದು ಹಾರೈಸುತ್ತಾ ಅವರ ಸೇವೆಯನ್ನು ಸಮಿತಿ ಕೃತಜ್ಞತೆಯಿಂನ ಸ್ಮರಿಸುತ್ತದೆ.

ಶ್ರೀರಂಗಯ್ಯನವರೊಂದಿಗೆ ಅಷ್ಟೇ ನಿಸ್ಪೃಹತೆಯಿಂದ ದುಡಿದ ಶ್ರೀ ಟಿ. ಜೆ. ಕೆಂಪಯ್ಯ ನವರಿಗೆ ಸಮಿತಿ ಕೃತಜ್ಞತೆಯನ್ನು ಸಲ್ಲಿಸುತ್ತದೆ. ಶ್ರೀ ಕೆ. ಟಿ. ಗೋವಿಂದೇ ಗೌಡ, ಸಿ. ಎಂ. ಚಂದ್ರಶೇಖರ್ ಹಾಗೂ ಮ. ನಾಗರಾಜ್ ಅವರಿಗೂ ನಮ್ಮ ವಂದನೆಗಳು.

ಸಮಿತಿಯ ಉದ್ದೇಶದಂತೆ ಅಭಿನಂದನಾ ಸಮಾರಂಭ ನಡೆಯುತ್ತದೆ. ಅಭಿನಂದನಾ ಗ್ರಂಥ ಮತ್ತು ನೆನಪಿನ ಸಂಚಿಕೆ ಪ್ರಕಟವಾಗುತ್ತವೆ. ಶ್ರೀ ಹೊ ಶ್ರೀನಿವಾಸಯ್ಯನವರ ಹೆಸರಿನಲ್ಲಿ ಟ್ರಸ್ಟ್ ಸ್ಥಾಪಿಸಿ ಆ ಮೂಲಕ ಶಿಕ್ಷಣ, ಸಾಹಿತ್ಯ, ಸಾಂಸ್ಕೃತಿಕ ಹಾಗೂ ಸಮಾಜ ಸೇವಾ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡುವ ಕಾರ್ಯ ಮಾತ್ರ ಉಳಿಯುತ್ತದೆ. ಗುರುತರವಾದ ಈ ಜವಾಬ್ದಾರಿಯನ್ನು ನಿರ್ವಹಿಸಲು ಮಹಾಜನತೆ ಎಂದಿನಂತೆ ಮುಂದೆಯೂ ತಮ್ಮ ಪೂರ್ಣ ಸಹಕಾರ ನೀಡ ಬೇಕಾಗಿ ಸಮಿತಿಯ ಪರವಾಗಿ ಪ್ರಾರ್ಥಿಸುತ್ತೇನೆ.

ಶ್ರೀ ಹೊ. ಶ್ರೀನಿವಾಸಯ್ಯನವರು ಈಗ 58ನೆಯ ವರ್ಷದಲ್ಲಿ ಕಾಲಿಟ್ಟಿದ್ದಾರೆ. ಭಗವಂತನು ಅವರಿಗೂ ಅವರ ಕುಟುಂಬ ವರ್ಗದವರಿಗೂ ಆಯುರಾರೋಗ್ಯವನ್ನು ಕೊಟ್ಟು ಕಾಪಾಡುವುದರ ಜೊತೆಗೆ ಅವರ ಸೇವೆ ಇನ್ನೂ ಬಹುಕಾಲ ತಾಂತ್ರಿಕ, ಶಿಕ್ಷಣ ಸಾಹಿತ್ಯ, ಸಾಮಾಜಿಕ ಕ್ಷೇತ್ರಗಳಿಗೆ ಲಭಿಸುವಂತಾಗಲಿ ಎನ್ನುವುದು ಅವರ ಅಭಿಮಾನಿಗಳ ಹಾರೈಕೆಯಾಗಿದೆ.

ಬೆಂಗಳೂರು
13-6-1982

**ದೇಶಹಳ್ಳಿ ಜಿ. ನಾರಾಯಣ,**
ಅಧ್ಯಕ್ಷ, ಶ್ರೀ ಹೊ. ಶ್ರೀನಿವಾಸಯ್ಯ ಅಭಿನಂದನಾ ಸಮಿತಿ



# ಅಭಿವಂದನೆ

ಸೇವಾಹಿ ಪರಮೋಧರ್ಮ: – ಎಂಬ ಉಕ್ತಿಗನುಸಾರವಾಗಿ ನಡೆದುಬಂದವರು ಶ್ರೀ ಹೊನ್ನಪ್ಪ ಶ್ರೀನಿವಾಸಯ್ಯನವರು. ವೃತ್ತಿಯಲ್ಲಿ ಇಂಜನಿಯರ್ ಆಗಿದ್ದುಕೊಂಡು ಭಾರತ್ ಅರ್ತ್ ಮೂವರ್ಸ್ ಲಿಮಿಟೆಡ್‌ನ ರೈಲ್‌ಕೋಚ್ ವಿಭಾಗದ ಮುಖ್ಯ ಉತ್ಪಾದನಾಧಿಕಾರಿಯಾಗಿ ಉನ್ನತ ಸ್ಥಾನದಲ್ಲಿದ್ದರೂ ಸದಾ ಸಮಾಜಸೇವೆಗೆ ತಮ್ಮನ್ನು ಅರ್ಪಿಸಿಕೊಂಡವರು. ಭಾರತದ ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ಶ್ರೀಯುತರು ವಹಿಸಿದ ಪಾತ್ರ, ಹಲವಾರು ವಿದ್ಯಾರ್ಥಿ ಸಂಘಗಳನ್ನು ಸ್ಥಾಪಿಸಿ ತನ್ಮೂಲಕ ಸಮಾಜದ ಮೇಲ್ಮೆಗಾಗಿ ಶ್ರಮಿಸಿದ್ದನ್ನು ಯಾರೂ ಮರೆಯುವಂತಿಲ್ಲ. ಸರಳ ಜೀವನ, ಮಾಡುವ ಎಲ್ಲ ಕೆಲಸಗಳಲ್ಲಿ ಶ್ರದ್ಧೆ, ಕಾರ್ಮಿಕರಲ್ಲಿ ಪ್ರೀತಿ ತೋರುವ ಗುಣ, ಸಂಘಟನಾ ಚಾತುರ್ಯ ಇವೆಲ್ಲ ಅವರ ಯಶಸ್ಸಿನ ಗುಟ್ಟು. ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘ, ಪ್ರಕೃತಿ ಜೀವನ ಕೇಂದ್ರ, ಕರ್ನಾಟಕ ರಾಜ್ಯ ಪ್ರಕೃತಿ ಚಿಕಿತ್ಸಾ ಪರಿಷತ್ತು, ಮಲ್ಲೇಶ್ವರದ ತೆಂಗಿನ ಮರದ ರಸ್ತೆ ರಾಮಮಂದಿರ, ಶ್ರೀರಾಮ ಕೋ ಆಪರೇಟಿವ್ ಬ್ಯಾಂಕ್, ಹಲವಾರು ದೇವಸ್ಥಾನಗಳ ಧರ್ಮದರ್ಶಿತ್ವ ಇವೆಲ್ಲ ಅವರ ಸೇವೆಯ ಫಲಗಳು. ಎರಡು ಬಾರಿ ಜರ್ಮನಿಯ ಪ್ರವಾಸ ಕೈಕೊಂಡ ಶ್ರೀನಿವಾಸಯ್ಯನವರು ತಮ್ಮ ಕಾರ್ಯಕ್ಷೇತ್ರವನ್ನು ಹಿಗ್ಗಿಸಿಕೊಂಡರು. ಉತ್ತಮ ಕೃತಿಗಳನ್ನು ರಚಿಸಿದರು. ಅವರ "ನಾ ಕಂಡ ಜರ್ಮನಿ'' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ಸಂದಿದೆ. ಈ ಎಲ್ಲದರಿಂದ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ ಶ್ರೀನಿವಾಸಯ್ಯನವರು.

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಚೌದರಿ ಕೊಪ್ಪಲಿನ ಶ್ರೀ ಹೊನ್ನಪ್ಪ ಮತ್ತು ಶ್ರೀಮತಿ ತಿಮ್ಮಮ್ಮ ಇವರುಗಳಿಗೆ ಸುಪುತ್ರರಾಗಿ ಜನಿಸಿ ಬಹು ಕಷ್ಟಪಟ್ಟು ಎಂಜಿನಿಯರಿಂಗ್ ವಿದ್ಯಾಭ್ಯಾಸವನ್ನು ಮಾಡಿದರು. ತಂದೆಯವರ ಕಾಲದಿಂದಲೂ ಅವರದು ಸೇವಾಮಯ ಜೀವನ. ಕಳೆದ ನಾಲ್ಕು ದಶಕಗಳಿಂದ ಅವರ ಅವಿರತ ಸೇವಾ ಕಾರ್ಯ ನಡೆದಿದೆ, ನಡೆಯುತ್ತಿದೆ. ಅವರ ಈ ಬಹುಮುಖ ಸೇವೆಗಾಗಿ ನಮ್ಮ ಈ ಅಭಿವಂದನೆ. ಕಳೆದ ವರುಷವೇ ಈ ಕಾರ್ಯ ನಡೆಯಲು ಹವಣಿಕೆಯಾಗಿತ್ತು. ಇಂದು ಅದು ಆಗುತ್ತಿದೆ. ನಮ್ಮ ಈ ಸಂತೋಷದೊಂದಿಗೆ ಪಾಲುಗೊಳ್ಳಲು ಅನುಮತಿಸಿದ ಶ್ರೀ ಹೊ. ಶ್ರೀನಿವಾಸಯ್ಯನವರಿಗೆ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು. ಅಭಿನಂದನಾ ಸಮಾರಂಭದ ಅಂಗವಾಗಿ ಅಭಿನಂದನಾ

ಗ್ರಂಥವೊಂದನ್ನು ತರಲು ನಿಶ್ಚಯಿಸಿ ಅಭಿನಂದನಾ ಸಮಿತಿ ಕರೆನೀಡಿದ ಕೂಡಲೇ ತಮ್ಮ ಅಮೂಲ್ಯ ಲೇಖನಗಳನ್ನು ನೀಡಿದ ಎಲ್ಲ ಹಿರಿಯ ಕಿರಿಯ ಲೇಖಕರಿಗೂ ಸಂಪಾದಕರ ಪರವಾಗಿ ನನ್ನ ವಂದನೆಗಳು. ಈ ಕಾರ್ಯದಲ್ಲಿ ಹಲವಾರು ರೀತಿಯಲ್ಲಿ ಮಾರ್ಗ ದರ್ಶನ ನೀಡಿದ ಅಭಿನಂದನಾ ಸಮಿತಿಯ ಅಧ್ಯಕ್ಷ ಶ್ರೀ ಜಿ. ನಾರಾಯಣ ಅವರಿಗೆ ನನ್ನ ನಮಸ್ಕಾರಗಳು.

"ಸೇವಾಶ್ರೀ" ಎಂದು ಈ ಗ್ರಂಥಕ್ಕೆ ಹೆಸರಿಡಲಾಗಿದೆ. ಶ್ರೀ ಹೊ. ಶ್ರೀನಿವಾಸ ಯ್ಯನವರ ಸೇವಾ ಜೀವನವನ್ನು ಕುರಿತು ಅವರ ಅಭಿಮಾನಿಗಳು ಈ ಗ್ರಂಥದಲ್ಲಿ ಪ್ರಸ್ತಾಪಿಸಿರುವುದು ಗ್ರಂಥದ ಹೆಸರನ್ನು ಸಾರ್ಥಕಗೊಳಿಸಿದೆ ಎಂದು ನನ್ನ ಭಾವನೆ. ಇಷ್ಟೇ ಅಲ್ಲದೆ ಸ್ವತಃ ಶ್ರೀನಿವಾಸಯ್ಯನವರೇ ತಾವು ಕಂಡ ಬದುಕನ್ನು, ಸುತ್ತಲ ಸಮಾಜವನ್ನು ಸರಳ ಸುಂದರ ಶೈಲಿಯಲ್ಲಿ ಬರೆದು ಕೊಟ್ಟು ಉಪಕಾರ ಮಾಡಿದ್ದಾರೆ.

ಬೆಂಗಳೂರಿನ ಚಿತ್ರಾ ಪ್ರಿಂಟರ್ಸ್‌ನ ಮಾಲೀಕರು ಶ್ರೀ ಎನ್. ಎ. ಚಿದಂಬರ ಅವರು ಅತ್ಯಲ್ಪ ಅವಧಿಯಲ್ಲಿ ಗ್ರಂಥವನ್ನು ಅಂದವಾಗಿ ಮುದ್ರಿಸಿ ಕೊಟ್ಟಿದ್ದಾರೆ. ಅವರಿಗೆ ನನ್ನ ವಂದನೆಗಳು. ಮುಖಪುಟದ ವಿನ್ಯಾಸವನ್ನು ಬರೆದುಕೊಟ್ಟ ಕಮಲೇಶ್ ಅವರಿಗೂ ಈ ಗ್ರಂಥ ನಿರ್ಮಾಣದ ಕಾರ್ಯದಲ್ಲಿ ನೆರವಾದ ನೀಲತ್ತಹಳ್ಳಿ ಕಸ್ತೂರಿ, ಎಂ. ಶ್ರೀಧರ ಭಟ್, ಕೆ. ಹೆಚ್. ರಂಗಯ್ಯ, ರಾ. ತಿಮ್ಮೇಗೌಡ ಅವರಿಗೂ ನನ್ನ ಕೃತಜ್ಞತೆಗಳು.

ಇತಿ,

ಬೆಂಗಳೂರು
13-6-1982

**ಬೆ. ಗೋ. ರಮೇಶ್**
(ಸಂಪಾದಕರ ಪರವಾಗಿ)



# ಪರಿವಿಡಿ

## ENGLISH SECTION





ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು

**ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ**

**ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ, 571 417**

# ಹ ರ ಕೆ

ಶ್ರೀ ಹೊ. ಶ್ರೀನಿವಾಸಯ್ಯ ಅಭಿನಂದನಾ ಸಮಿತಿ, ಖಜಾಂಜಿ ಕೆ. ಎಚ್. ರಂಗಯ್ಯನವರಿಗೆ ಮಂಗಳಾಶೀರ್ವಾದಗಳು.

ನೀವು ಬರೆದ ಪತ್ರ ತಲುಪಿತು. ಶ್ರೀಯುತರಾದ ಹೊ. ಶ್ರೀನಿವಾಸಯ್ಯ ಶ್ರೀ ಆದಿಚುಂಚನಗಿರಿ ಮಹಾ ಸಂಸ್ಥಾನ ಮಠ ಬೆಂಗಳೂರು ಶಾಖಾ ಸಮಿತಿಯ ಸದಸ್ಯರು ಹಾಗೂ ಶ್ರೀ ಕ್ಷೇತ್ರದ ಅಭಿಮಾನಿಗಳು ಮತ್ತು ನಮ್ಮ ಪ್ರೀತಿಯ ಸೇವಾ ಕಾರ್ಯಕರ್ತರು.

ಶ್ರೀಯುತರ ಸರಳ ಸ್ವಭಾವ, ಸೌಮ್ಯಭಾವ, ಸೇವಾನಿಷ್ಠೆ ಸರ್ವಾಧರಣೀಯವಾಗಿದ್ದು, ಸದಾ ಸಮಾಜ ಸೇವೆಯ ಚಿಂತನೆಯೊಡನೆ ಹಿರಿಕಿರಿಯರೆಲ್ಲರನ್ನು ಆತ್ಮೀಯತೆಯಿಂದ ತಮ್ಮ ಚಿಂತನೆಯ ಕಾರ್ಯ ಫಲಪ್ರದ ಮಾಡಲು ಒಲಿಸಿಕೊಳ್ಳುವ ಅವರ ಜಾಣ್ಮೆ ಸ್ತುತ್ಯಾರ್ಹ. ಅವರ ಯಾವುದೇ ಕಾರ್ಯಕ್ಷೇತ್ರದ ಸರ್ವ ವ್ಯವಹಾರವೂ ಅವರು ಸ್ವತಃ ನಿಂತು ಮಾಡುತ್ತಿರುವುದೇ ಸುವ್ಯವಸ್ಥಿತ ಪೂರ್ಣತೆಗೆ ಕಾರಣವಾಗಿದೆ.

ಶ್ರೀಯುತರ ಸೇವೆಯನ್ನು ಸಮಾಜದ ಬುದ್ಧಿಜೀವಿಗಳೂ ವ್ಯವಹಾರ ಜ್ಞಾನಿಗಳು ಹಾಗೂ ಅಭಿಮಾನಿಗಳು ಗುರ್ತಿಸಿ ಗೌರವಿಸುತ್ತಿರುವ ವಿಚಾರ ನಮ್ಮಗೆ ಹೆಚ್ಚಿನ ಸಂತೋಷವನ್ನುಂಟುಮಾಡಿದೆ.

ಶ್ರೀ ಕ್ಷೇತ್ರದ ಶ್ರೀ ಕಾಲಭೈರವೇಶ್ವರ ಸ್ವಾಮಿ ಹಾಗೂ ಶ್ರೀ ಗಂಗಾಧರೇಶ್ವರ ಸ್ವಾಮಿ ಕೃಪೆಯಿಂದ ಶ್ರೀಯುತ ಹೊ. ಶ್ರೀನಿವಾಸಯ್ಯನವರ ಸಕಲಾಭೀಷ್ಟಗಳು ಸಿದ್ಧಿಸಿ ಆಯುರಾರೋಗ್ಯಾದಿ ಸಕಲ ಸನ್ಮಂಗಳ ಉಂಟಾಗಿ ಅವರ ಸೇವೆ ಸಮಾಜಕ್ಕೆ ಇನ್ನೂ ಹೆಚ್ಚಾಗಿ ದೀರ್ಘಕಾಲ ಸಿಗಲೆಂದು ತುಂಬು ಹೃದಯದಿಂದ ಹಾರೈಸುತ್ತೇವೆ.

ಇತಿ ಮಂಗಳಾಶೀರ್ವಾದಗಳು,

ಸಹಿ

ಕ್ಷೇತ್ರಾಧ್ಯಕ್ಷರು.



ಶ್ರೀ ಹೊನ್ನಪ್ಪ
(ಶ್ರೀನಿವಾಸಯ್ಯನವರ ತಂದೆ)



ಶ್ರೀಮತಿ ತಿಮ್ಮಮ್ಮ
(ಶ್ರೀನಿವಾಸಯ್ಯನವರ ತಾಯಿ)



ಶ್ರೀರಾಮ ಮಂದಿರದಲ್ಲಿ ತಂದೆಯವರ ಜೊತೆ ಹೊ. ಶ್ರೀನಿವಾಸಯ್ಯ
(1931)



ಎಳನೆಯ
ವಯಸ್ಸಿನಲ್ಲಿ
ಹೊ. ಶ್ರೀ
(1932)



ಕಾಲೇಜು ವಿದ್ಯಾರ್ಥಿ



ಬಿ.ಇ. ಪದವೀಧರ



ದಂಪತಿಗಳು



ಜರ್ಮನಿಗೆ
ಹೋಗುವ ಮುನ್ನ



ಬಿ.ಇ.ಎಂ.ಎಲ್. ಕಛೇರಿಯಲ್ಲಿ



ಜರ್ಮನಿಯ ಕಛೇರಿಯಲ್ಲಿ



ಹೊ. ಶ್ರೀ ಕುಟುಂಬ ವರ್ಗ—ಹೊ. ಶ್ರೀ ಪತ್ನಿ ಜಯಲಕ್ಷ್ಮಿ
ಮಂಜುಳ (ಅಕ್ಕನ ಮಗಳು), ತಾಯಿ, ಅಕ್ಕ ವೆಂಕಟಲಕ್ಷ್ಮಿ



ಗಾಂಧೀ ಸಾಹಿತ್ಯ ಸಂಘದ ಗೆಳೆಯರೊಂದಿಗೆ



ಶ್ರೀರಾಮ ಕೋ-ಆಪರೇಟಿವ್ ಬ್ಯಾಂಕಿನ ಹತ್ತನೆ ವರ್ಷದ ವಾರ್ಷಿಕೋತ್ಸವ
ಬ್ಯಾಂಕಿನ ಅಧ್ಯಕ್ಷ ಸಿದ್ದವನಹಳ್ಳಿ ಕೃಷ್ಣಶರ್ಮ, ಆಗಿನ ಮುಖ್ಯಮಂತ್ರಿ
ನಿಜಲಿಂಗಪ್ಪ, ಸಹಕಾರ ಸಚಿವ ರಾಮಕೃಷ್ಣ ಹೆಗಡೆ ಚಿತ್ರದಲ್ಲಿದ್ದಾರೆ (1963)



1951ರ ಕಾಂಗ್ರೆಸ್ ಅಧಿವೇಶನದಲ್ಲಿ ಪುರುಷೋತ್ತಮದಾಸ್ ಟಂಡನ್, ಜವಹರ್‌ಲಾಲ್ ನೆಹರೂ, ಕೆಂಗಲ್ ಹನುಮಂತಯ್ಯ, ಎ. ಜಿ. ರಾಮಚಂದ್ರ ರಾವ್, ವಿ. ಎಸ್. ಕೃಷ್ಣಯ್ಯರ್, ಎಸ್. ಎಸ್. ಹರ್ಡೀಕರ್ ಅವರುಗಳೊಡನೆ



ಶ್ರೀ ಬಾಲಗಂಗಾಧರನಾಥಸ್ವಾಮಿಯವರಿಗೆ ಪಾದಪೂಜೆ,
ಪತ್ನಿ, ಮಗಳು ಶಶಿಕಲಾರೊಡನೆ



ಬಿ. ಡಿ. ಜತ್ತಿಯವರೊಡನೆ ಪುಸ್ತಕ ಬಿಡುಗಡೆ ಸಂದರ್ಭ



ರಂಗ ಗಂಗೋತ್ರಿಯವರಿಂದ ಸನ್ಮಾನ. ಸಹಕಾರ ಸಚಿವ ಶ್ರೀಕಂಠಯ್ಯನವರು ಸನ್ಮಾನಿಸುತ್ತಿರುವುದು.

# ನಾ ಕಂಡ ಜಗತ್ತು

ಹೊ. ಶ್ರೀನಿವಾಸಯ್ಯ

### ಚೌದರಿಕೊಪ್ಪಲು

ಗೋಕುಲಾಷ್ಟಮಿ ವರ್ಷಕ್ಕೊಂದು ಸಾರಿ ಬರುತ್ತದೆ. ಸುಮಾರು ಐವತ್ತು ವರ್ಷಗಳ ಹಿಂದೆ ಅಯ್ಯಂಗಾರ್‍ರ ಮನೆಗಳಲ್ಲಿ ಇದು ಭಾರಿ ಹಬ್ಬ. ಆಗಿನ ಸಂಭ್ರಮ ವನ್ನು ಈಗ ಕಾಣಲಾರೆವು. ನಮ್ಮ ಮನೆಯಿಂದ ಐದಾರು ಮನೆಯಾಚೆ ನಮ್ಮ ತಂದೆ ಕೆಲಸ ಮಾಡುತ್ತಿದ್ದ ಯಜಮಾನರ ಮನೆ. ಅವರು ಅಯ್ಯಂಗಾರ್‍ರು. ಆಗ ನಾನಿನ್ನು ಚಿಕ್ಕವನು. ಒಂದು ಗೋಕುಲಾಷ್ಟಮಿ ಹಬ್ಬದಲ್ಲಿ ಆ ಮನೆ ಯಜಮಾನಿ ನನ್ನನ್ನು "ಕೂಸು, ಕೂಸು ಬಾರೋ ಇಲ್ಲಿ. ನಿನಗಷ್ಟು ಗೋಕುಲಾಷ್ಟಮಿ ತಿಂಡಿ ಕೊಡ್ತೀನಿ" ಎಂದು ಮನೆಮುಂದೆ ಹೋಗುತ್ತಿದ್ದಾಗ ಕೂಗಿ ಕರೆದರು. ನಾನು ಅವರ ಮನೆ ಮುಂದಿನ ಬಾವಿ ಬಳಿ ಹೋಗಿ ನಿಂತೆ. ಅವರು ಕೈಗಿಷ್ಟು ತಿಂಡಿ ಪ್ರೊಟ್ಟಣ ಹಾಕಿದರು. ನನಗಾದ ಸಂತೋಷ ಹೇಳತೀರದು. ಮನೆಗೆ ಬಂದು ನನ್ನ ತಾಯಿಗೆ ತೋರಿಸಿದೆ. ಹಳೇಕಾಲದ, ನನ್ನತಾಯಿ ಸಂತೋಷದಿಂದ ದೇವರ ಪ್ರಸಾದ ವೆಂದು ಕಣ್ಣಿಗೆ ಒತ್ತಿಕೊಂಡು ಮನೆಯಲ್ಲಿದ್ದವರಿಗೆಲ್ಲ ಹಂಚಿದರು. ನನಗೂ ಒಂದಷ್ಟು ಸಿಕ್ಕಿತು. ಸುಮಾರು ನಲವತ್ತು ಐವತ್ತು ವರ್ಷಗಳಲ್ಲಿ, ವಾತಾವರಣದಲ್ಲಿ ಎಷ್ಟು ಬದಲಾವಣೆಯಾಗಿದೆ ಎಂಬುದು ನನಗೆ ಕಾಣುತ್ತಿದೆ.

ಆ ಮಾತು ಹಾಗಿರಲಿ-ಕೂಸು ಎಂದೆನಲ್ಲ. ಇದು ನನ್ನ ತಾಯಿ ನನಗೆ ಇಟ್ಟ ಪ್ರೀತಿಯ ಹೆಸರು. ನಾನು ಮಿಡಲ್ ಸ್ಕೂಲ್ ಸೇರುವವರೆಗೂ ಮನೆಯಲ್ಲಿ ಹೊರ ಗಡೆ ಎಲ್ಲರೂ ನನ್ನನ್ನು ಹಾಗೆ ಕರೆಯುತ್ತಿದ್ದರು. ಕಾರಣವಿಷ್ಟೆ. ನನ್ನ ತಾಯಿಗೆ ಹನ್ನೆರಡು ಮಕ್ಕಳು. ಉಳಿದವರು ಮೂವರೇ. ಅದರಲ್ಲೂ ನಾನೊಬ್ಬನೆ ಗಂಡು ಮಗ. ಅದಕ್ಕಾಗಿ ಕೆಲವರುಷಗಳು ನನ್ನ ಹೆಸರು 'ಕೂಸು' ಎಂದೇಆಗಿತ್ತು.

ನಾನು ಹುಟ್ಟಿದ್ದು ಬೆಂಗಳೂರಿನಲ್ಲಿ. ನಮ್ಮ ತಂದೆ ಊರು ಚೌದರಿಕೊಪ್ಪಲು. ನಾಗಮಂಗಲ ತಾಲ್ಲೂಕು, ಈಗ ಮಂಡ್ಯ ಜಿಲ್ಲೆ. (ಹಿಂದೆ ಮೈಸೂರು ಜಿಲ್ಲೆಗೆ ಸೇರಿತ್ತು). ನನ್ನ ತಾಯಿ ಊರು ಪಕ್ಕದ ಅದಮಗೆರೆ. ಬೆಂಗಳೂರಿನಲ್ಲಿ ಹೆಚ್ಚು ಕಡಿಮೆ ಜವಾನನ ಕೆಲಸ, ಸೌದೆ ಒಡೆಯುವುದು, ಕೂಲಿಕೆಲಸ ಮಾಡುತ್ತಿದ್ದವರು

ನಾಗಮಂಗಲ ಹಾಗೂ ಕುಣಿಗಲ್ ತಾಲ್ಲೂಕಿನ ಜನ. ಈ ತಾಲ್ಲೂಕುಗಳಲ್ಲಿ ಮಳೆಯಾಗುತ್ತಿದ್ದುದು ದೇವರು ಕಣ್ಣುಬಿಟ್ಟಾಗ. ಐದಾರು ವರ್ಷಕ್ಕೊಂದು ಸಲ. ಮಳೆಬಂದರೆ ರಾಗಿ ಬೆಳೆಯೋರು. ಇಲ್ಲದಿದ್ದರೆ ಇಷ್ಟೇ ಇದೆ ಗೆಡ್ಡೆ ಗೆಣಸು. ಅದೂ ಸಿಕ್ಕದಿದ್ದರೆ ಹತ್ತಿರದ ನೆಂಟರನ್ನು ಹುಡುಕಿಕೊಂಡು ಹೋಗುವುದು. ತಮಗಾಗಿ ಅಲ್ಲದಿದ್ದರೂ ತಮ್ಮ ದನ, ಕರು, ಕುರಿ, ಕೋಳಿಗಳನ್ನು ಕಾಪಾಡುವುದಕ್ಕಾಗಿ. ಮನೆಯಲ್ಲಿ ಇಬ್ಬರೋ ಮೂವರೋ ಹೆಚ್ಚಾದರೆ ಒಬ್ಬ ಯಾವುದಾದರೂ ನಗರಕ್ಕೆ ಹೋಗಿ ಕೂಲಿ ಮಾಡುವುದು. ಹೊಟ್ಟೆಪಾಡು, ಹೋಗುತ್ತಿದ್ದರು. ಹೀಗೆ ಹೊಟ್ಟೆಯ ಸಲುವಾಗಿ ಬೆಂಗಳೂರಿಗೆ ಓಡಿಬಂದವರು ನಮ್ಮ ತಂದೆ. 'ಕೆಟ್ಟು ಪಟ್ಟಣ ಸೇರು' ಎನ್ನುತ್ತಾರೆ. ನಿಜವಾದ ಮಾತು. ಆದರೆ ಈಗ ಕೆಡೋರು ಪಟ್ಟಣ ಸೇರಬೇಕಷ್ಟೆ.

ನಮ್ಮೂರು ಚೌದರಿಕೊಪ್ಪಲು, ಸಣ್ಣಗ್ರಾಮ. ನಾನು ಸಣ್ಣವನಿದ್ದಾಗ ಇದ್ದದ್ದೆಲ್ಲಾ ಒಂದು ಏಳೆಂಟು ಮನೆ. ಈಗ ಇಪ್ಪತ್ತು ಮೂವತ್ತು ಮನೆಗಳಷ್ಟೆ ಇವೆ. ಚೌದರಿಕೊಪ್ಪಲು ನಾಗಮಂಗಲ ತಾಲ್ಲೂಕಿನ ದೇವಲಾಪುರದಿಂದ ಮೂರು ಮೈಲಿ ದೂರದ ತೂಬಿನಕೆರೆ ಗ್ರಾಮಕ್ಕೆ ಸೇರಿದ ಕೊಪ್ಪಲು. ಬೆಂಗಳೂರಿನಲ್ಲಿರುವ ಹಾಗೆ ನಮ್ಮ ಮನೆ ತಾರಸಿ ಮನೆಯಲ್ಲ. ಕಲ್ಲು ಮಣ್ಣಿನಿಂದ ಕಟ್ಟಿದ ಮನೆ. ಈಗ ಆ ಹಳೆ ಮನೆ ಇಲ್ಲವೂ ಇಲ್ಲ ಅನ್ನಿ. ಆ ಕಾಲದಲ್ಲಿ ಮನೆ ಕಟ್ಟೋದು ಕಲ್ಲು ಮಣ್ಣುಗಳಿಂದಲೇ. ಕಲ್ಲು ಹೇಗೆ ಹೊಡೆದರೆ ಹಾಗೆ. ಅದನ್ನೇ ಮಣ್ಣು ಕಲಸಿ ಹಾಕುವುದು ಅದರ ಮೇಲೆ ಮರದ ಕೊಂಬೆಯೋ ಬಿದಿರೋ ಹಾಕಿ ಮೇಲೆ ಮಣ್ಣು ಹಾಕಿದರೆ ಅದೇ ಮೇಲ್ಛಾವಣಿ. ವರ್ಷಕ್ಕೊಂದು ಸಲ ಹೊಸ ಮಣ್ಣುಹಾಕಿ ನೀರು ಸೋರದ ಹಾಗೆ ಮಾಡಿಕೊಳ್ಳುವುದು. ಮನೆ ಒಳಕ್ಕೆ ಹೋಗಬೇಕಾದರೆ ಒಂದು ದೊಡ್ಡ ಬಾಗಿಲು. ಮರದ ದಪ್ಪ ಹಲಗೆಯದ್ದು. ಆ ಬಾಗಿಲು ಹಾಕಿದರೆ ಹತ್ತುಜನ ಬಂದು ಒದ್ದರೂ ಅಲ್ಲಾಡುವಂತಿಲ್ಲ, ಅಂಥದು. ಒಳಗಡೆ ಹೋಗುತ್ತಿದ್ದಂತೆ ಕಾಣುತ್ತಿದ್ದುದು ದನ ಕರು ಕಟ್ಟಲು ಕೊಟ್ಟಿಗೆ. ಮನೆ, ಉದ್ದಕ್ಕೆ ಓಣಿ ಇದ್ದ ಹಾಗೆ. ಒಂದುಕಡೆ ಅಡಿಗೆ ಒಲೆ. ಅದಕ್ಕೆ ಸಣ್ಣ ಅಡ್ಡಗೋಡೆ, ಪಕ್ಕದಲ್ಲೆ ಮಡಿಕೆ ಸಾಲು, ಉಗ್ರಾಣದ ಮನೆ, ಮುಂದುಗಡೆ ಪಡಸಾಲೆ, ಅಲ್ಲೆ ಮಲಗುವುದು, ಮನೆಗೆ ಕಿಟಕಿಗಳೇ ಇಲ್ಲ, ಬದಲು ಬಾದಲ. ಅದೂ ಮೇಲ್ಛಾವಣಿಯಲ್ಲಿ. ಬಾದಲ ಅಂದರೆ ಮೇಲ್ಛಾವಣಿಯಲ್ಲಿ ಒಬ್ಬ ಮನುಷ್ಯ ಹೋಗಿ ಬರುವಷ್ಟು ರಂಧ್ರ. ಅಲ್ಲಿಂದಲೇ ಗಾಳಿ, ಬೆಳಕು ಬರಬೇಕು. ಮಳೆ ಬಂದರೆ ಅದನ್ನು ಮುಚ್ಚಲು ಒಡೆದ ಮಡಕೆ.

ನಮ್ಮೂರಿಗೆ ಬಸ್ಸಿಲ್ಲ. ದೇವರಹಳ್ಳಿಯವರೆಗೆ ಬಂದು ಅಲ್ಲಿಂದ ನಡೆಯಬೇಕು. ಊರೊಳಗೆ ಹೋಗುತ್ತಿದ್ದಂತೆ ಎದುರಾಗುವುದು ಮಾರಿಗುಡಿ, ಚಿಕ್ಕದು. ಸುತ್ತಲೂ ಒಂದುಕಟ್ಟೆ. ಸಂಜೆ ಹೊತ್ತಿನಿಂದು ಗ್ರಾಮದಜನ ಅಲ್ಲಿ ಕುಳಿತು ಹರಟೆ ಹೊಡೆಯುವರು. ಅಲ್ಲೆ ಕಂಬಳಿಹಾಸಿ ಮಲಗೋರು ಎಷ್ಟೋ ಜನ. ಮಾರಿಗುಡಿಯನ್ನು,

ಈಗ ಇರುವ ರೂಪಕ್ಕೆ ತಂದವರು ನಮ್ಮ ತಂದೆಯವರೇ ಅಂತೆ. ಶನಿವಾರ ಮಾರಿ ಗುಡೀಲಿ ಭಜನೆ. ಹುಡುಗರು ಕತ್ತಲಾದ ತಕ್ಷಣ ಸೇರುತ್ತಾರೆ. ಭಜನೆ ಅಲ್ಲ ಮುಖ್ಯ, ಚರ್ಪು. ಅಂದರೆ ಪ್ರಸಾದ. ಸರದಿಯಂತೆ ಒಂದೊಂದುವಾರ ಒಬ್ಬೊಬ್ಬರ ಪೂಜೆ. ಅವರೇ ದೀಪ ಹಚ್ಚುವುದು ಕೂಡ. ಕುಡಿಯಲು ನೀರು ಒದಗಿಸುವುದು ತೂಬಿನ ಕೆರೆಯ ಸಣ್ಣಕೆರೆ. ಅದರ ಪಕ್ಕದ ಸಣ್ಣಬಾವಿ. ಮಳೆಬಿದ್ದರೆ ಬೆಳೆ. ಇಲ್ಲದಿದ್ದರೆ ಬರ. ಜೀವನನವೇ ಕಷ್ಟ. ಇನ್ನು ಜಮೀನಿಲ್ಲದೆ ಬೇರೆ ಆಸ್ತಿ ಇಲ್ಲ. ಕಸಬೂ ಬೇರೆ ಇಲ್ಲ. ಮಳೆ ಏನಾದರೂ ಸರಿಯಾಗಿ ಆಗಿದ್ದರೆ ನಾನೂ ಒಬ್ಬ ರೈತ ನಾಗಿರುತ್ತಿದ್ದೆ. ಹೊಟ್ಟೆಪಾಡಿಗೆ ನಮ್ಮ ತಂದೆ ಹೊನ್ನಪ್ಪ ಬೆಂಗಳೂರಿಗೆ ಬಂದರು. ಆಗಿನ ಕಾಲದಲ್ಲಿ ಆಳುಕಾಳು ಇಟ್ಟುಕೊಳ್ಳುವವರು ಎಂದರೆ ಸರ್ಕಾರದಲ್ಲಿ ಅಧಿಕಾರ ದಲ್ಲಿದ್ದವರು, ಸರ್ಕಾರಿ ಕಛೇರಿಗಳಲ್ಲಿ. ನನಗೆ ತಿಳಿದಮಟ್ಟಿಗೆ ಆಗ ಇದ್ದುದು ಅಠಾರಾ ಕಛೇರಿ. ಈಗ ಅದು ಹೈಕೋರ್ಟು. ನಮ್ಮ ತಂದೆಗೆ ಅಠಾರಾಕಛೇರಿಯಲ್ಲಿ ಕೆಲಸ. ಕೆಲವರು ಅವರನ್ನು ಹೊನ್ನ ಎಂದು ಕರೆಯುತ್ತಿದ್ದರು. ಮತ್ತೆ ಕೆಲವರು ಹೊನ್ನೆಗೌಡ ಎನ್ನುತ್ತಿದ್ದರು.

## ಚೌದರಿಗೌಡರ ಊರು

ನಮ್ಮ ತಂದೆಗೆ ಸುಮಾರಾಗಿ ಕನ್ನಡ ಓದಲು ಬರುತ್ತಿತ್ತು. ಎರಡೋ ಮೂರನೇ ತರಗತಿಯವರೆಗೆ ಓದಿ ಶಾಲೆ ಬಿಟ್ಟಿದ್ದರು ಅಂತ ಕಾಣುತ್ತೆ. ಅವರ ತಂದೆ ತಿರುಮಲೇಗೌಡ. ನನ್ನ ಮುತ್ತಾತನ ಹೆಸರು ಚೌದರಿಗೌಡ, ವಿಚಿತ್ರ ಹೆಸರು. ಅವರೇ ಕಟ್ಟಿಸಿದ ಕೊಪ್ಪಲು ಚೌದರಿಕೊಪ್ಪಲು ಎನ್ನುತ್ತಾರೆ. ಚೌದರೀ ಎಂದು ಕೇಳಿದ ತಕ್ಷಣವೇ ಅನೇಕರು ಇದು ಬಂಗ್ಲಾದೇಶಕ್ಕೊ ಉತ್ತರ ಪ್ರದೇಶಕ್ಕೊ ಸೇರಿದ ಹಳ್ಳಿಯೇ ಎಂದು ನನ್ನನ್ನು ಪ್ರಶ್ನಿಸಿದವರು ಬಹಳಮಂದಿ. ನಾನೂ ಕೆಲವು ದಿವಸ ಎಚ್. ಎಸ್. ಚೌದರಿ ಎಂದು ಹೆಸರಿಟ್ಟುಕೊಳ್ಳಲು ಯೋಚಿಸಿದ್ದೆ. 'ನಿನ್ನನ್ನು ಬಂಗಾಳಿ ಅಂತ ತಿಳಿದಾರು ಹೆಸರು ಬದಲಾಯಿಸಬೇಡ' ಎಂದು ನನ್ನ ಸ್ನೇಹಿತರು ಹೇಳಿದಮೇಲೆ ಆ ಯೋಚನೆ ಬಿಟ್ಟೆ.

ಚೌದರಿಗೌಡರ ಹೆಸರು ಏನಿತ್ತೊ ನನಗೂ ಗೊತ್ತಿಲ್ಲ. ಹೊಟ್ಟೆಗಿಲ್ಲದೆ ಮೈಸೂರಿಗೆ ಹೋಗಿ ಅರಮನೆಯಲ್ಲಿ ಕೆಲಸಕ್ಕೆ ಸೇರಿದರಂತೆ. ಅವರ ಹೆಸರು ಕರಿ ಗೌಡನೊ, ಹನುಮಂತಗೌಡನೆಂದೊ ಇದ್ದಿರಬಹುದು. ಅರಮನೆಯಲ್ಲಿ ಚೌದರಿ ಕೆಲಸ ಸಿಕ್ಕಿತಂತೆ. ಹಾಗೆಂದರೆ ಏನು ಕೆಲಸ ಎಂದು ನನಗೆ ತಿಳಿಯದು. ಒಳ್ಳೆ ಸಂಪಾದನೆ ಮಾಡಿ ಊರಿಗೆ ವಾಪಸ್ಸಾದರು. ಜರತಾರಿ ರುಮಾಲುಧರಿಸಿ ಡವಾಲಿ, ಜಟ್ಟಿ ಗಂಟೆ, ಚಿನ್ನದ ನಾಣ್ಯಗಳ ಚೀಲಹೊತ್ತು ಕುದುರೆ ಏರಿ ಅವರು ಹಳ್ಳಿಗೆ ವಾಪಸ್ಸಾದಾಗ ಮಹಾರಾಜರು ಬರುತ್ತಿದ್ದಾರೆ ಎಂದು ಹೆಂಗಸರು ಮಕ್ಕಳು ಬೀದಿ ಯಲ್ಲಿ ಬಂದು ಕಾಯುತ್ತಾ ನಿಂತಿದ್ದರಂತೆ. ಬರುವಾಗ ದೇವಲಾಪುರದ ಮೇಲೆ

ಬಂದು ಗ್ರಾಮದೇವತೆ ಪಟ್ಟಲದಮ್ಮನ ದರ್ಶನ ಪಡೆದು ಗೌಡರು ತಮ್ಮ ಸ್ವಂತ ಊರಿಗೆ ಹೋಗದೆ ಅವರ ತಂದೆಗೆ ಸೇರಿದ್ದ ಜಮೀನಿನಲ್ಲಿ ಕುದುರೆ ನಿಲ್ಲಿಸಿ ಅಲ್ಲೇ ಒಂದು ಗುಡಿಸಲು ಕಟ್ಟಿಕೊಂಡರಂತೆ. ಅಲ್ಲೇ ಸಂಸಾರ, ಮಕ್ಕಳುಮರಿ ಎಲ್ಲ. ಅವರಿಗೆ ನಾಲ್ಕು ಜನ ಮಕ್ಕಳು. ಅವರಲ್ಲಿದ್ದ ಹಣದಿಂದ ಊರಿನ ಅರ್ಧ ಜಮೀನು ಕೊಂಡುಕೊಂಡರು. ಇದ್ದಿದ್ದು ಒಂದೇ ಮನೆ ಆದರೂ ಅದನ್ನು ಕೊಪ್ಪಲು ಅಂತ ಕರೆಯುತ್ತಿದ್ದರು. ಬಂದು ಹೋಗುವರೆಲ್ಲ ಮನೆನೋಡಿ 'ಯಾರದಯ್ಯ ಮನೆ, ಊರಾಚೆ ಬಂದು ಮನೆ ಕಟ್ಟಿದನಲ್ಲಾ' ಅಂತ ಹೇಳುತ್ತಿದ್ದರು. ಕ್ರಮೇಣ ಗೌಡನ ಮನೆ ಚೌದರಿಗೌಡರ ಮನೆ ಎಂದೂ ಚೌದರಿಕೊಪ್ಪಲು ಎಂದೂ ಕರೆಯಿಸಿಕೊಂಡಿತು. ಸುತ್ತಲ ಪ್ರದೇಶಕ್ಕೆಲ್ಲ ಇವರೇ ಸಾಹುಕಾರರು.

ಚೌದರಿಗೌಡರಮನೆ ಮಾದನಹಳ್ಳಿಗೂ ತೂಬಿನಕೆರೆಗೂ ಮಧ್ಯೆ ಇರೋದು. ಹೋಗಿ ಬರೋರ್ಗೆಲ್ಲ ಅದೇ ದಾರಿ. ಗೌಡರ ಅರಮನೆ ಸಂಪಾದನೆ ಖರ್ಚಾಗುವುದು ಹೇಗೆ. ಊರಿಗೆ ದೊಡ್ಡಗೌಡ ಎನಿಸಿಕೊಳ್ಳೋದು ಹೇಗೆ? ಕೂತುತಿನ್ನುವ ಹಣ ಎಷ್ಟು ದಿನ ಬಂದೀತು? ಮಕ್ಕಳಾದ ತಿರುಮಲೇಗೌಡ ಇತರರು ಸಾಮಾನ್ಯ ರೈತರಾದರು. ತಿರುಮಲೇಗೌಡರಿಗೆ ಮೂರು ಗಂಡುಮಕ್ಕಳು. ಮೂರು ಹೆಣ್ಣು ಮಕ್ಕಳು. ಮಧ್ಯದವನೇ ಹೊನ್ನಪ್ಪ. ಮೂವರು ಹೆಣ್ಣುಮಕ್ಕಳಿಗೂ ಮದುವೆಯಾಯಿತು. ಉಳಿದ ಮೂವರು ಗಂಡುಮಕ್ಕಳಲ್ಲಿ ಸ್ವಲ್ಪಮಟ್ಟಿಗೆ ಚುರುಕು ಎನಿಸಿದ್ದ ಹೊನ್ನಪ್ಪ, ನಮ್ಮ ತಂದೆ. ಈಗ ಚೌದರಿಕೊಪ್ಪಲು ಇಪ್ಪತ್ತೆರಡು ಮನೆಗಳ ಸಣ್ಣ ಊರು. ಅಲ್ಲಿ ಎಲ್ಲರೂ ರೈತರೇ. ಊರಿನ ವಾತಾವರಣದಲ್ಲಿ ಏನೂ ಬದಲಾವಣೆ ಇಲ್ಲ. ಕೆಲವು ಮನೆಗಳಲ್ಲಿ ಸಣ್ಣ ಕಿಟಕಿಗಳು ಕಾಣುತ್ತವೆ. ಮಂಗಳೂರು ಹೆಂಚು, ಸಿಮೆಂಟು, ಕಬ್ಬಿಣ ಇವುಗಳನ್ನು ಇನ್ನೂ ಈ ಮನೆಗಳು ಕಂಡಿಲ್ಲ. ಮಾರೀಗುಡಿಯೇ ಗೆಸ್ಟ್‌ಹೌಸ್. ಗಿಡಮರಗಳ ಅಡಿಯೇ ಶೌಚಗೃಹ.

## ಆದಮಗೆರೆ

ಚೌದರಿಕೊಪ್ಪಲಿನಿಂದ ಒಂದೂವರೆ ಕಿಲೋಮೀಟರಿಗೆ ಆದಮಗೆರೆ, ನನ್ನ ತಾಯಿ ತಿಮ್ಮಮ್ಮನವರ ಊರು. ದೊಡ್ಡ ಕುಟುಂಬದಲ್ಲಿ ಬಂದವರು. ಏನಿಲ್ಲ ಎಂದರೂ ಮನೆಯಲ್ಲಿ ನಲವತ್ತೈದು ಜನ ಊಟಕ್ಕಿರುತ್ತಿದ್ದರು. ಅವರ ತಂದೆ ವೈದ್ಯರಂತೆ. ನನ್ನ ತಾಯಿ ಹಸಿರು ಔಷಧಿ, ಅಡಿಗೆಮನೆ ಔಷಧಿ ಏನಾದರೂ ಹೇಳುತ್ತಿದ್ದರೆ 'ಇದನ್ನೆಲ್ಲ ಯಾರು ಕಲಿಸಿದರು' ಎಂದು ಕೇಳುತ್ತಿದ್ದೆ. "ನಮ್ಮ ತಂದೆ ದೊಡ್ಡ ವೈದ್ಯರು. ಅವರಿಂದಲೇ ಎಲ್ಲ ಕಲಿತೆ" ಎಂದು ಹೇಳುತ್ತಿದ್ದರು. ನನ್ನ ತಾಯಿ ಸಂಸಾರ ಹೂಡಿದ್ದು ತಮ್ಮ ಹದಿಮೂರನೆ ವಯಸ್ಸಿನಲ್ಲಿ. ಶಾಲೆ ಮುಖ ನೋಡಿರಲಿಲ್ಲ. ನಮ್ಮ ತಂದೆಯವರಿಗೆ ನನ್ನ ತಾಯಿಯ ಅಕ್ಕ ಹಿರಿಯ ಹೆಂಡತಿ. ಕಾಯಿಲೆಯಾಗಿ ತೀರಿಕೊಂಡರು. ಚಿಕ್ಕ ವಯಸ್ಸಿನಲ್ಲೇ ನನ್ನ ತಾಯಿಯವರನ್ನ

ಮದುವೆಯಾದರು. ಮನೆಗೆ ಬಂದವರಿಗೆಲ್ಲ ಬೆಳಿಗ್ಗೆ ರೊಟ್ಟಿ, ಮಧ್ಯಾಹ್ನ ಹಿಟ್ಟು, ಸಂಜೆ ಊಟ ಆಗಲೇಬೇಕು. ನನ್ನ ಸೋದರಮಾವ ಊಟಕ್ಕೆ ಕುಳಿತುಕೊಳ್ಳ ಬೇಕಾದರೆ ಇಲ್ಲ ರೊಟ್ಟಿ ತಿನ್ನಬೇಕಾದರೆ ಮೊದಲು "ಲೋ ಯಾರೋ ಅಲ್ಲಿ? ಬಸವನಗುಡಿ ಹತ್ತಿರ ಯಾರಾದರೂ ಬಂದವರ ನೋಡೋ. ಇದ್ದರೆ ಊಟಕ್ಕೆ ಕರೆದುಕೊಂಡು ಬಾ" ಎಂದು ಹೇಳಿ ಕಳುಹಿಸುತ್ತಿದ್ದರು. ಹಾಗೆ ನಡೆಸುತ್ತಿದ್ದರು. ಊರಿನಲ್ಲಿ ಯಾರಾದರೂ ಬ್ರಾಹ್ಮಣರು ಬಂದರೆ ಅವರಿಗೆ ಅಕ್ಕಿ, ಸೊಪ್ಪು, ಕಾಳು ಗಳನ್ನು ಹಾಗೂ ಹಾಲುಕೊಟ್ಟು ಊರ ಮುಂದಿನ ಮರದ ನೆರಳಿನಲ್ಲಿ ಅಡಿಗೆ ಮಾಡಿ ಕೊಂಡು ಊಟ ಮಾಡಲು ಹೇಳುತ್ತಿದ್ದರು. ಇಂತಹ ಸಿರಿಮನೆಯಿಂದ ಬಂದ ನನ್ನ ತಾಯಿ ಮನೆಗೆ ಬಂದವರಿಗೆಲ್ಲ ಆತಿಥ್ಯ ಮಾಡುತ್ತಿದ್ದುದು ಸ್ವಾಭಾವಿಕವೇ.

## ಬೆಂಗಳೂರಿಗೆ ಬಂದುದು

ನಮ್ಮ ತಂದೆ ಬೆಂಗಳೂರಿಗೆ ಬಂದುದು ಯಾವಾಗಲೋ ತಿಳಿಯದು. ನನ್ನ ತಾಯಿ ಹೇಳುತ್ತಿದ್ದಂತೆ 1895ರ ಸುಮಾರಿಗೆ ಬಂದಿರಬೇಕು. ಈಗಿರುವ ನಮ್ಮ ಮನೆ ನಿವೇಶನ ತೆಗೆದದ್ದು 1901 ಅಥವಾ 1903ರಲ್ಲೋ ಇರಬಹುದು. ಆಗ 30 x 100 ಅಡಿ ಸೈಟಿಗೆ ಇದ್ದ ಬೆಲೆ ಕೇವಲ 30 ರೂಪಾಯಿ. ಸೈಟಿನ ಎದುರಿಗೆ ದೊಡ್ಡಹಳ್ಳ ಈಗ ಅಲ್ಲಿ ಮಾಧ್ಯಮಿಕ ಶಾಲೆ ಇದೆ. ಆ ಕಡೆ ಪಕ್ಕಕ್ಕೆ ಬೂದಿಹಳ್ಳ. ಅದು ಈಗ ಆಟದ ಮೈದಾನ ಆಗಿದೆ. ಈಗಿನ ಕೆ. ಸಿ. ಜನರಲ್ ಆಸ್ಪತ್ರೆಯ ಸ್ಥಳ ದೊಡ್ಡ ಮಾವಿನತೋಪು. ಪಕ್ಕದಲ್ಲಿ ದೊಡ್ಡಹಳ್ಳ. ಮನೆ ಬಾಗಿಲಿಗೆ ಬೇಕಾದ ಮರವನ್ನು ಹಳ್ಳಿಯಿಂದಲೇ ತಂದರು. ಛಾವಣಿಗೆ ಬೇಕಾದ ಮರವನ್ನು ತಂದು ಒಂದು ಮೂಲೆಯಲ್ಲಿ 10 x 20 ಅಡಿ ಅಗಲದ ಮೂರು ಮನೆ ಕಟ್ಟಿಸಿ ಹೆಂಚು ಹೊದಿಸಿದರು. ಒಂದರಲ್ಲಿ ತಾವು ಇದ್ದು ಇನ್ನು ಎರಡು ಮನೆಗಳನ್ನು ಬಾಡಿಗೆಗೆ ಕೊಟ್ಟಿದ್ದರು. ಬಾಡಿಗೆ ನಾಲ್ಕಾಣೆ. ಈ ಮನೆಗಳನ್ನು ಕಟ್ಟುವಾಗ ನನ್ನ ತಂದೆ ತಾಯಿಗಳು ಕೂಲಿಯವರಂತೆ ಕೆಲಸ ಮಾಡಿದರು. ನಾನು ವಿದ್ಯಾವಂತನಾಗಿ ಕೆಲಸಕ್ಕೆ ಸೇರುವವರೆಗೂ ನನ್ನ ತಾಯಿ ಅಗತ್ಯಬಿದ್ದಾಗಲೆಲ್ಲ ಮನೆ ರಿಪೇರಿ ಹಾಗೂ ಸುಣ್ಣಬಣ್ಣ ಹೊಡೆಯುವ ಕೆಲಸ ತಾವೇ ಮಾಡುತ್ತಿದ್ದರು.

ನಮ್ಮ ತಂದೆ ಆಗಿನ ದಿವಾನರು, ಕೌನ್ಸಿಲರ್‌ಗಳು ಮತ್ತು ಸರ್ಕಾರದ ಕಛೇರಿಗಳು ಇದ್ದ ಅಠಾರಕಛೇರಿಯಲ್ಲಿ ದಫೇದಾರ್ ಆಗಿದ್ದರು. ಅದಕ್ಕೆ ಮೊದಲು ಕೌನ್ಸಿಲರೊಬ್ಬರ ಮನೆಯಲ್ಲಿ ಜವಾನನ ಕೆಲಸ ಮಾಡುತ್ತಿದ್ದರು. ನನಗೆ ತಿಳಿವಳಿಕೆ ಬರುವ ಹೊತ್ತಿಗೆ ಬಡ್ತಿ ಸಿಕ್ಕಿ ದಫೇದಾರ್ ಆಗಿದ್ದರು. ಆಮೇಲೆ ಜಮೇದಾರ ರಾದರು. ನಮ್ಮ ಹಳ್ಳಿಯ ನೆಂಟರಿಗೆಲ್ಲ ನಮ್ಮ ತಂದೆ ಜಮೇದಾರ ಆಗಿದ್ದ ಒಂದು ದೊಡ್ಡ ಗೌರವ. ಜವಾನರಿಗೆಲ್ಲ ಹಿರಿಯುವರೆನಿಸಿದ್ದರಲ್ಲವೇ? ಬೆಳ್ಳಿಕೋಲು, ಒಂದು ಡವಾಲಿ, ಮೇಲೆ ಒಂದು ಪದಕ. ಯಾರ ಬಳಿ ಕೆಲಸ ಮಾಡುತ್ತಿದ್ದರೆಂಬುದ

ಸೂಚಕ ಪದಕ. ಎಲ್ಲ ಜವಾನರಿಗೂ ಬಿಳಿಕೋಟು. ಜಮೇದಾರರಿಗೆ ಕೆಂಪು ಕೋಟು, ಜರತಾರಿಪೇಟ. ಕಾಲುಮಾತ್ರ ಬರಿಯದು, ಚಪ್ಪಲಿ ಇಲ್ಲ. ಯಜಮಾನರ ಮುಂದೆ ಚಪ್ಪಲಿ ಹಾಕಿಕೊಂಡು ಓಡಾಡಬಹುದೆ ? ಈ ಗೌರವಯುತ ಕೆಲಸದಲ್ಲಿದ್ದುದರಿಂದ ಅವರನ್ನು ಜಮೇದಾರ್ ಹೊನ್ನಪ್ಪ ಎನ್ನುತ್ತಿದ್ದರು.

ನಮ್ಮ ತಂದೆಯವರ ಬಳಿಗೆ ಅನೇಕರು ಕೆಲಸ ಗಿಟ್ಟಿಸಲು ಬರುತ್ತಿದ್ದರು. ಯಾವ ಆಫೀಸಿನವರನ್ನಾದರೂ ಇವರು ನೋಡಬಹುದಾಗಿತ್ತು. ದಿವಾನರ ಜಮೇದಾರ, ಕೌನ್ಸಿಲರ್ ಬಳಿ ಜಮೇದಾರ ಎಂದು ಎಲ್ಲ ಅಧಿಕಾರಿಗಳ ಗೌರವಕ್ಕೆ ಪಾತ್ರವಿರುತ್ತಿದ್ದರು.

**ಕೆಲಸ ಕೊಡಿಸಲು ಬ್ರಿಟಿಷ್ ಅಧಿಕಾರಿಗೆ ಮೊರೆ**

ನಮ್ಮ ತಂದೆ ಮಾತು ಬಹಳ ಜೋರು, ಜಬರ್ದಸ್ತು. ಕೆಲಸ ಕೊಡಿಸೆಂದು ಕೇಳಲು ಬಂದವರನ್ನು "ಹೋಗೊ, ನಿನಗ್ಯಾಕೊ ಕೆಲಸ. ಹೊಲ, ಗದ್ದೆ ಉಳ್ಕೋಗು" ಎನ್ನುತ್ತಿದ್ದರು. ಊಟಹಾಕಿಸಿ ಮಲಗೆಂದು ಹೇಳಿ ಮಾರನೆದಿನ ಯಾರಾದರೂ ಸಾಹೇಬರನ್ನು ಹಿಡಿದು ಕೆಲಸ ಕೊಡಿಸುತ್ತಿದ್ದರು. ಒಮ್ಮೆ ಹೀಗಾಯಿತು, ಎಸ್. ಎಸ್. ಎಲ್. ಸಿ., ಮಾಡಿದ ಒಬ್ಬ ಹುಡುಗ ಬಂದು ಗುಮಾಸ್ತರ ಕೆಲಸ ಕೊಡಿಸಿರೆಂದು ಕೇಳಿಕೊಂಡ.

"ಜವಾನನ ಕೆಲಸವಾದರೆ ಕೊಡಿಸಬಹುದು, ನೀನೋ ಓದಿದ್ದಿ, ಎಲ್ಲೋ ಕೆಲಸಕೊಡಿಸೋದು" ಎಂದರು ನಮ್ಮ ತಂದೆ.

ಅವನದು ಒಂದೇ ಹಠ. ಕಾಲು ಹಿಡಿದೇಬಿಟ್ಟ.

ಒಬ್ಬ ಇಂಗ್ಲೀಷಿನವ ಆಗಿನ ವಿದ್ಯುಚ್ಛಕ್ತಿ ಅಧಿಕಾರಿ ಆಗಿದ್ದ. ಅವರ ಬಳಿ ಆ ಹುಡುಗನನ್ನು ಕರೆದುಕೊಂಡು ಹೋದರು. ಉದ್ದಕ್ಕೆ ಅವನಿಗೆ ಅಡ್ಡಬಿದ್ದರು.

ಬ್ರಿಟಿಷ್ ಅಧಿಕಾರಿ ಇಂಗ್ಲೀಷಿನಲ್ಲಿ ಕೇಳಿದ.

'What is this ? What do you want ?"

ಎದ್ದು ನಿಂತು ನಮ್ಮ ತಂದೆ ಎರಡೂ ಕೈಮುಗಿದು

"ಸಾಹೇಬರ, ಇವನು ನನ್ನ ತಂಗಿ ಮಗ, ಓದಿದ್ದಾನೆ. ಏನಾದರೂ ಬರಿಯೋ ಕೆಲಸಕೊಡಿ. ನಮ್ಮ ಹಳ್ಳೀಲಿ ಮಳೆಬೆಳೆ ಇಲ್ಲ. ಈ ಹುಡುಗ ಏನು ಮಾಡೋದು ? ಜವಾನನ ಕೆಲ್ಸಕೊಡಿಸಾನ ಅಂದ್ರೆ ಓದಿಬಿಟ್ಟವ್ನೆ" ಎಂದು ಅಂಗಲಾಚಿದರು.

ಇಂಗ್ಲೀಷಿನವನಿಗೆ ಏನೂ ಅರ್ಥವಾಗದಿದ್ದರೂ ತನ್ನ ಕಾರ್ಯದರ್ಶಿಯನ್ನು ಕರೆದು "ಈ ಹೊನ್ನನಿಗೆ ಏನುಬೇಕೊ ಮಾಡಿಕೊಡು" ಎಂದ. ಹುಡುಗನಿಗೆ ಗುಮಾಸ್ತನ ಕೆಲಸಸಿಕ್ಕಿತು.

ಆಗಿನ ಕಾಲಕ್ಕೆ ಜಮೇದಾರರಿಗೆ ಅಷ್ಟು ಶಕ್ತಿ. ಈಗ ನಾನೂ ಒಬ್ಬ ದೊಡ್ಡ ಅಧಿಕಾರಿ. ನನ್ನಕೈಲಿ ಒಬ್ಬರಿಗೂ ಒಂದು ಕೆಲಸ ಕೊಡಿಸಲಾಗದು. ಎಷ್ಟೋಸಾರಿ

ಹಲವಾರು ಕಛೇರಿಗಳಿಗೆ ಹೋದಾಗ ಅನೇಕ ಜವಾನರು ನಮ್ಮ ತಂದೆ ಹೆಸರು ಕೇಳಿದ ತಕ್ಷಣ ಕೈಮುಗಿದು "ನಿಮ್ಮ ತಂದೇನೇಪ್ಪ ಅನ್ನ ಕೊಟ್ಟೋರು" ಎನ್ನುವುದನ್ನು ನೋಡಿದ್ದೇನೆ.

**ಸತ್ಯಪರೀಕ್ಷೆ**

ಒಮ್ಮೆ ಸಾಹೇಬರೊಬ್ಬರ ಮನೆಯಲ್ಲಿ ಜವಾನನ ಕೆಲಸ ಮಾಡುತ್ತಿದ್ದರು ನಮ್ಮ ತಂದೆ. ಒಂದುದಿನ ಮನೆಕಸ ಗುಡಿಸುವಾಗ ಒಂದು ಕೆಂಪುಹುಳ ಸಿಕ್ಕಿತು. ಸ್ವಲ್ಪ ಗಾಬರೀನೆ ಆಯಿತು. ಯಾವತ್ತೂ ನೋಡಿರಲಿಲ್ಲ. ಪಳಪಳನೆ ಹೊಳೆಯುತ್ತಿತ್ತು ಬೇರೆ. ಸಾಹೇಬರು ಪಕ್ಕದ ಕೊಠಡಿಯಲ್ಲಿದ್ದರು. ಪೇಪರ್‌ಮೇಲೆ ಹುಳಹಾಕಿ ಕೊಂಡು ಸಾಹೇಬರಿಗೆ ತೋರಿಸಿದರು ನಮ್ಮ ತಂದೆ.

"ಬುದ್ಯೋರ, ಇದ್ಯಾವುದೋ ಕೆಂಪುಹುಳ ಹೊಳೀತದೆ, ದುಂಡಗೈತೆ. ಎಂತಾದ್ದು ಸಾವ್ಯೋರ ಇದು" ಎಂದು ಕೇಳಿದರು.

"ಸರಿ, ಅದನ್ನಲ್ಲಿಟ್ಟು ಕೆಳಗಡೆ ಹೋಗಿ ಇಸ್ತ್ರಿಮಾಡಿರೋ ಬಟ್ಟೆ ತಗೊಂಡುಬಾ" ಎಂದರು ಸಾಹೇಬರು.

ಪೂರಕೆ ಅಲ್ಲಿ ಬಿಸಾಡಿ ಮಡಿ ಮಾಡಿಟ್ಟಿರೊ ಬಟ್ಟೆ ತಂದುಕೊಟ್ಟರು. ಅಷ್ಟರಲ್ಲಿ ಕೆಂಪುಹುಳುವನ್ನು ಪೇಪರಿನಲ್ಲಿ ಸುತ್ತಿಟ್ಟಿದ್ದರು. ಅದನ್ನು ಬಟ್ಟೆಗಳ ಜೊತೆಗೆ ಇಟ್ಟರು.

ಎಂಟು ದಿನಗಳಾಯಿತು, ಅವರ ಹೆಂಡತಿ ಒಂದುದಿನ

"ಏನೂಂದ್ರೆ, ನನ್ನ ಕೆಂಪೋಲೆ ಹರಳು ಎಲ್ಲೂ ಇಲ್ಲ. ಯಾರೋ ಜವಾನರು ತಗೊಂಡಿದಾರೆ, ಇನ್ಯಾರು ಹೊನ್ನನೇ" ಎಂದರು. ಸಾಹೇಬರಿಗೆ ಸಿಟ್ಟುಬಂತು, ಆಗೆಲ್ಲ ಸವಾರಿಗೆ ಬಳಸುತ್ತಿದ್ದುದು ಕುದುರೆಗಾಡಿ. ನಮ್ಮ ತಂದೆಯನ್ನು ಕರೆದು

"ಲೋ, ಅಲ್ಲಿ ಚಾವಟಿ ಇದೆಯಲ್ಲ ಕುದುರೇದು, ತಗೊಂಡು ಬಾ" ಎಂದು ಗುಡುಗಿದರು.

ನಮ್ಮ ತಂದೆ ಮಾತನಾಡದೆ ತಂದುಕೊಟ್ಟರು.

"ಏನೋ ನಂಬಿಕೆಯಿಂದ ನಿನ್ನ ಮನೇಲಿಟ್ಟುಕೊಂಡು ಮನೆ ಜವಾಬ್ದಾರಿ ಕೊಟ್ಟರೆ ನೀನು ಅವ್ಮ್ಮಾವ್ರ ಓಲೆ ಕದಿಯೋದೆ. ಏನು ಮಾಡಿದೆ, ಎಷ್ಟಕ್ಕೆ ಮಾರಿದೆ. ಇಲ್ಲದಿದ್ದರೆ ಎಲ್ಲಾದರೂ ತೆಗೆದಿಟ್ಟಿದ್ದೀಯಾ. ಹೇಳದಿದ್ದರೆ ಚರ್ಮ ಸುಲಿದುಬಿಡ್ತೇನೆ. ಜೈಲಿಗೆ ಹಾಕಿಸ್ತೇನೆ" ಎಂದರು ಸಾಹೇಬರು.

ನಮ್ಮ ತಂದೆಗೆ ಏನೂ ಹೇಳಲು ತಿಳಿಯಲಿಲ್ಲ. ಕಣ್ಣೀರು ಸುರಿಸಿದರು, ಬೆವರಿದರು. ಕಳ್ಳತನ ಕಂಡಿಲ್ಲ.

"ಪ್ರಭೂ, ನಾನು ಓಲೆ ನೋಡಿ ಇಲ್ಲ. ತಗೊಂಡೂ ಇಲ್ಲ. ನಿರಪರಾಧಿ. ನಿಮ್ಮ ಸೇವೆ ಒಂದೇಸಾಕು. ಓಲೆ ತಗೊಂಡು ಏನುಮಾಡಲಿ" ಎಂದು ಅಡ್ಡ ಬಿದ್ದರು.

ಸಾಹೇಬರು ಗತ್ತಿನಿಂದ.

"ಏಳೋ ಮೇಲೆ. ನಾಟಕಜೇರಿ ಆಡ್ತೀಯಾ ? ನಿಮ್ಮಂತೋರನ್ನ ನಂಬಿದರೆ ಮನೇನೆ ಸೂರೆಮಾಡಿಬಿಡ್ತೀರಾ. ಹುಂ. ಆದಿನ ಮಡಿಮಾಡಿಟ್ಟ ಬಟ್ಟೆ ತಂದಿದ್ಯಲ್ಲ ಅದರಲ್ಲಿ ನನ್ನ ರುಮಾಲಿನ ಬಟ್ಟೆ ಇದೆ ತಗೊಂಡುಬಾ. ನಾನು ಕಛೇರಿಗೆ ಹೋಗಬೇಕು. ಹೊತ್ತಾಗುತ್ತೆ" ಎಂದರು.

ನಮ್ಮ ತಂದೆ ಒಡನೆಯೇ ಇಸ್ತ್ರಿಮಾಡಿದ ಬಟ್ಟೆ ಜೊತೆ ಇದ್ದ ರುಮಾಲುಬಟ್ಟೆ ತಂದುಕೊಟ್ಟರು. ಸಾಹೇಬರಿಗೆ ಪೇಟ ಯಾವಾಗಲೂ ನಮ್ಮ ತಂದೆಯೇ ಕಟ್ಟಿಕೊಡುತ್ತಿದ್ದರು.

'ಬುದ್ಧಿ, ಪೇಟ ಕಟ್ಟಿಕೊಡ್ತೀನಿ' ಎಂದರು.

"ನೀನು ಕಟ್ಟೋದುಬೇಡ, ಮಾತಾಡೋದು ಬೇಡ." ಎಂದವರೇ ಪೇಟದ ಬಟ್ಟೆಯಲ್ಲಿ ಮಡಿಚಿಟ್ಟಿದ್ದ ಕಾಗದ ತೆಗೆದು ಆದಿನ ನಮ್ಮ ತಂದೆಕೊಟ್ಟ ಹುಳವನ್ನು ಹೆಂಡತಿಗೆ ತೋರಿಸಿದರು.

"ಈ ಕೆಂಪುತಾನೆ ನಿನ್ನ ಓಲೆಯಲ್ಲಿಲ್ಲ" ಎಂದರು. ಸಾಹೇಬರ ಹೆಂಡತಿಗೆ ಗಾಬರಿಯಾಯಿತು.

"ನೋಡು, ಹೊನ್ನನಿಗೆ ಈ ಕೆಂಪು ಮುತ್ತು ಅನ್ನೋದು ತಿಳಿಯದು. ಕಸ ಗುಡಿಸುವಾಗ ಹುಳ ಸಿಕ್ತು ಎಂದು ತಂದುಕೊಟ್ಟ. ಕಳ್ಳತನ ಆಗಿದೆ ಎಂದೆ. ಹೇಳು ಈಗ ಯಾರು ಕಳ್ಳರು ?" ಎಂದರು ಸಾಹೇಬರು. ಈ ಘಟನೆಯಿಂದ ನಮ್ಮ ತಂದೆ ಗಾದ ಸಂತೋಷ ಹೇಳತೀರದು. ಈ ಕಥೆಯನ್ನು ನನ್ನ ತಾಯಿ ಆಗಾಗ ಹೇಳುತ್ತಿದ್ದರು.

ಜವಾನರು ಅಂದರೆ ಸಾಹೇಬರ ಮನೆಯಲ್ಲಿ ಮ್ಯಾನೇಜರ್ ಇದ್ದ ಹಾಗೆ. ತರಕಾರಿ ತರುವುದರಿಂದ ಹಿಡಿದು ಎಲ್ಲಾ ವ್ಯವಹಾರಾನೂ ಅವರದೇ. ರಜಾದಿನ ಬಂದರೆ ಸಾಹೇಬರು ಅಂಗಳದಲ್ಲಿ ಕುಳಿತು ಹೆಂಡತಿ ಮಕ್ಕಳಜೊತೆಗೆ ಒಟ್ಟಿಗೆ ಊಟ ಮಾಡುವಾಗ ಜವಾನರನ್ನು ಜೊತೆಯಲ್ಲಿ ಕೂರಿಸಿಕೊಳ್ಳುತ್ತಿದ್ದರು. ಅಡಿಗೆ ಮಾಡಿದ್ದು ಏನಾದರೂ ಉಳಿದರೆ ಜವಾನರ ಮನೆಗೆ ಊಟ ಕಳುಹಿಸುತ್ತಿದ್ದರು. ಇದು ಎಂತಹ ಬಾಂಧವ್ಯ !

## ವಿಶ್ವೇಶ್ವರಯ್ಯನವರ ಸೇವೆಯಲ್ಲಿ

ಡಾ|| ಸರ್ ಎಂ. ವಿಶ್ವೇಶ್ವರಯ್ಯನವರು ದಿವಾನರಾಗಿದ್ದ ಕಾಲ. ನಮ್ಮ ತಂದೆ ಅವರ ಬಳಿ ಕೆಲಸ ಮಾಡುತ್ತಿದ್ದರು ಸೇವಕರಾಗಿ. ಅವರಿಗಿದ್ದ ನಾಲ್ಕೈದು ಸೇವಕರಲ್ಲಿ ಇವರೂ ಒಬ್ಬರು. ನಮ್ಮ ಮನೆಯಲ್ಲಿ ಒಂದು ಪದಕ ಇತ್ತು. ಅದು ಬೆಳ್ಳಿಯದು. ಅದರ ಮೇಲೆ "From Vishweswaraiah for good

conduct" ಎಂದು ಕೆತ್ತಲಾಗಿತ್ತು. ಒಂದು ದಿನ ನನ್ನ ತಾಯಿಯನ್ನು ಈ ಬಗ್ಗೆ ಕೇಳಿದೆ. ಅವರು ಒಂದು ಕಥೆಯನ್ನ ಹೇಳಿದರು.

ವಿಶ್ವೇಶ್ವರಯ್ಯನವರು ದಿವಾನಗಿರಿ ಬಿಡುತ್ತೇನೆ ಎಂದು ನಿರ್ಧಾರ ಮಾಡಿದಾಗ ಜವಾನರನ್ನು ಕರೆಯಿಸಿ ಹೇಳಿದರು

"ನೀವು ಬಹಳ ಭಕ್ತಿ ಶ್ರದ್ಧೆಗಳಿಂದ ನನ್ನ ಸೇವೆ ಮಾಡಿದ್ದೀರಿ. ಸರ್ಕಾರದಿಂದ ನಿಮಗೆ ಹಣ ಕೊಡುವುದಕ್ಕೆ ಆಗುವುದಿಲ್ಲ. ಅದಕ್ಕಾಗಿ ನಿಮಗೆ ಜಮೀನು ಕೊಡ ಬೇಕೆಂದಿದ್ದೀನಿ. ನಿಮಗೆ ಎಲ್ಲಿ ಬೇಕೋ ಅಲ್ಲಿಗೆ ಹೋಗಿ ನೆಲನೋಡಿ ಬನ್ನಿ."

ನಾಲ್ಕುಜನ ಸೇವಕರೂ ಸ್ವಲ್ಪಹೊತ್ತು ಆಲೋಚಿಸಿ ಹಿಂದಿರುಗಿ ಬಂದು ಸರ್ ಎಂ. ವಿ. ಅವರನ್ನು ಕಂಡು ನಮಸ್ಕಾರ ಮಾಡಿದರು. ನಾಲ್ವರು ಜನರ ಪ್ರತಿನಿಧಿ ಯಾಗಿ ನಮ್ಮ ತಂದೆಯವರೇ

"ಬುದ್ಧಿ, ಜಮೀನು ಜಹಗೀರು ಒಂದೂ ಬೇಡಿ. ನಿಮ್ಮ ಸೇವೆ; ಈ ಸರ್ಕಾರಿ ಕೆಲಸ ಇದ್ದರೆ ಸಾಕು" ಎಂದು ಹೇಳಿ ಕೈ ಜೋಡಿಸಿ ನಿಂತರು.

ಸರ್ ಎಂ. ವಿ. ಅವರು ಜವಾನರುಗಳು ತೋರಿಸಿದ ಗೌರವವನ್ನು ಮೆಚ್ಚಿ ಪದಕಗಳನ್ನು ದಯಪಾಲಿಸಿದರಂತೆ.

ನಮ್ಮ ತಂದೆಗೆ ಜಮೀನು ಸಿಕ್ಕಿದ್ದಕ್ಕಿಂತ ಹೆಚ್ಚು ಆನಂದವಾಯಿತು.

## ಹೊಟ್ಟೆ ಬೋರಣ್ಣ

ನಮ್ಮ ತಂದೆ ಸ್ನೇಹಿತ ಹೊಟ್ಟೆಬೋರಣ್ಣ. ಮನೆ ಹತ್ತಿರ ಇದ್ದರು. ಇಬ್ಬರೂ ಒಟ್ಟಿಗೆ ಕೆಲಸಮಾಡುತ್ತಿದ್ದರು. ಹೊಟ್ಟೆಬೋರಣ್ಣ ನಮ್ಮನೇಗೆ ಬಂದಾಗಲೆಲ್ಲ ಅನೇಕ ವಿಷಯಗಳನ್ನು ಹೇಳುತ್ತಿದ್ದ. ಯಾರ ಮನೆಯಲ್ಲಿ ಒಳ್ಳೆ ಕಾರ್ಯವಾದರೂ ಈತ ಹಾಜರು. ಅವನದೇ ಯಜಮಾನಿಕೆ. ಮದುವೆ ಮಾಡಿಸುವುದಕ್ಕಾಗಲೀ ಮನೆಕಟ್ಟಿಸಿ ಗೃಹಪ್ರವೇಶ ಮಾಡುವಾಗಲಾಗಲೀ ಈತನದೇ ಓಡಾಟ. ಮದುವೆ ಮಾಡಿಸುವುದರಲ್ಲಿ ಪ್ರಸಿದ್ಧಿಯಾದವ. ಎಷ್ಟು ದುಡ್ಡಿದ್ದರೆ ಅಷ್ಟರಲ್ಲಿ ಮದುವೆ ಮುಗಿಸುತ್ತಿದ್ದ. ಐದುರೂಪಾಯಿಗೊಂದು ಮದುವೆ ಮಾಡಿದ್ದುದನ್ನು ಹೇಳುತ್ತಿದ್ದ. ಗಂಡು ಹೆಣ್ಣನ್ನು ಮನೆಯಲ್ಲೋ ದೇವಸ್ಥಾನದಲ್ಲೋ ಕೂಡಿಸಿ ಒಂದುರೂಪಾಯಿಗೊ ಎರಡುರೂಪಾಯಿಗೋ ಬಾಳೆಹಣ್ಣು ತರಿಸಿ ಚಿನ್ನದ ತಾಳಿ ಬದಲು ಒಂದು ಅರಿಸಿನದ ಕೊಂಬೆ ದಾರಕ್ಕೆ ಕಟ್ಟಿ ತಾಳಿಯಂತೆ ಮಾಡಿ ಗಂಡಿನ ಕೈಲಿ ಕಟ್ಟಿಸಿ ದೇವರ ಮುಂದೆ ಎರಡು ಸಣ್ಣ ಹಾರಗಳನ್ನು ಹಾಕಿಸುತ್ತಿದ್ದ. ತೆಂಗಿನಕಾಯಿ ಬಾಳೆಹಣ್ಣುಗಳ ರಸಾಯನವೇ ಊಟ. ಬೆಲ್ಲ ಇದ್ದರೆ ಪಾಯಸ.

"ಏನಪ್ಪಾ ಇಷ್ಟು ಕಡಿಮೆ ದುಡ್ಡಿಗೆ ಮಾಡಿಸ್ತೀಯಲ್ಲ" ಎಂದು ಯಾರಾದರೂ ಕೇಳಿದರೆ

"ಏನ್ರಯ್ಯಾ, ಅವರು ಗಂಡ ಹೆಂಡತಿ ಆಗ್ಲೇ ಇಲ್ಲವೆ ? ಸಂಸಾರ ನಡೆಸುತ್ತಿಲ್ಲವೆ ? ಇದಕ್ಕಿಂತ ಏನುಬೇಕು ? ಅದೇಭಾಗ್ಯ" ಎನ್ನುತ್ತಿದ್ದ.

**ಸ್ಥಳಕೊಂಡದ್ದು**

ಒಮ್ಮೆ ನಮ್ಮ ತಂದೆ ಈಗ ನಾವಿರುವ ಮನೆ ನಿವೇಶನವನ್ನು 3000 ರೂಪಾಯಿಗೆ ಮಾರಲು ಉದ್ದೇಶಿಸಿ ಯಾರೋ ಒಬ್ಬರ ಬಳಿ ನೂರುರೂಪಾಯಿ ಮುಂಗಡ ಹಣ ಪಡೆದಿದ್ದರು. ನಿವೃತ್ತಿಯಾದಮೇಲೆ ಹಳ್ಳಿಗೆ ಹೋಗಿ ಹೊಲ ಗದ್ದೆ ಕೊಂಡು ಜೀವಿಸಿದರಾಯಿತು ಎಂದು ಹೀಗೆ ಮಾಡಿದ್ದರು. ಇದು ಹೇಗೋ ನನ್ನ ತಾಯಿಗೆ ತಿಳಿಯಿತು. 'ಸೈಟು ಮಾರಬೇಡಿ' ಎಂದು ನಮ್ಮ ತಂದೆಗೆ ಹೇಳಿದರು. ಹೆಂಗಸರು ಇದಕ್ಕೆಲ್ಲ ಅಡ್ಡಿ ಬರಬಾರದು ಎಂದು ಬೈದು ಕಛೇರಿಗೆ ಹೋದರು. ನನ್ನ ತಾಯಿ ಸಾಹೇಬರನ್ನ ಕಂಡುಬಂದರು. ಸಾಹೇಬರು ನಮ್ಮ ತಂದೆಯನ್ನು ಕರೆಯಿಸಿ, "ಏನಯ್ಯಾ ಸೈಟು ಮಾರ್ತಿದ್ದೀಯಂತೆ. ಸೈಟು ಮಾರಬೇಡ. ಹೊಲಗದ್ದೆ ತಾನೇ ನಾನೇ ತೆಗೆಸಿಕೊಡ್ತೀನಿ. ಹಣ ಹಿಂದಿರುಗಿಸಿಬಿಡು" ಎಂದು ತಿಳಿವಳಿಕೆ ಹೇಳಿದರು.

ನಮ್ಮ ತಂದೆ ಮನೆಗೆ ಬಂದವರೇ ನನ್ನ ತಾಯಿಯವರನ್ನು ಗದರಿಕೊಂಡರು. "ಹಣ ಎಲ್ಲಿಂದ ತರೋದು, ನೀನೇ ಸಾಲ ತೆಗೆದುಕೊಂಡು ಬಾ" ಎಂದುಬಿಟ್ಟರು. ನನ್ನ ತಾಯಿ ಒಡವೆಗಳನ್ನು ಅಡವಿಟ್ಟು ದುಡ್ಡು ತಂದುಕೊಟ್ಟರು. ನಮ್ಮ ತಂದೆಗೋ ಆಶ್ಚರ್ಯ. ಸರಿ, ಸೈಟು ಮಾರುವುದನ್ನು ನಿಲ್ಲಿಸಿದರು. ಸ್ಥಳ ಹಿಂದಕ್ಕೆ ಕೊಂಡರು. ಮೇಲಿನ ಅಧಿಕಾರಿಗಳಲ್ಲಿ ಯಾರಾದರೂ ನಮ್ಮ ಸ್ವಂತ ವಿಚಾರ ತಿಳಿಸಿದರೆ ಸುಮ್ಮನೆ ಇರುತ್ತೇವೆಯೆ ? ಆ ಕಾಲಕ್ಕೆ ಯಜಮಾನನಿಗೂ ಜವಾನನಿಗೂ ಇದ್ದ ಬಾಂಧವ್ಯ ಇಂತಹುದು.

**ಸಸ್ಯಾಹಾರಿಯಾದೆ**

ನಮ್ಮ ತಂದೆಯ ಹನ್ನೆರಡು ಜನ ಮಕ್ಕಳಲ್ಲಿ ನಾನು ಹತ್ತನೆಯವ. ಈಗ ಬದುಕಿರುವವರಲ್ಲಿ ನನ್ನ ಅಕ್ಕ ವೆಂಕಟಲಕ್ಷ್ಮಿ ನಮ್ಮ ತಂದೆಗೆ ಎಂಟನೆಯ ಮಗು. ನನ್ನ ತಂಗಿ ಪದ್ಮ ಹನ್ನೆರಡನೆಯ ಮಗು. ನನ್ನ ಅಣ್ಣ ತಿರುಮಲಯ್ಯ ದೊಡ್ಡವನು. ಎಲ್ಲರ ಪ್ರೀತಿ ವಿಶ್ವಾಸಕ್ಕೆ ಒಳಗಾಗಿದ್ದವನು. ನಮ್ಮ ತಂದೆತಾಯಿಯರಿಗೆ ಮಾಂಸಾಹಾರವನ್ನು ಬಿಡಿಸಿದವನೂ ಅವನೇ. ಅದೇ ಒಂದು ಕಥೆ.

ಒಂದು ದಿನ ಸಂಜೆ ನಮ್ಮತಾಯಿ ಮಾಂಸದಸಾರು ಮಾಡಿದ್ದರು. ಮಗ ತಿರುಮಲಯ್ಯ ಶಾಲೆಯಿಂದ ಬಂದವನೇ,

"ಅವ್ವ, ನನಗೆ ಊಟಬೇಡ" ಎಂದ.

"ಯಾಕೆ ಮಗ ? ಎಲ್ಲಾರ ಊಟ ಮಾಡ್ದಾ ? ತಿಂಡಿ ತಿಂದಾ ?" ಎಂದರು ನನ್ನ ತಾಯಿ.

ಮನೆಯಲ್ಲಿ ಮಾಂಸದ ಊಟವಾದ್ದರಿಂದ ಊಟಮಾಡುವುದಿಲ್ಲ ಎಂದ. ಏಕೆ ಎಂದದ್ದಕ್ಕೆ, "ನನ್ನ ಕೈಲಿರೋದು ಮಾಂಸತಾನೇ. ಕತ್ತರಿಸಿ ಊಟ ಮಾಡಬಾರದು ದಲ್ಲಾ" ಎಂದ. ನನ್ನ ತಾಯಿಗೆ ದಿಗ್ಭ್ರಮೆಯಾಯಿತು. ಎಷ್ಟಾದರೂ ಹೆತ್ತ ಕರುಳು, "ಇಷ್ಯಾರು ಹೇಳಿಕೊಟ್ಟರು ?" ಎಂದು ಪ್ರಶ್ನಿಸಿದರು.

"ಈ ದಿನ ಶಾಲೆಯಲ್ಲಿ ಬುದ್ಧನ ಜೀವನ ಚರಿತ್ರೆ ಪಾಠ ಹೇಳಿದರು. ಜೀವ ಇರುವ ಪ್ರಾಣಿಗಳೆಲ್ಲ ಒಂದೆ. ಆಹಾರಕ್ಕಾಗಿ ಪ್ರಾಣಿಗಳನ್ನು ಕೊಲ್ಲುವುದಾದರೆ ಮನುಷ್ಯರನ್ನೆ ಕೊಂದು ತಿನ್ನಬಾರದೇಕೆ ಎಂದು ನನ್ನ ಉಪಾಧ್ಯಾಯರು ಹೇಳಿದರು. ಇದು ನನಗೆ ಬಹುವಾಗಿ ಹಿಡಿಸಿತು. ಇನ್ನುಮೇಲೆ ನಾನು ಮಾಂಸ ತಿನ್ನುವುದಿಲ್ಲ. ನನಗೆ ಬೇಳೆಸಾರೇ ಸಾಕು. ನೀವು ಬೇಕಾದರೆ ಮಾಂಸತಿನ್ನಿ" ಎಂದುಬಿಟ್ಟ ತಿರುಮಲಯ್ಯ.

ಮಾಂಸಾಹಾರ. ತಾಯಿಗೂ ಇದು ಬೇಡ ಎನಿಸಿತು. ನಮ್ಮ ತಂದೆಗೂ ವಿಷಯ ತಿಳಿಯಿತು. ಮಗನನ್ನು ಎತ್ತಿ ಮುದ್ದಾಡಿದರು. ಅವರೂ ಸಸ್ಯಾಹಾರಿ ಗಳಾಗಿರಲು ತೀರ್ಮಾನಿಸಿದರು. ಹೀಗಾಗಿ ಚಿಕ್ಕಂದಿನಿಂದಲೇ ನಾನು ಸಸ್ಯಾ ಹಾರಿಯಾದೆ.

ತಿರುಮಲಯ್ಯ ಹೆಚ್ಚುದಿನ ಬದುಕಲಿಲ್ಲ. ನನ್ನತಾಯಿ ಒಂದು ದಿನ ಅವರ ತಂದೆ ತೀರಿಕೊಂಡದ್ದರಿಂದ ಊರಿಗೆ ಹೋಗಿದ್ದರು. ಅದೇದಿನ ಮಧ್ಯಾಹ್ನ ತಿರುಮಲಯ್ಯ ಆಟವಾಡಲು ಮಲ್ಲೇಶ್ವರದ ಕೆರೆಯ ಬಳಿ (ಸ್ವಲ್ಪದಿನ ಈಜು ಕೊಳವಾಗಿತ್ತು) ಹೋಗಿದ್ದ. ಜೊತೆಗೆ ಸ್ನೇಹಿತರ ತಂಡ. ಸಂಪಿಗೆ ರಸ್ತೆಯಿಂದ ಕೆರೆಗೆ ಹೋಗಬೇಕಾದರೆ ಸರ್ವೆತೋಪು ದಾಟಿಕೊಂಡು ಹೋಗಬೇಕಿತ್ತು. ಐದಾರು ಜನ ಆಟವಾಡುತ್ತ ಕೆರೆಕಟ್ಟೆಮೇಲೆ ನಿಂತಿದ್ದರು. ತಮಾಷೆಗೆ ತಿರುಮಲಯ್ಯನನ್ನು ಯಾರೋ ನೂಕಿದರು. ನೆಲದಮೇಲೆ ಬೀಳುವುದರ ಬದಲು ನೀರಮೇಲೆ ಬಿದ್ದ. ಈಜಲು ಬಾರದು. ಎಲ್ಲರೂ ಓಡಿಹೋದರು. ರಾತ್ರಿಯಾದರೂ ತಿರುಮಲಯ್ಯ ಮನೆಗೆ ಬರದುದನ್ನು ನೋಡಿ ಗಾಬರಿಗೊಂಡು ಎಲ್ಲೆಲ್ಲೊ ಹುಡುಕಿದರು. ಆ ಬಳಿಕ ವಿಷಯ ತಿಳಿಯಿತು. ಸ್ವಲ್ಪದಿನಗಳ ಕೆಳಗೆ ಮಗಳನ್ನು ಕಳೆದುಕೊಂಡಿದ್ದರು. ಜೊತೆಗೆ ಹೆಂಡತಿಯ ತಂದೆ ತೀರಿಕೊಂಡು ಹದಿನೈದು ದಿನಗಳಾಗಿದ್ದವು. ಈಗ ಮಗ. ಈ ದುಃಖವನ್ನು ನಮ್ಮ ತಂದೆ ತಡೆಯಲಾರದವರಾಗಿ ದುಃಖವನ್ನು ಮರೆಯಲು ಭಗವಂತನ ಕಡೆಗೆ ದೃಷ್ಟಿ ಹರಿಸಿದರು. ಹರಿಕಥೆ, ಪುರಾಣ, ಶ್ರವಣಕ್ಕಾಗಿ ಸಂಜೆ ಹೊತ್ತನ್ನು ಮೀಸಲಿಡುತ್ತಿದ್ದರು. ಗಂಟೆಗಟ್ಟಲೆ ದೇವರಧ್ಯಾನ ಮಾಡುತ್ತಿದ್ದರು. ನನ್ನ ತಾಯಿಯೂ ನಮ್ಮ ತಂದೆಯವರನ್ನೆ ಅನುಸರಿಸಿದರು.

ಬೆಳಿಗ್ಗೆ ಎದ್ದು ಸ್ನಾನಮಾಡಿ ವಿಭೂತಿ ಹಚ್ಚಿಕೊಂಡು ಹೊರಟರೆ ಆಂಜನೇಯ ದೇವಸ್ಥಾನ, ಶ್ರೀಕೃಷ್ಣದೇವರಗುಡಿ ಹಾಗೂ ಕಾಡು ಮಲ್ಲೇಶ್ವರ ದೇವಸ್ಥಾನಗಳಿಗೆ ಹೋಗಿ ಪ್ರದಕ್ಷಿಣೆ ಹಾಕಿ ಬಂದು ರೊಟ್ಟಿ ತಿನ್ನುತ್ತಿದ್ದರು. ಶನಿವಾರ ಮಾತ್ರ ಬೆಳಿಗ್ಗೆ

ಉಪವಾಸ. ಸ್ನಾನಮಾಡಿ ದೇವರುಗಳನ್ನು ತೊಳೆದು ನಂತರ ದೇವಸ್ಥಾನಗಳಿಗೆ ಪ್ರದಕ್ಷಿಣೆ ಹಾಕಿ ಬಂದಮೇಲೆ ಊಟ. ಅನಂತರ ಕಛೇರಿ. ಸಂಜೆ ಉಪವಾಸ. ಬರೀ ಫಲಹಾರವಷ್ಟೆ.

ನಮ್ಮ ಮನೆಯಲ್ಲಿ ಟಾಮಿ ಎಂದು ಒಂದು ನಾಯಿ ಇತ್ತು. ನಮ್ಮ ತಂದೆ ದೇವಸ್ಥಾನಕ್ಕೆ ಹೊರಟರೆ ಅದು ದೇವಸ್ಥಾನ ತಲಪುವ ಮೊದಲೇ ಗುಡಿಬಾಗಿಲಲ್ಲಿ ಕುಳಿತಿರುತ್ತಿತ್ತು. ಅರ್ಚಕರು ನಾಯಿಯನ್ನು ನೋಡಿ "ಗೊಸ್ನ ಬರುತ್ತಿದ್ದಾನೆ" ಎನ್ನುತ್ತಿದ್ದರು. ನಾಯಿ, ಯಾವಾಗಲೂ ನಮ್ಮ ತಂದೆ ಜೊತೆಯಲ್ಲೇ ಇರೋದು. ದೇವಸ್ಥಾನದಿಂದ ಮನೆಗೆ ಬರುವುದಕ್ಕಿಂತ ಮುಂಚೆಯೇ ಮನೆಗೆ ಹಾಜರು ಟಾಮಿ.

## ಭಜನೆಮನೆ-ಶ್ರೀರಾಮಮಂದಿರ

1926-27ರಲ್ಲಿ ವಿಠಲಾನಂದ ಸ್ವಾಮಿಜಿ ಎಂಬುವರು ಬೆಂಗಳೂರಿಗೆ ಬಂದಿದ್ದರು. ಸ್ವಾಮಿಜಿ ಕ್ಷತ್ರಿಯರು. ಸಿದ್ಧಾರೂಢ ಮಠಕ್ಕೆ ಸೇರಿದ ಅವರು ಮರಾಠಿ ಹಾಗೂ ಕನ್ನಡ ಭಾಷೆಯಲ್ಲಿ ಹರಿಕಥೆ, ಭಜನೆಗಳನ್ನು ಮಾಡುತ್ತಿದ್ದರು. ಮಲ್ಲೇಶ್ವರದಲ್ಲಿ ಒಂದು ಭಜನೆ ಮಂದಿರ ಇರಬೇಕೆಂದು ನನ್ನ ತಂದೆಯ ಅಭಿಮತವಾಗಿತ್ತು. ಜಕ್ಕಸಂದ್ರದ ಒಂದು ಕೊಠಡಿಯಲ್ಲಿ ಎಲ್ಲರೂ ಭಜನೆಗೆ ಸೇರುತ್ತಿದ್ದರು. ಮಲ್ಲೇಶ್ವರದ ತೆಂಗಿನಮರದ ರಸ್ತೆಯಲ್ಲಿ ಮೂವತ್ತು ರೂಪಾಯಿಗಳಿಗೆ ಮುನಿಸಿಪಾಲಿಟಿಯಿಂದ ಒಂದು ನಿವೇಶನವನ್ನು ನಮ್ಮ ತಂದೆ ಮತ್ತು ಮಿತ್ರರು ಸೇರಿ ತೆಗೆದುಕೊಂಡರು. ಒಂದು ಮಂದಿರ ಕಟ್ಟುವ ಸಲುವಾಗಿ ಒಂದು ನಕಾಶೆ ಮಾಡಿಸಿದರು. ಸ್ನೇಹಿತರುಗಳಾದ ಶ್ರೀಯುತ ದೇವೋಜಿರಾವ್, ತಪಸೀಗೌಡ, ವೀರಣ್ಣ, ವೆಂಕಟಪ್ಪ ಮತ್ತು ಲಿಂಗಯ್ಯ ಎಲ್ಲರೂ ಸೇರಿ ಶ್ರೀರಾಮ ಮಂದಿರ ಸ್ಥಾಪಿಸಿದರು. ಎರಡುಸಾವಿರ ರೂಪಾಯಿ ಖರ್ಚುಮಾಡಿ ಒಂದು ಕೊಠಡಿ ಕಟ್ಟಿಸಿದರು. ಅಲ್ಲಿ ವಿಠಲಾನಂದ ಸ್ವಾಮಿಜಿ ಮತ್ತು ಅವರ ಪರಿವಾರಕ್ಕೆ ಇಳಿದುಕೊಳ್ಳಲು ಅನುಕೂಲ ಮಾಡಿಕೊಟ್ಟರು. ನಿತ್ಯ ಸಂಜೆ ಹರಿಕಥೆ, ಭಜನೆ. ಜನ ಸೇರತೊಡಗಿದರು. ಆಕಾಲಕ್ಕೆ ಅದೇ ದೊಡ್ಡ ರಾಮಮಂದಿರ. ಮಲ್ಲೇಶ್ವರ, ಗುಟ್ಟಹಳ್ಳಿ, ಶೇಷಾದ್ರಿಪುರ ಎಲ್ಲಕ್ಕೂ ಮಧ್ಯದಸ್ಥಳ. ರಾಮಮಂದಿರ ಕಟ್ಟಿದ್ದೆ ಒಂದು ವಿಶೇಷ. ನಮ್ಮ ತಂದೆ ಬೆಳಿಗ್ಗೆ ತಿಂಡಿ ತಿಂದು ಮನೆಯಿಂದ ಹೊರಟರೆ ರಾಮಮಂದಿರದ ಕಟ್ಟಡದ ಸಲುವಾಗಿ ಹಣ ವಸೂಲಿ ಮಾಡಿ ಹತ್ತು ಗಂಟೆಗೆ ಮನೆಗೆ ಬಂದು ಊಟಮಾಡಿ ಆಫೀಸಿಗೆ ಹೋಗುತ್ತಿದ್ದರು. ಸಂಜೆ ಆಫೀಸಿನಿಂದ ಬಂದು ವಸೂಲಿಗೆ ಹೊರಟರೆ ಎಷ್ಟು ಹೊತ್ತಿಗೆ ಮನೆಗೆ ಬರುತ್ತಿದ್ದರೋ ತಿಳಿಯದು. ಯಾವಾಗಲೂ ರಸೀತಿ ಪುಸ್ತಕ ಜೊತೆಯಲ್ಲಿ. ಶ್ರೀ ದೇವೋಜಿರಾವ್ ಪಾಂಡ್ರೆ ಇವರೊಡನೆ. ಸರ್ ಎಂ. ವಿ. ಅವರಿಂದ ಹಿಡಿದು ಎಲ್ಲ ಅಧಿಕಾರಿಗಳ ಬಳಿ ವಸೂಲಿಮಾಡಿದರು. ಬಡಜನರು ಕೊಟ್ಟ ನಾಲ್ಕಾಣೆಯನ್ನು ಬಿಡಲಿಲ್ಲ.

ದೇವೋಜಿರಾವ್ ಪಾಂಡ್ರೆ ನಮ್ಮ ತಂದೆಯ ಆಪ್ತ ಸ್ನೇಹಿತರು. ನಾವಿದ್ದ ಬೀದಿಯಲ್ಲಿ ಬಾಡಿಗೆ ಮನೆಯಲ್ಲಿ ಇದ್ದರು. ಬ್ರಹ್ಮಚಾರಿ. ತಂಗಿಯನ್ನು ಸಾಕಿ ಕೊಂಡಿದ್ದರು. ಅಠಾರಾ ಕಛೇರಿಯಲ್ಲಿ ಟೆಲಿಫೋನ್ ಆಪರೇಟರ್. ನಮ್ಮ ಕಷ್ಟ ಸುಖದಲ್ಲಿ ಭಾಗಿಯಾಗುತ್ತಿದ್ದರು. ಹೆಚ್ಚುಕಡಿಮೆ ಅವರ ಊಟ ನಮ್ಮ ಮನೆಯಲ್ಲೆ. ರಾಮಮಂದಿರವಾದ ಮೇಲೆ ವಾಸ ಅಲ್ಲಿ. ನಿವೃತ್ತರಾದಮೇಲೆ ರಾಮಮಂದಿರ ನೋಡಿಕೊಳ್ಳುತ್ತಿದ್ದರು. ಬೆಂಗಳೂರು ಬಿಡುವಾಗ ತಮ್ಮ ಮನೆ ಸಾಮಾನುಗಳನ್ನು ರಾಮಮಂದಿರಕ್ಕೆ ಕೊಟ್ಟರು.

**ತಪದಾಸ್–ಡಾ|| ನಳಿಗೆ**

ರಾಮಮಂದಿರ ಕಟ್ಟುವುದರಲ್ಲಿ ಹಳ್ಳಿಯವರಿಗೆ ಭಜನೆ, ಹರಿಕಥೆ, ಪುರಾಣ, ಭಗವದ್ಗೀತೆಗಳನ್ನು ಅಭ್ಯಾಸ ಮಾಡಿಸುವುದರಲ್ಲಿ ಹರವನಹಳ್ಳಿ ತಪಸೇಗೌಡರು ನಿಪುಣರು. ಎತ್ತರದ ವ್ಯಕ್ತಿ, ಕಪ್ಪು ಬಣ್ಣ. ತಲೆಯಲ್ಲಿ ಜುಟ್ಟು, ಹಣೆ ತುಂಬ ನಾಮ. ಒಂದು ತುಂಡು ಪಂಚೆ, ಹೊದೆಯಲು ಕಾವಿಶಾಲು, ಕಾಲಿಗೆ ಚಪ್ಪಲಿ. ಬೆಳಿಗ್ಗೆ ಐದಕ್ಕೆ ಎದ್ದರೆ ತಣ್ಣೀರಿನ ಸ್ನಾನ. ಗೀತಾ ಶ್ಲೋಕಗಳ ಪಠಣ.

ಭಾರತ, ರಾಮಾಯಣದ ಸ್ವಲ್ಪ ಭಾಗವನ್ನು ಓದಿ ಯಾರಾದರೂ ಬಳಿ ಇದ್ದರೆ ಅರ್ಥ ಹೇಳುತ್ತಿದ್ದರು. ನಂತರ ದೇವರ ಪೂಜೆ. ತೀರ್ಥ ಪ್ರಸಾದದ ಬಳಿಕ ತಿಂಡಿ. ಹಳ್ಳಿಯಲ್ಲಿದ್ದರೆ ವ್ಯವಸಾಯ. ಬೇರೆ ಊರಲ್ಲಿದ್ದರೆ ಗೀತೋಪದೇಶ.

ಹಳ್ಳಿಗಳಲ್ಲಿ ರಾಮೋತ್ಸವ, ಭಜನೆ, ಪುರಾಣ ಕಾರ್ಯಕ್ರಮಗಳು ಇದ್ದೆ ಇರುತ್ತಿತ್ತು. ಸಾಕಷ್ಟು ವಿಷಯಗಳನ್ನು ಚೆನ್ನಾಗಿ ತಿಳಿದಿದ್ದರು. ಅಭ್ಯಾಸದ ಫಲ, ಗೀತೆಯ ಹದಿನೆಂಟು ಅಧ್ಯಾಯಗಳನ್ನು ಬಾಯಲ್ಲಿ ಹೇಳುತ್ತಿದ್ದರು. ಅವರ ಮನೆ ಎಂದರೆ ಊರಿನಲ್ಲಿ ಒಂದು ಕೊಠಡಿ. ಅದೇ ಭಜನೆ ಮಂದಿರ. ತಪಸೇಗೌಡ ಎಂದರೆ ವಿದ್ಯೆ ಇಲ್ಲದವನು ಎಂದು ತಪಸ್‌ದಾಸ್ ಅಂತ ಹೇಳುತ್ತಿದ್ದರು. ನಮ್ಮ ತಂದೆ ಯವರಿಗೂ ಅವರಿಗೂ ಸ್ನೇಹ ಬೆಳೆಯಿತು. ಕೊನೆಗೆ ಅವರ ಮಗ ತಮ್ಮಯ್ಯನವರಿಗೆ ನನ್ನ ಸೋದರಿ ವೆಂಕಟಲಕ್ಷ್ಮಿಯನ್ನು ಕೊಟ್ಟು ಮದುವೆಯಾಯಿತು. ಬಂಧುತ್ವ ಬೆಳೆಯಿತು.

ಡಾ|| ನಳಿಗೆ ಆಯುರ್ವೇದ ವೈದ್ಯರು. ನಮ್ಮ ತಂದೆ ಸ್ನೇಹಿತರು. ಬಡವ ರಿಂದ ಹಣ ಪಡೆಯದೆ ಔಷಧ ಕೊಡುತ್ತಿದ್ದರು. ಔಷಧದ ಜೊತೆಗೆ ಹತ್ತು ರೂಪಾಯಿ ಕೊಟ್ಟು ತುಪ್ಪ, ಹಾಲು, ಮೊಸರು ತಿನ್ನಲು ಹೇಳುತ್ತಿದ್ದರು. ಪಥ್ಯ ಮುಖ್ಯ. ಅದು ಸರಿಯಾಗಿ ಮಾಡಿದ್ದಾನೆಂದರೆ ಮತ್ತೆ ಔಷಧ ಕೊಡುತ್ತಿದ್ದರು. ಅವರು ಒಬ್ಬ ಸನ್ಯಾಸಿಯಿಂದ ಔಷಧ ಮಾಡಲು ಕಲಿತಿದ್ದರಂತೆ. ಆತನಿಗೆ ವಾಗ್ದಾನ ಕೊಟ್ಟಿದ್ದಂತೆ ಔಷಧಿಯನ್ನು ಹಣಕ್ಕೆ ಮಾರುತ್ತಿರಲಿಲ್ಲ. ನಳಿಗೆ ದೈವಭಕ್ತರು. ಯಾರಾ ದರೂ ದೇವರಿಲ್ಲ ಎಂದರೆ ಅವರ ಬಳಿ ಔಷಧಿಯೂ ಇಲ್ಲ. ಒಂದುಸಾರಿ ಒಬ್ಬ

ಪೋಲೀಸ್ ಅಧಿಕಾರಿ ಒಂದು ಚೀಟಿ ಬರೆದು ನೂರು ರೂಪಾಯಿ ಕಳುಹಿಸಿ ಔಷಧಿಗೆ ಹೇಳಿಕಳುಹಿಸಿದ. ಆಗ ನಾನೂ ಅಲ್ಲಿದ್ದೆ. ಚೀಟಿ ನಾನೇ ತೆಗೆದೆ. ದುಡ್ಡು, ಚೀಟಿ ಎರಡನ್ನು ಆಚೆಗೆ ಹಾಕಿ ಔಷಧಿ ಇಲ್ಲ ಎಂದು ಹೇಳಿ ಕಳುಹಿಸಿದರು. ಹೀಗೇಕೆ ಮಾಡಿದಿರಿ ಎಂದು ನಾನು ಕೇಳಿದೆ. "ಆತ ಪೋಲೀಸ್ ಅಧಿಕಾರಿ ಇರಬಹುದು. ಅಧಿಕಾರ ಕಛೇರಿಯಲ್ಲಿಟ್ಟುಕೊಳ್ಳಲಿ. ಹಣವಂತ ಇರಬಹುದು ಅವನ ಮನೆಯಲ್ಲಿ. ಆದರೆ ದೇವರಲ್ಲಿ ನಂಬಿಕೆ ಇಲ್ಲದವ. ಇಂತವರಿಗೆ ಔಷಧಿ ಕೊಡೋದಿಲ್ಲ" ಎಂದು ಬಿಟ್ಟರು. ಅವರ ಮರಣವು ಒಂದು ವಿಚಿತ್ರ. ಹೆಂಡತಿಯನ್ನು ಕರೆದು ಭಜನೆ ಹೇಳುವಂತೆ ಹೇಳಿ ತಾವೂ ಧ್ಯಾನಾಸಕ್ತರಾಗಿ ಹಾಗೆಯೇ ಪ್ರಾಣಬಿಟ್ಟರು.

**ಬಾಲ್ಯ-ವಿದ್ಯಾಭ್ಯಾಸ**

ನಾನು ಹುಟ್ಟಿದ್ದು 1925ರ ಜನವರಿ ನಾಲ್ಕರಂದು, ಭಾನುವಾರ. ನಾವು ಇದ್ದ ಮನೆಯ ಸಾಲಿನಲ್ಲಿ ಒಟ್ಟು ಆರು ಮನೆಗಳಿದ್ದವು. ಆ ಮನೆಗಳು ಈಗಲೂ ಇವೆ. ಮನೆ ಸುತ್ತಲೂ ಬೇಲಿ ಇತ್ತು. ಮನೆ ಮುಂದೆ ತೋಟ. ಹಣ್ಣಿನ ಗಿಡಗಳು, ಹೂವಿನ ಗಿಡಗಳು ತುಂಬಿ ಇದ್ದವು. ನಮ್ಮ ತಂದೆಗೆ ಸಂಬಳ ಕಡಿಮೆ ಬರುತ್ತಿತ್ತು. ಹಣ್ಣು ಹಾಗೂ ಬೆಳೆದ ತರಕಾರಿಗಳನ್ನು ಮಾರಿ ನಾಲ್ಕು ಕಾಸು ಮಾಡಿಕೊಳ್ಳುತ್ತಿದ್ದರು. ನಮ್ಮ ಮನೆಬಿಟ್ಟು ಉಳಿದ ಐದು ಮನೆಗಳ ಬಾಡಿಗೆ ಒಟ್ಟು ಮೂರು ರೂಪಾಯಿ. ವಿದ್ಯುದ್ದೀಪ ಇರಲಿಲ್ಲ.

ನಮ್ಮ ಮನೆಯಲ್ಲಿ ಮಾಂಸಾಹಾರ ಇಲ್ಲದಿದ್ದುದರಿಂದ ಸಾಲಿನ ಐದು ಮನೆಗಳಲ್ಲೂ ಕೂಡ ಸಸ್ಯಾಹಾರಿಗಳೇ ಬಾಡಿಗೆಗೆ ಇರಬೇಕಾಗಿತ್ತು. ಮನೆಗಳನ್ನು ಬ್ರಾಹ್ಮಣರಿಗೇ ಬಾಡಿಗೆಗೆ ಕೊಡುತ್ತಿದ್ದರು. ನಮ್ಮ ತಂದೆ ಕಾಲವಾದಮೇಲೆ ನಾನು ಅಕ್ಷರ ಕಲಿತಮೇಲೆ ಮನೆ ಬಾಡಿಗೆಗೆ ಇದ್ದರೆ ಬ್ರಾಹ್ಮಣರಿಗೆ ಮಾತ್ರ ಎಂದು ಬೋರ್ಡು ಹಾಕುತ್ತಿದ್ದೆ. ಎಲ್ಲ ಪಂಗಡದ ಬ್ರಾಹ್ಮಣರೂ ಇರುತ್ತಿದ್ದರು. ಅವರು ಮಾಡುವ ಹಬ್ಬ ಉತ್ಸವಗಳು ನಮ್ಮ ಮನೆಯಲ್ಲಿ ನಡೆಯುತ್ತಿತ್ತು.

ನನಗೆ ಹೆಸರಿಟ್ಟವರು ಹಪ್ಪಳದ ಸೀತಮ್ಮ. ಕೊನೆಯ ಮನೆಯಲ್ಲಿ ವಾಸಕ್ಕಿದ್ದರು. ಹಪ್ಪಳಮಾಡಿ ಮಾರಿ ಜೀವಿಸುತ್ತಿದ್ದರಿಂದ ಅವರಿಗೆ ಆ ಅಡ್ಡ ಹೆಸರು ಬಂದಿತ್ತು. ನಾನು ಯಾವಾಗಲೂ ಅವರ ಮನೆಯಲ್ಲೆ ಇರುತ್ತಿದ್ದೆ. ಮಗುವಾಗಿದ್ದಾಗ ಸ್ವಲ್ಪ ಕೆಮ್ಮು ನೆಗಡಿ ಬರುತ್ತಿದ್ದುದರಿಂದ ಯಾರೋ ಮೇಕೆ ಹಾಲು ಕುಡಿಸಿ ಎಂದಿದ್ದರು. ಮೇಕೆ ಹಾಲು ಕುಡಿದರೆ ಕಾಯಿಲೆಯೂ ಬರುವುದಿಲ್ಲ ಎಂದು ನಮ್ಮ ತಾಯಿ ಹೇಳುತ್ತಿದ್ದರು. ಅಷ್ಟೆಲ್ಲ ಪ್ರೀತಿಯಿಂದ ತಿನ್ನಿಸಿ, ಉಣ್ಣಿಸಿದರೂ ನಾನು ಸಣ್ಣಗಿದ್ದೆ. ಆದರೂ ಕಾಯಿಲೆ ಹೆಚ್ಚಾಗಿ ಬರಲಿಲ್ಲ. ನನ್ನ ತಾಯಿಕೂಡ ನನ್ನನ್ನು ಬಿಟ್ಟಿರುತ್ತಿರಲಿಲ್ಲ. ಶಾಲೆಗೆ ಕೂಡ ನಿಧಾನವಾಗಿ ಸೇರಿಸಿದರು. ಹರದನಹಳ್ಳಿ, ವೆಂಕಟಪ್ಪ ಮಾಸ್ತರು ಬೆಂಗಳೂರು ಡಿಸ್ಟ್ರಿಕ್ಟ್ ನಾರ್ಮಲ್ ಶಾಲೆಯಲ್ಲಿ ತರಪೇತಿಗೆ

ಬಂದಾಗ "ಕೂಸನ್ನು ಶಾಲೆಗೇಕೆ ಸೇರಿಸಿಲ್ಲ. ನಾನು ಜೊತೆಗೆ ಕರೆದುಕೊಂಡು ಹೋಗುತ್ತೇನಿ ಸೇರಿಸಿ" ಎಂದರು. ಆರೋ ಏಳೋ ವರ್ಷಕ್ಕೆ ಇರಬೇಕು ನನ್ನನ್ನು ನಾರ್ಮಲ್ ಶಾಲೆಗೆ ಸೇರಿಸಿದರು.

ಮಾಸ್ತರು ಶಾಲೆಗೆ ಸೇರಿಸಿಕೊಳ್ಳುವಾಗ ಹೆಸರೇನು ಬರೆದುಕೊಳ್ಳಲಿ ಎಂದು ನನ್ನ ತಾಯಿಯನ್ನು ಕೇಳಿದರು. ಅವರು ಶ್ರೀನಿವಾಸಗೌಡ, ಶ್ರೀನಿವಾಸಪ್ಪ ಹಾಗೂ ಶ್ರೀನಿವಾಸಯ್ಯ ಈ ಮೂರು ಹೆಸರುಗಳಲ್ಲಿ ಯಾವುದು ಬರೆದುಕೊಳ್ಳಲಿ ಎಂದು ಹಪ್ಪಳದ ಸೀತಮ್ಮನನ್ನು ಕೇಳಿದಾಗ ಅವರು ಶ್ರೀನಿವಾಸಯ್ಯ ಎಂಬ ಹೆಸರನ್ನು ಸಲಹೆ ಮಾಡಿದರು.

ಹರದನಹಳ್ಳಿ ವೆಂಕಟಪ್ಪ ಮಾಸ್ತರು ಜೊತೆ ಎರಡು ವರ್ಷ ಶಾಲೆಗೆ ಹೋಗಿ ಬರುತ್ತಿದ್ದೆ. ಅನಂತರ ಸ್ನೇಹಿತರ ಜೊತೆ ಹೋಗುವ ಅಭ್ಯಾಸವಾಯಿತು. ಡಿಸ್ಟ್ರಿಕ್ಟ್ ನಾರ್ಮಲ್ ಶಾಲೆಗೆ ಆಗ ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು ಮುಖ್ಯೋಪಾಧ್ಯಾಯರು. ಉಪಾಧ್ಯಾಯರ ತರಬೇತಿ ಕ್ಷೇತ್ರವಾಗಿದ್ದುದರಿಂದ ಶಾಲೆಯಲ್ಲಿ ಒಳ್ಳೆ ಶಿಕ್ಷಣ ದೊರೆಯುತ್ತಿತ್ತು. ಆಗಾಗ ತೋಟದಲ್ಲಿ ಕೆಲಸಮಾಡಿ ತರಕಾರಿ ಬೆಳೆಯುವುದನ್ನು ಹೇಳಿಕೊಡುತ್ತಿದ್ದರು.

ನಾಲ್ಕು ವರ್ಷಗಳ ಬಳಿಕ ಮಲ್ಲೇಶ್ವರ ಬಾಯ್ಸ್ ಮಿಡಲ್‌ಸ್ಕೂಲ್ ಸೇರಿದೆ. ಶ್ರೀ ಎಲ್. ಸ್ವಾಮಿರಾವ್ ಮುಖ್ಯೋಪಾಧ್ಯಾಯರು. ಶಿಸ್ತಿನ ಶಿಪಾಯಿಗಳು. ಅವರನ್ನು ಕಂಡರೆ ಎಲ್ಲರಿಗೂ ಭಯ. ಕುಳ್ಳನೆಯ ವ್ಯಕ್ತಿ. ಪ್ಯಾಂಟ್ ಕ್ಲೋಸ್ ಕಾಲರ್ ಕೋಟು, ಪೇಟಹಾಕಿ ಬರುತ್ತಿದ್ದರು. ಮನೆಯಿಂದ ಬರಬೇಕಾದರೆ ಬಿಳಿಯ ಛತ್ರಿ ಹಿಡಿದುಕೊಂಡು ಹೊರಟರೆ ಸೀದಾ ಶಾಲೆ. ವೇಳೆಗೆ ಸರಿಯಾಗಿ ಬರುತ್ತಿದ್ದರು. ಹೊತ್ತಾಗಿ ಬಂದವರಿಗೆ ಬೆತ್ತದ ಏಟು. ಶಾಲೆಯ ಸುತ್ತಲೂ ಗಸ್ತು ತಿರುಗುವುದು ಅವರ ಒಂದು ಕೆಲಸ. ಅಕಸ್ಮಾತ್ತಾಗಿ ಹುಡುಗರು ಹೊತ್ತಾಗಿ ಬಂದರೆ ಅಥವಾ ಸ್ಕೂಲ್ ಕಾಂಪೌಂಡಿನಲ್ಲಿ ಅಶುಚಿ ಮಾಡುತ್ತಿದ್ದುದು ಕಣ್ಣಿಗೆ ಬಿದ್ದರೆ ಏಟು ಗ್ಯಾರಂಟಿ. ನಾನೂ ಎರಡುಬಾರಿ ಏಟು ತಿಂದಿದ್ದೆ. ಶ್ರೀ ಎಲ್. ಸ್ವಾಮಿರಾವ್ ಅವರು ಈಗ ಪ್ರಸಿದ್ಧ ವಿಮರ್ಶಕರೂ ಇಂಗ್ಲೀಷ್ ಪ್ರಾಧ್ಯಾಪಕರೂ ಆಗಿರುವ ಶ್ರೀ ಎಲ್. ಎಸ್. ಶೇಷಗಿರಿರಾಯರ ತಂದೆ. ಮಿಡಲ್‌ಸ್ಕೂಲ್‌ನ ಎರಡನೇ ವರ್ಷ ಸ್ಕಾಲರ್‌ಷಿಪ್ ಕೊಡುತ್ತಿದ್ದರು. ಅದನ್ನು ಗಿಟ್ಟಿಸಿದೆ. ಆಗಿನ ವಿದ್ಯಾರ್ಥಿ ವೇತನ ಮೂರು ರೂಪಾಯಿ.

ನನಗೆ ಬಹಳ ಮೆಚ್ಚುಗೆಯಾಗಿದ್ದ ಉಪಾಧ್ಯಾಯರು ಶ್ರೀ ನರಸಿಂಹಮೂರ್ತಿ. ಮಿಡಲ್ ಸ್ಕೂಲ್ ಮೂರನೆ ತರಗತಿ ಉಪಾಧ್ಯಾಯರು. ಕುಳ್ಳನೆ ಮನುಷ್ಯ. ನಿಧಾನವಾಗಿ, ಚೆನ್ನಾಗಿ ಪಾಠ ಮಾಡುತ್ತಿದ್ದರು. ಈಗಲೂ ದಾರಿಯಲ್ಲಿ ಸಿಕ್ಕಿದರೆ ಮಾತನಾಡಿಸದೆ ಹೋಗುವುದಿಲ್ಲ.

ಶ್ರೀ ಗೋಪಾಲಯ್ಯ ಮಿಡಲ್ ಸ್ಕೂಲಿನ ನಾಲ್ಕನೆ ತರಗತಿಗೆ ಪಾಠ ಮಾಡು

ತ್ತಿದ್ದರು. ಅವರನ್ನು ಕಂಡರೆ ಹುಡುಗರೆಲ್ಲ ಹೆದರಿಕೆ. ಸಿಕ್ಕಾಪಟ್ಟೆ ಹುಡುಗರನ್ನು ಬೈಯ್ಯುತ್ತಿದ್ದರು. ಮುಕ್ಕಾಲು ಗಂಟೆಯಲ್ಲಿ ಪಾಠಮುಗಿಸಿ ಕೊನೆ ಹದಿನೈದು ನಿಮಿಷ ಕಥೆ ಹೇಳುತ್ತಿದ್ದರು. ಅದೇ ಸ್ವಾರಸ್ಯ. ಕಡೆಕಡೆಗೆ ಒಂದೇ ಕಥೆಯನ್ನು ವರ್ಷವೆಲ್ಲ ಹೇಳುತ್ತಿದ್ದರು.

ಸಂಸ್ಕೃತ ಮೇಷ್ಟ್ರು ಬಹಳ ಹಳೆಯಕಾಲದವರು. ಅವರದು ಮಡಿವಂತಿಕೆ. ತರಗತಿಯಲ್ಲಿ ಯಾರಾದರೂ ಗಲಾಟೆ ಮಾಡಿದರೆ, ಸಣ್ಣ ಕಡ್ಡಿಯೊಂದನ್ನು ಜೋರಾಗಿ ಎಸೆಯುತ್ತಿದ್ದರು. ಅದನ್ನು ಎಲ್ಲರೂ ರಾಮಬಾಣ ಎನ್ನುತ್ತಿದ್ದೆವು. ಹುಡುಗರೆಲ್ಲರ ಗೆಟ್‌ಟುಗೆದರ್ ಅಂದರೆ ಸರಸ್ವತಿ ಪೂಜೆಗೆ. ವರ್ಷದ ಕೊನೆಗೆ ಪೂಜೆ. ಅಂದು ಮುಖ್ಯೋಪಾಧ್ಯಾಯರು ಹುಡುಗರನ್ನು ಉದ್ದೇಶಿಸಿ ಮಾತನಾಡುತ್ತಿದ್ದರು.

ಶಾಲೆಗೆ ಹೋಗುವುದರ ಜೊತೆಗೆ ನಮ್ಮ ತಂದೆ ಜೊತೆ ರಾಮಮಂದಿರದಲ್ಲಿ ನಡೆಯುತ್ತಿದ್ದ ಗೀತಾಪಾರಾಯಣ ಅಭ್ಯಾಸಕ್ಕೆ ಹೋಗುತ್ತಿದ್ದೆ. ರಾಮಮಂದಿರದಲ್ಲಿ ಸಾಲಾಗಿ ಹುಡುಗರು ಕುಳಿತುಕೊಳ್ಳುತ್ತಿದ್ದೆವು. ಮೈಸೂರಿನ ಗೀತಾಪ್ರಚಾರಕ ಶಂಕರಾನಂದ ಭಾರತಿಯವರು ಒಂದು ಪೀಠದಮೇಲೆ ಕುಳಿತುಕೊಂಡು ಗೀತಾ ಪ್ರವಚನ ಆರಂಭಿಸುತ್ತಿದ್ದರು. ಅವರು ಹೇಳಿಕೊಡುತ್ತಿದ್ದುದನ್ನು ಸಾಮೂಹಿಕವಾಗಿ ಹಾಡಬೇಕಾಗಿತ್ತು. ದಿನಕ್ಕೊಂದು ಅಧ್ಯಾಯ. ಮುಗಿದಮೇಲೆ ಎರಡು ಶ್ಲೋಕ ಗಳ ತಾತ್ಪರ್ಯ ತಿಳಿಸುತ್ತಿದ್ದರು. ನಾಲ್ಕಾಣೆಗೆ ಅವರು ಕೊಡುತ್ತಿದ್ದ ಗೀತೆ ಪುಸ್ತಕ ಈಗಲೂ ನನ್ನಬಳಿ ಇದೆ

ನನ್ನ ಶಾಲೆಯ ಉಡುಪು ಒಂದು ನಿಕ್ಕರ್, ಮೇಲೊಂದು ಅಂಗಿ, ಅದರ ಮೇಲೊಂದು ಕೋಟು. ಕೋಟಿಲ್ಲದೆ ಶಾಲೆಗೆ ಹೋಗುತ್ತಿದ್ದುದು ಕಡಿಮೆ. ತಲೆ ಮೇಲೆ ಟೋಪಿ. ಜುಟ್ಟು ಮಾತ್ರ ನನಗೆ ಬಲವಾಗಿತ್ತು. ಅನೇಕ ಸಲ ಜಡೆ ಹಾಕುತ್ತಿದ್ದುದು ಉಂಟು. ಕಾಲೇಜಿಗೆ ಬಂದಮೇಲೆ ಗಂಟು ಹಾಕಲು ಪ್ರಾರಂಭಿಸಿದೆ. ಹಣೆಮೇಲೆ ಮೂರುನಾಮ ; ತಿರುಪತಿಯ ಒಕ್ಕಲಾದುದರಿಂದ.

## ಪಟ್ಟಲದಮ್ಮನ ಜಾತ್ರೆ

ತಿರುಪತಿ ದೇವರಜೊತೆ ನಮ್ಮ ಗ್ರಾಮದೇವತೆ ಪಟ್ಟಲದಮ್ಮನನ್ನು ಪೂಜಿಸುವುದು ರೂಢಿ. ಪಟ್ಟಲದಮ್ಮನ ಹಬ್ಬ ಯುಗಾದಿ ಆದ ಹದಿನೈದು ದಿವಸಕ್ಕೆ ಬರುತ್ತದೆ. ಆದಿನ ನಮ್ಮ ಗ್ರಾಮದ ಸುತ್ತಲ ಏಳು ಗ್ರಾಮಗಳ ಜನ ಈ ಹಬ್ಬವನ್ನು ವಿಶೇಷವಾಗಿ ನಡೆಸುವರು. ಒಳ್ಳೆ ವೈಭವವಾದ ಜಾತ್ರೆ. ಪಟ್ಟಲದಮ್ಮನ ದೇವಸ್ಥಾನವೇ ನ್ಯಾಯಾಲಯ. ಪಂಚಾಯಿತಿ ತೀರ್ಪು ಅಲ್ಲೇ. ದೇವಸ್ಥಾನದಲ್ಲಿ ಯಾವುದು ದಂಡ ಹಾಕಿದರೂ ಅದು ದೇವಸ್ಥಾನಕ್ಕೆ ಸೇರಿದ್ದು. ನನಗೆ ತಿಳಿದ ಮಟ್ಟಿಗೆ ಈ ಏಳು ಊರುಗಳ ಜನ ಕೋರ್ಟಿಗೆ ಹೋಗುವವರು ಕಡಿಮೆ. ಈ ಏಳು ಊರಿನವರೂ ಯಾವ ಕೆಲಸ ಮಾಡಿದರೂ ಒಟ್ಟಿಗೆ ಮಾಡುತ್ತಿದ್ದರು. ದೇವರಮಾದಹಳ್ಳಿ,

ಚೌಡರಿಕೊಪ್ಪಲು, ತೂಬಿನಕೆರೆ, ದೇವರಹಳ್ಳಿ ಮೊದಲಾದುವೇ ಈ ಊರುಗಳು. ಪಟ್ಟಲದಮ್ಮನಗುಡಿ ಏಳು ಊರುಗಳನ್ನು ಒಟ್ಟಿಗೆ ಸೇರಿಸಿದೆ. ಯುಗಾದಿ ಮೂರನೇ ದಿನದಿಂದಲೇ ಜಾತ್ರೆಗೆಂದು ಗೆಜ್ಜೆಕುಣಿತ, ಪಟದ ಕುಣಿತ ಇವುಗಳ ಸತತ ಅಭ್ಯಾಸ. ಹಬ್ಬದ ದಿನ ಎಲ್ಲರೂ ಸ್ನಾನಮಾಡಿ ಸಂಜೆ ಹುಗ್ಗಿ ಮತ್ತು ಪೊಂಗಲುಮಾಡಿ ದೇವರ ಮುಂದೆ ನೈವೇದ್ಯ ಇಡುವರು. ತಂಬಿಟ್ಟು ಕಲಸಿ ಅದರಮೇಲೆ ದೀಪ ಹಚ್ಚಿ ಅದನ್ನು ಹೊತ್ತು ಆಯಾ ಊರಿನಿಂದ ಹೊರಡುವ ದೇವರ ಉತ್ಸವದ ಮುಂದೆ ಮೆರವಣಿಗೆ ಹೊರಡುವರು. ತಮಟೆ ಶಬ್ದವೇ ಸುಮಾರು ನಾಲ್ಕೈದು ಊರಿಗಾದರೂ ಕೇಳಬೇಕು. ಅಲ್ಲಿಂದ ಏಳು ಉತ್ಸವಗಳೊಡನೆ ಏಳೂರಿನ ಜನ ಒಟ್ಟಿಗೆ ಸೇರಿ ತೇರಿನ ಮನೆಯಿಂದ ದೇವಸ್ಥಾನದ ಕಡೆಗೆ ಹೋಗುವರು. ಉತ್ಸವದಲ್ಲಿ ತೇರಿನ ಮೇಲೆ ದೇವರಪಟ ಇರುತ್ತದೆ. ತೇರಿನ ಮುಂದೆ ಗೆಜ್ಜೆ ಕುಣಿತ, ಕೋಲಾಟ ಇತ್ಯಾದಿ. ಪಟ–ಉತ್ಸವ ತಂದವರು ದೇವರಗುಡಿ ಮುಂದೆ ಇದ್ದ ಬೆಂಕಿಯ ಕೊಂಡದಲ್ಲಿ ನಡೆದೇ ಹೋಗುವರು. ಹಿಂದೆ ಪಟ್ಟಲದಮ್ಮನ ವಿಗ್ರಹ ಹೊತ್ತ ಜನರೂ ಕೆಂಡದಮೇಲೆ ಬರುತ್ತಿದ್ದರು. ಕೆಲವರದು ಹರಕೆ ಇರುತ್ತಿತ್ತು. ದೇವರನ್ನು ಇಳಿಸಿ ಪೂಜೆ ಆದಮೇಲೆ ಆ ದಿವಸದ ಕಾರ್ಯ ಆದಂತೆ. ಸಂಜೆ ೯ ಗಂಟೆಗೆ ಪ್ರಾರಂಭವಾದ ಈ ಕಾರ್ಯಕ್ರಮ ಬೆಳಗಿನ ಜಾವ ೫ ಗಂಟೆವರೆಗೆ ನಡೆಯುತ್ತಿತ್ತು. ನಂತರ ಹುಗ್ಗಿ, ಪೊಂಗಲು ಸೇವನೆ. ಮರುದಿನ ಎಲ್ಲ ಊರುಗಳಿಂದ ಸಣ್ಣ ತೇರನ್ನು ಹೊಡೆದುಕೊಂಡು ಬಂದು ಈ ಪಟ್ಟಲದಮ್ಮನ ದೇವಸ್ಥಾನಕ್ಕೆ ಸೇರಿದ ದೊಡ್ಡ ತೇರಿನ ಜೊತೆಯಲ್ಲಿ ದೇವಸ್ಥಾನದ ಸುತ್ತ ಮೂರುಬಾರಿ ಪ್ರದಕ್ಷಿಣೆ ಹೋಗುವುದು. ಜಾತ್ರೆಯಲ್ಲಿ ಎಲ್ಲಿ ನೋಡಿದರೂ ಕಡ್ಲೆಪುರಿ, ಕಲ್ಯಾಣಸೇವೆ, ಪಾನಕ, ನೀರುಮಜ್ಜಿಗೆಗಳ ವಿತರಣೆ. ಈಗಲೂ ಹೆಚ್ಚು ಕಡಿಮೆ ಹೀಗೆ ನಡೆಯುತ್ತದೆ.

## ದೊಡ್ಡನರಸೇಗೌಡ

ನಾನು ಚಿಕ್ಕಂದಿನಲ್ಲಿ ನೋಡುತ್ತಿದ್ದ ಊರಿನ ಯಜಮಾನ ದೊಡ್ಡನರಸೇಗೌಡ. ದಪ್ಪನೆಯ ಎತ್ತರದ ಆಳು. ದಪ್ಪ ದುಪಟಿತುಂಡು, ಪಂಚೆ, ಮೈಮೇಲೆ ಒಂದು ಷರಟು. ಅದರಮೇಲೆ ದುಪ್ಪಟಿ. ತಲೆಗೊಂದು ರುಮಾಲು. ಎರಡು ಕಿವಿಗೂ ದೊಡ್ಡ ಓಲೆ. ಕೈಯಲ್ಲಿ ಚಿನ್ನದ ಉಂಗುರ. ಆತ ನಡೆದುಕೊಂಡು ಬರುತ್ತಿದ್ದ ಠೀವಿಯೋ ಠೀವಿ. ಎತ್ತಿನಗಾಡಿಯಲ್ಲಿ ಊರಿಂದ ಊರಿಗೆ ಬರುತ್ತಿದ್ದರೆ ಗಾಡಿತುಂಬ ಒಬ್ಬನೇ ಕುಳಿತುಕೊಳ್ಳುತ್ತಿದ್ದ. ಹಣೆ ತುಂಬಾ ವಿಭೂತಿ. ಮುಖದ ತುಂಬ ಮೀಸೆಯೇ ಎದ್ದು ಕಾಣುತ್ತಿತ್ತು. ಯಾರಾದರೂ ನೋಡಿದೊಡನೆ ಹೇಳಬಹುದಿತ್ತು ಈತನೆ ಊರ ಯಜಮಾನ ಎಂದು. ಹಳ್ಳಿಯಲ್ಲಿ ಯಾವ ಜಗಳವಾದರೂ ಇವನದೇ ತೀರ್ಪು. ದೇವರ ಸೇವೆಗೂ ಈತನೇ ಮೊದಲು. ಒಳ್ಳೆ ಜಟ್ಟಿರೀತಿ ಕಾಣುತ್ತಿದ್ದ. ಈಗಲೂ ಅವರ ಮರಿಮಕ್ಕಳು ದೇವರಸೇವೆ ಮಾಡಿಕೊಂಡು ಬರುತ್ತಿದ್ದಾರೆ.

### ದೇವರಹಳ್ಳಿಯ ತಪಸೀರಾಯ–ಮುದ್ದಪ್ಪದೇವರು

ಚೌದರಿಕೊಪ್ಪಲು ಮೇಲಕ್ಕೆ ದೇವರಹಳ್ಳಿ. ಅಲ್ಲೊಂದು ಸುಂದರವಾದ ತಪಸೀರಾಯನ ಗುಡಿ. ವೈಷ್ಣವ ದೇವಾಲಯ. ಪೂಜಾರಿಗಳನ್ನು ಓಷ್ಣುವರು ಎನ್ನುತ್ತಾರೆ. ಅವರನ್ನು ವೈಷ್ಣವರೆಂದೇ ಹೇಳಬಹುದು. ಒಕ್ಕಲಿಗರಿಗಿಂತ ಸ್ವಲ್ಪ ಉತ್ತಮಜಾತಿ. ದೇವಸ್ಥಾನದ ಇತಿಹಾಸ ತಿಳಿಯದು. ಬಹು ಹಳೆಯಕಾಲದ್ದು. ನೂರೆಂಟು ಕಂಬಗಳುಳ್ಳ ದೇವಾಲಯ. ಒಂದು ಕಂಬಮಾತ್ರ ಅರ್ಧ ಉದುರಿದೆ. ಪಕ್ಕದಲ್ಲಿ ಮತ್ತೊಂದು ಕಂಬನಿಲ್ಲಿಸಿದ್ದಾರೆ. ಇನ್ನೂ ಬಿದ್ದಿಲ್ಲ. ಒಳಗಡೆ ಕತ್ತಲು. ವಿಗ್ರಹದಮೇಲೆ ಬೆಳಕು ಬೀಳುವುದು ಹೆಬ್ಬಾಗಿಲಿನಿಂದ ಮಾತ್ರ. ಇಲ್ಲದಿದ್ದರೆ ಎಣ್ಣೆ ದೀಪವೇ ಗತಿ. ದೇವಲಾಪುರದ ಪಕ್ಕದಲ್ಲಿ ಮುದ್ದಪ್ಪದೇವರ ಗುಡಿ. ಈ ದೇವರಿಗೆ ರಾತ್ರಿ ಹನ್ನೆರಡು ಗಂಟೆಗೆ ಪೂಜೆ. ಪೂಜಾರಿ ದೇವಸ್ಥಾನಕ್ಕೆ ಬಂದವರಿಗೆ ಊಟ ಹಾಕಿ ಬರುವ ಹೊತ್ತಿಗೆ 12 ಗಂಟೆ ಆಗಿರುತ್ತಿತ್ತು. ಬೇರೆ ಬೇರೆ ಊರಿನಿಂದ ಬಂದ ವರು ದೇವಸ್ಥಾನದ ಸುತ್ತಲೂ ಮಲಗಿರುತ್ತಿದ್ದರು. ಪೂಜಾರಿಗೆ ಬಂದವರನ್ನೆಲ್ಲ ವಿಚಾರಿಸುವುದೇ ಕೆಲಸ. ಜಾತ್ರೆ ಬಂದರೆ ಸಾವಿರಾರು ಜನ ಸೇರುತ್ತಿದ್ದರು. ಪೂಜಾರಿ ಜಾತ್ರೆವೇಳೆಯಲ್ಲಿ ಮುಳ್ಳಿನಸೇವೆ ನಡೆಸುತ್ತಿದ್ದ. ಏಳೆಮಣೆಗೆ ಮೊಳೆ ಹೊಡೆದು ಚೂಪಾದ ಮೊಳೆಮೇಲೆ ದೇವರ ಮುಂದೆ ನಿಂತು ಧ್ಯಾನಮಾಡುವುದು ಪದ್ಧತಿ.

ದೇವರಹಳ್ಳಿ ತಪಸೀರಾಯ, ಮುದ್ದಪ್ಪದೇವರು ಹಾಗೂ ನಮ್ಮೂರ ಪಟ್ಟಲ ದಮ್ಮ ದೇವರುಗಳಿಗೆ ನಮ್ಮ ತಂದೆ ಎರಡು ಅಥವಾ ಮೂರು ವರ್ಷಕ್ಕೊಮ್ಮೆ ಉತ್ಸವ ಕಾರ್ಯ ನಡೆಸುತ್ತಿದ್ದರು.

### ತಂದೆ ಮರಣ

1937ರಲ್ಲಿ ಈ ಪಟ್ಟಲದಮ್ಮನ ಹಬ್ಬಕ್ಕೆ ನಾನು ನನ್ನತಾಯಿ ಊರಿಗೆ ಹೋಗಿದ್ದೆವು. ಶುಕ್ರವಾರ ಹಬ್ಬ. ಗುರುವಾರ ರಾತ್ರಿಯೇ ತಂದೆಯವರಿಗೆ ಆರೋಗ್ಯ ಸರಿಯಿಲ್ಲ ಎಂಬ ಸಮಾಚಾರ ಗೊತ್ತಾಯಿತು. ಸರಿ, ಬೆಂಗಳೂರಿಗೆ ಹಿಂತಿರುಗಿದೆವು. ನಮ್ಮ ತಂದೆಗೆ ಜ್ವರ ಇತ್ತು. ದೇವೋಜಿರಾವ್ ಪಾಂಡ್ರೆ ಜತೆ ಯಲ್ಲಿದ್ದರು. ಸೋಮವಾರದವೇಳೆಗೆ ಕಾಯಿಲೆ ಹೆಚ್ಚಾಯಿತು. ಸಂಜೆ ಡಾ॥ ನಳಿಗೆಯವರನ್ನು ಕರೆದು ತೋರಿಸಿದೆವು. ಮಂಗಳವಾರ ಬೆಳಿಗ್ಗೆ ನಮ್ಮ ತಂದೆ ನನ್ನ ತಾಯಿಯನ್ನು ಕರೆದು "ನಾನಿನ್ನು ಬದುಕುವುದಿಲ್ಲ" ಎಂದರು. 'ಹೇ ರಾಮ' ಎನ್ನುತ್ತ ಕಣ್ಣುಮುಚ್ಚಿದರು. ದೇವೋಜಿರಾವ್ ಪಾಂಡ್ರೆ, ನಳಿಗೆಯವರಿಬ್ಬರು ಬಂದರು. ಮುಂದಿನ ಏರ್ಪಾಟೆಲ್ಲ ಅವರದೇ. ಹೊಟ್ಟೆಬೋರಣ್ಣ ಉತ್ತರಕ್ರಿಯೆಗೆ ಬೇಕಾದ ಹಣ ಸಾಲಕೊಡಿಸಿದ. ಶಾನಯ್ಯ ನಮ್ಮ ತಂದೆಯಿಂದ ಪಡೆದಿದ್ದ ಸಾಲದ ಹಣದ ಸ್ವಲ್ಪ ಭಾಗವನ್ನು ತಂದುಕೊಟ್ಟ. ಹೇಗೋ, ಎಲ್ಲ ನಡೆಯಿತು.

ಸಂಸಾರದ ಜವಾಬ್ದಾರಿ ನನ್ನ ತಾಯಿಯಮೇಲೆ ಬಿತ್ತು. ಮನೆಬಾಡಿಗೆ ಬರುತ್ತಿದ್ದುದು 24 ರೂಪಾಯಿಗಳು. ಅದರಲ್ಲೇ ಜೀವನ ಸಾಗಬೇಕಿತ್ತು. ನಾನು ನಮ್ಮ ತಂದೆಯನ್ನು ಕಳೆದುಕೊಂಡಾಗ ಮಿಡಲ್‌ಸ್ಕೂಲ್ 3ನೇ ತರಗತಿ ಓದುತ್ತಿದ್ದೆ. ಓದು ಮುಂದುವರಿಯಬೇಕು ಎಂದು ನನ್ನ ತಾಯಿ ಕಷ್ಟಪಟ್ಟರು.

ನಮ್ಮ ಮನೆಯಲ್ಲಿ ಬಾಡಿಗೆಗಿದ್ದ ಕೃಷ್ಣಸ್ವಾಮಿರಾವ್ ನನ್ನ ಓದಿಗೆ ಅನುಕೂಲವಾಗುವಂತೆ ಸ್ಕಾಲರ್‌ಷಿಪ್‌ಗಾಗಿ ಕಮಿಟಿಯ ಅಧ್ಯಕ್ಷ ಶ್ರೀ ಬಾಲಕೃಷ್ಣಅಯ್ಯರ್ ಅವರ ಬಳಿಗೆ ನನ್ನನ್ನು ಕರೆದೊಯ್ದರು. ಅದೇ ಮೊದಲಸಾರಿ ಅಂತ ಕಾಣುತ್ತೆ ನಾನು ಪೇಟೆಗೆ ಹೋಗಿದ್ದು. ಶ್ರೀಕೃಷ್ಣಸ್ವಾಮಿರಾವ್ ಆರ್. ಕೆ. ಎಸ್ ಮಿಡಲ್ ಸ್ಕೂಲಿನಲ್ಲಿ ಮುಖ್ಯೋಪಾಧ್ಯಾಯರಾಗಿದ್ದರು. ಬಾಲಕೃಷ್ಣಅಯ್ಯರ್ ನಾನು ಹೊನ್ನಪ್ಪನ ಮಗ ಎಂದು ತಿಳಿದೊಡನೆ ನನ್ನ ತಂದೆ ಬಗ್ಗೆ ವಿಚಾರಿಸಿದರು. ತೀರಿಕೊಂಡ ವಿಷಯ ಕೇಳಿ ಕಣ್ಣೀರಿಟ್ಟರು. ಸ್ಕಾಲರ್‌ಶಿಪ್ ಕೊಡಿಸಿದರು.

## ಹೈಸ್ಕೂಲ್ ದಿನಗಳು

ಮಾಧ್ಯಮಿಕ ಶಾಲೆಯಲ್ಲಿ ಕನ್ನಡವೇ ಶಿಕ್ಷಣ ಮಾಧ್ಯಮ. ಸಂಸ್ಕೃತ ಐಚ್ಛಿಕ ಭಾಷೆ. ಎರಡನೇ ವರ್ಷ ಸಂಸ್ಕೃತ ಓದಲು ತೊಡಗಿದೆ. ದೇಶಾಭಿಮಾನ ಆಗಲೇ ಜಾಗೃತವಾಗಿತ್ತು. ಆಗ ಹಿಂದಿ ಭಾಷೆಗೆ ಪ್ರಾಮುಖ್ಯತೆ. ಚಿಕ್ಕವರಿದ್ದರೂ ನಮ್ಮ ಮಾತುಗಳಲ್ಲಿ ಹಿಂದಿ ಮಾತುಗಳನ್ನು ಸೇರಿಸುತ್ತಿದ್ದೆವು. ಹೈಸ್ಕೂಲಿಗೆ ಬಂದಾಗ ಇಂಗ್ಲಿಷ್ ಹಾಗೂ ಕನ್ನಡ ಈ ಎರಡೂ ಶಿಕ್ಷಣ ಮಾಧ್ಯಮಗಳಿದ್ದವು. ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಪ್ರಥಮದರ್ಜೆಯಲ್ಲಿ ಪಾಸಾಗಿತ್ತು. ಆದರೂ ಕನ್ನಡ ಮಾಧ್ಯಮವನ್ನೆ ತೆಗೆದುಕೊಂಡೆ. ಮಲ್ಲೇಶ್ವರಂ ಹೈಸ್ಕೂಲಿನಲ್ಲಿ ನಾಲ್ಕನೆ ಫಾರಂ ಕನ್ನಡ ಮಾಧ್ಯಮವಾದ್ದರಿಂದ ಲೆಕ್ಕ, ವಿಜ್ಞಾನಗಳಲ್ಲಿ ನಾನು ಯಾವಾಗಲೂ ಮೊದಲು. ಉಪಾಧ್ಯಾಯರು ಪಾಠ ಮಾಡುವ ಮೊದಲೇ ಲೆಕ್ಕ ಮಾಡಿಕೊಂಡು ಹೋಗುತ್ತಿದ್ದೆ. ಅಂಕಗಣಿತ, ಬೀಜಗಣಿತ, ರೇಖಾಗಣಿತ ಎಲ್ಲದರಲ್ಲೂ ಆಸಕ್ತಿ.

ಹೈಸ್ಕೂಲಿನಲ್ಲಿ 'ವನಕುಸುಮ' ಎಂಬ ಪತ್ರಿಕೆ ಶಾಲೆಯಿಂದ ಹೊರಬರುತ್ತಿತ್ತು. ಗೀತೆಯಿಂದ ಕೆಲವು ಶ್ಲೋಕಗಳ ತಾತ್ಪರ್ಯ, ಗೀತೆಯ ಸಂದೇಶದ ವಿಚಾರವಾಗಿ ಲೇಖನಗಳನ್ನು ಆ ಪತ್ರಿಕೆಗೆ ಬರೆಯುತ್ತಿದ್ದೆ. ಅಬ್ರಹಾಂಲಿಂಕನ್ನರ ಪಾಠ ಓದಿದ ಮೇಲೆ ಆತ ದೇಶದ ಸ್ವಾತಂತ್ರ್ಯಕ್ಕಾಗಿ ಮಾಡಿದ ಹೋರಾಟದಿಂದ ಆತನಮೇಲೆ ಆಸಕ್ತಿ ಉಂಟಾಯಿತು. ಸ್ವಾತಂತ್ರ್ಯ ಹೋರಾಟಗಾರನಾದ ಶಿವಾಜಿ ನನಗೆ ಅತಿ ಗೌರವಪೂರ್ವಕವಾದ ನಾಯಕನಾಗಿದ್ದ.

ಲೇಖನ ಬರೆಯುವುದು, ಚಿತ್ರ ಬರೆಯುವುದು, ಛಾಯಾಚಿತ್ರ ತೆಗೆಯುವುದು ಎಂದರೆ ನನಗೆ ಬಹಳ ಆಸಕ್ತಿ. 'ದಿವಾಕರ' ಎಂಬ ಒಂದು ಹಸ್ತಪತ್ರಿಕೆಯನ್ನು

ಹೊರಡಿಸಿದೆ. ವಿದ್ಯಾರ್ಥಿ ಸಂಘ ಸ್ಥಾಪಿಸಿದೆ. ಇದಕ್ಕೆ ವಾರ್ಷಿಕ ಚಂದಾ ಎರಡಾಣೆ. ಈಗಿನ ಹತ್ತುಪೈಸೆ. ಆರನೇ ಫಾರಂನಲ್ಲಿದ್ದಾಗ ಶ್ರೀ ಆಂಜನೇಯ ಸಹಕಾರಿ ವಿದ್ಯಾರ್ಥಿ ಸಂಘ ಸ್ಥಾಪಿಸಿ ಎರಡಾಣೆ ಚಂದಾ ವಸೂಲಿಮಾಡಿ ಬಂದ ದುಡ್ಡಿನಲ್ಲಿ ಪೇಟೆಗೆ ಹೋಗಿ ರೀಮುಗಟ್ಟಲೆ ಪೇಪರು ತಂದು ಮಾರಿ ಎರಡುಕಾಸು ಲಾಭ ಪಡೆಯುತ್ತಿದ್ದೆವು.

ಶ್ರೀ ಎಂ. ಆರ್. ಶ್ರೀನಿವಾಸಯ್ಯಂಗಾರ್ ಐದನೇ ಫಾರಂ ತರಗತಿ ಉಪಾಧ್ಯಾಯರು. ಮುನಿಗವಿಯಪ್ಪ ಎಂಬುವರು ಅಂಕಗಣಿತದ ಮಾಸ್ತರಾಗಿದ್ದರು. ಅವರು ಕಾಲೇಜಿಗೆ ಉಪಾಧ್ಯಾಯರಾಗಿ ಹೋದಾಗ ಅವರ ಬೀಳ್ಕೊಡುಗೆ ಕಾರ್ಯಕ್ರಮಕ್ಕಾಗಿ ಹೋಟೆಲ್ ತಿಂಡಿ ಕಾಫಿಗಾಗಿ ವ್ಯವಸ್ಥೆ ಮಾಡಿದ್ದೆವು. ಶ್ರೀ ಎಂ. ಆರ್. ಶ್ರೀನಿವಾಸಯ್ಯಂಗಾರ್ರಿಗೆ ಇದು ತಿಳಿಯಿತು. “ಹೋಟೆಲ್ ತಿಂಡಿ ಬೇಡ. ಶಂಕರಪ್ಪ (ನನ್ನ ಗೆಳೆಯ)ನ ಮನೆಯಲ್ಲಿ ತಿಂಡಿ ಮಾಡಿಸಿ ಕಾಫಿಯನ್ನು ಶಾಲೆಯಲ್ಲಿ ತಯಾರಿಸಿ. ಎಲ್ಲಾ ಸೇರೋಣ. ನಾಲ್ಕು ಒಳ್ಳೆ ಮಾತನಾಡೋಣ” ಎಂದರು. ಅದೇರೀತಿ ಮಾಡಿದೆವು. ದುಡ್ಡೂ ಉಳಿಸಿದೆವು.

ನಾನು ಆಗ ಖಾದಿ ಹಾಕುತ್ತಿದ್ದೆ. ಅದನ್ನು ಹಾಕಲು ಕಲಿತದ್ದು ನಮ್ಮ ಭಾವನವರಿಂದ. ಒಂದುದಿನ ಶಾಲೆಯಿಂದ ಬರುತ್ತಿರಬೇಕಾದರೆ ಒಬ್ಬರು ಭೆಟ್ಟಿಯಾದರು. ಆಗ ದೀಪಾವಳಿ ಹಬ್ಬದ ಸಮಯ.

“ಮಗೂ, ನೀನೂ ಪಟಾಕಿ ಕೊಂಡೆಯಾ” ಎಂದರು.

“ಮೂರು ರೂಪಾಯಿ ಪಟಾಕಿ ತಂದಿದ್ದೇನೆ” ಎಂದೆ

“ಯಾರಿಗೆ ಪಟಾಕಿ ಬೇಡ ? ಆದರೆ, ಮಗೂ ಮೂರು ರೂಪಾಯಿ ಸುಟ್ಟುಹಾಕ್ತೀಯ. ಇದರಿಂದೇನು ಪ್ರಯೋಜನ. ಕೇಳೋದೆಲ್ಲ ಶಬ್ದ. ಅದರ ಬದಲು ಖಾದಿ ಹಾಕ್ಕೊ. ಬಡಜನರಿಗೆ ಅನುಕೂಲವಾಗುತ್ತೆ. ನಿನಗೂ ಒಂದು ಷರಟು ಬಂದ ಹಾಗಾಗುತ್ತದೆ” ಎಂದು ಹೇಳಿ ಹೊರಟು ಹೋದರು.

ಆ ಸಾರಿಯೇ ಪಟಾಕಿ ಹೊಡೆದದ್ದು ಕೊನೆ. ಪಟಾಕಿ ಹೊಡೆಯೋದು ನಿಲ್ಲಿಸಿದೆ.

ನನ್ನ ಹೈಸ್ಕೂಲ್ ಗೆಳೆಯ ಎಂ. ಎಸ್. ಕೃಷ್ಣಮೂರ್ತಿ ಈಗ ಮಧ್ಯ ಪ್ರದೇಶದಲ್ಲಿದ್ದಾರೆ. ರಾಮು ಹೈದರಾಬಾದಿನಲ್ಲಿದ್ದಾರೆ. ಕೃಷ್ಣೋಜಿರಾವ್ ಮತ್ತು ನಾನು ಬೆಂಗಳೂರಿಗೆ ಅಂಟಿಕೊಂಡೆವು. ನಾವು ನಾಲ್ವರೂ ಒಂದು ಗುಂಪು.

ಹೈಸ್ಕೂಲು ಓದುವಾಗಲೂ ವಿದ್ಯಾರ್ಥಿ ವೇತನಕ್ಕಾಗಿ ಅಲೆಯುವುದು ತಪ್ಪಲಿಲ್ಲ. ಸೆಂಟ್ರಲ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾಗಿದ್ದ ರಾಜಗೋಪಾಲ್ ಅವರು ಕಮಿಟಿ ಛೇರ್ಮನ್ನರಾಗಿದ್ದರು. ಪಕ್ಕದ ಮನೆಯ ವೀರಣ್ಣ ಎಂಬುವರಿಂದ ನೆರವು ದೊರೆಯಿತು. ಛೇರ್ಮನ್ನರನ್ನು ಕಂಡು ನನಗೆ ವಿದ್ಯಾರ್ಥಿ ವೇತನ ದೊರೆಯುವಂತೆ ಮಾಡಿದರು. ಎಸ್. ಎಸ್. ಎಲ್. ಸಿ. ಪರೀಕ್ಷೆ ಆದಮೇಲೆ ಸರ್ಕಾರಿ

ಇಂಟರ್ ಮೀಡಿಯೆಟ್ ಕಾಲೇಜು ಸೇರಿದೆ. ಎರಡು ವರ್ಷಗಳ ಕೋರ್ಸು. ಇಂಗ್ಲೀಷ್ ಮಾಧ್ಯಮವನ್ನು ತೆಗೆದುಕೊಂಡೆ.

## ಸ್ವಾತಂತ್ರ್ಯ ಚಳುವಳಿ ದಿನಗಳು

1940ರ ಸಮಯ. ದೇಶದ ಸ್ವಾತಂತ್ರ್ಯಕ್ಕಾಗಿ ಎಲ್ಲೆಲ್ಲೂ ಚಳುವಳಿ. ಶಾಲಾ ಕಾಲೇಜುಗಳಲ್ಲಿ ಮುಷ್ಕರ. ಇದು ವಿದ್ಯಾರ್ಥಿಗಳ ಸ್ವಂತಕ್ಕಲ್ಲ. ಹತ್ತುಗಂಟೆಗೆ ಕಾಲೇಜಿಗೆ ಹೋಗುವುದು. ಅಲ್ಲಿ ಸಭೆ ಮೆರವಣಿಗೆಗಳಲ್ಲಿ ಭಾಗವಹಿಸುವುದು. ತುಳಸಿತೋಟ, ಕಬ್ಬನ್ ಪಾರ್ಕ್‌ಗಳಲ್ಲಿ ಸಭೆ ಸೇರುತ್ತಿತ್ತು. ಎಲ್ಲ ಮುಗಿಸಿಕೊಂಡು ಸಂಜೆ ಮನೆಗೆ ಬರುತ್ತಿದ್ದೆವು. ಯುವಕರಾಗಿದ್ದ ನಮಗೆ ಆಗ ದೇಶಕ್ಕೆ ಸ್ವಾತಂತ್ರ್ಯ ಬಂದರೆ ಸಾಕು ಎನ್ನಿಸಿತ್ತು. ಎಷ್ಟೋಸಲ ಸರ್ಕಾರದ ಆಸ್ತಿ ಪಾಸ್ತಿಗಳಿಗೆ ನಷ್ಟ ಮಾಡಲು ಯತ್ನಿಸಿದ್ದು ಉಂಟು. ಮಲ್ಲೇಶ್ವರದ ಪೌಢಶಾಲೆಯ ಲ್ಯಾಬರೇಟರಿಗೆ ನುಗ್ಗಿ ಸ್ಫೋಟಕವಸ್ತುಗಳನ್ನು ಕದ್ದು ಅಡಗಿಸಿಟ್ಟೆವು. ಗರಿ ಮೇಲ್ಛಾವಣಿ ಹೊಂದಿದ್ದ ಕೊಠಡಿಗಳಿಗೆ ಬೆಂಕಿ ಇಟ್ಟೆವು. ಒಂದೇ ಎರಡೇ. ಶಾಲೆಗಳಿಗೆ ಹೋಗುತ್ತಿದ್ದ ಹುಡುಗರನ್ನು ತಡೆದು ನಿಲ್ಲಿಸಿದೆವು. ಇವೆಲ್ಲ ಆಗ ಸಾಮಾನ್ಯ. ಎಲ್ಲೆಂದರಲ್ಲಿ ಚಳುವಳಿಗಾರರು.

ಚಳುವಳಿಕಾಲದಲ್ಲಿ ಕಳ್ಳ ಪತ್ರಿಕೆಗಳನ್ನು ಹೊರಡಿಸುತ್ತಿದ್ದರು. ಸುಖತೀರ್ಥ, ವ್ಯಾಸತೀರ್ಥ ಎಂಬುವರು ಈ ಕಾರ್ಯಕ್ಕೆ ಮುಖ್ಯಸ್ಥರಾಗಿದ್ದರು. ನಾವು ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಿಗೆ ಮನಸೋತಿದ್ದೆವು. ಚರಕಾಸಂಘದವರ ಸಹಾಯದಿಂದ ಚರಕಾ ತರಗತಿ ಪ್ರಾರಂಭಿಸಿದೆವು. ಮಲ್ಲೇಶ್ವರದಲ್ಲಿ ತರಗತಿಗಳು. ನೂಲು ತೆಗೆಯುವುದನ್ನು ಅನೇಕರಿಗೆ ಕಲಿಸಿದೆವು. ಚರಕಾ ತಂದು ಮನೆಮನೆಗೂ ಮಾರಿದೆವು. ವಯಸ್ಕರ ಶಿಕ್ಷಣವನ್ನು ಪ್ರಾರಂಭಿಸಿದೆವು. ಮಲ್ಲೇಶ್ವರಕ್ಕೂ ಶ್ರೀರಾಮಪುರಕ್ಕೂ ನಡುವೆ ಹಳ್ಳವೊಂದರಲ್ಲಿ ಗುಡಿಸಲುಗಳು ಇದ್ದವು. ಅಲ್ಲಿನ ಜನರಿಗೆ ಶಿಕ್ಷಣ ಕೊಡುವ ಕಾರ್ಯವನ್ನು ಹಮ್ಮಿಕೊಂಡೆವು. ಸ್ವಲ್ಪದಿನ ಇದು ನಡೆಯಿತು. ಆಗ ನನ್ನ ಜೊತೆಗಿದ್ದವರು ಶ್ರೀ ಶೇಷಗಿರಿರಾವ್, ವೆಂಕಟೇಶ್, ಲಕ್ಷ್ಮಿನಾರಾಯಣ ಮೊದಲಾದವರು. ನನ್ನ ಗೆಳೆಯರು ಎಷ್ಟೋ ಜನ ಚಳುವಳಿಯಲ್ಲಿ ಭಾಗವಹಿಸಿ ಜೈಲುವಾಸ ಅನುಭವಿಸಿದರು.

## ಫುಡ್ ವಾಲಂಟೀರ್ಸ್

1941-42 ; ಆಗ ರೇಷನ್ ಕಾಲ. ಪಡಿತರ ಪದ್ಧತಿ. ಅಕ್ಕಿ ಎಲ್ಲೂ ಸಿಗುತ್ತಿರಲಿಲ್ಲ. ಅಂಗಡಿಗಳ ಮುಂದೆ ಜನಗಳ ನೂಕು ನುಗ್ಗಲು. ಆಗ ನಾವು ಗೆಳೆಯರು ಸೇರಿ Food Volunteers ಎಂಬ ಸಂಸ್ಥೆಯನ್ನು ಸ್ಥಾಪಿಸಿದೆವು. ಇದಕ್ಕೆ ಜಿಲ್ಲಾಧಿಕಾರಿಗಳ ಒಪ್ಪಿಗೆಯೂ ಸಿಕ್ಕಿತು. ಈ ಸಂಸ್ಥೆಯ ಮೂಲಕ ಅಂಗಡಿಗಳ ಮುಂದೆ

ಜನ ಸರತಿ ಸಾಲಿನಲ್ಲಿ ನಿಲ್ಲಬೇಕೆಂಬುದನ್ನು ಹೇಳಿದೆವು ಜನ ಹಾಗೆ ನಡೆದುಕೊಂಡರು. ಬೆಂಗಳೂರಿಗೆ 'ಕ್ಯೂ' ಬಂದದ್ದು ಅದೇ ಮೊದಲು ಎನ್ನಬಹುದು. ವಿದೇಶಗಳಲ್ಲಿ ಜನ ಸಾಲಾಗಿನಿಂತು ತಮ್ಮ ಸರದಿಗಾಗಿ ಕಾಯುತ್ತಾರೆ ಎಂಬುದನ್ನು ಪತ್ರಿಕೆಗಳಲ್ಲಿ ಓದಿದ್ದೆವು. ನಮ್ಮಲ್ಲೂ ಇದು ಏಕಾಗಬಾರದೆಂದು ನಿಶ್ಚಯಿಸಿ ಕ್ಯೂ ನಿಲ್ಲಲು ಜನರಿಗೆ ತಿಳಿಸಲಾಯಿತು. ಮೊದ ಮೊದಲು ತುಸು ಕಷ್ಟವೇ ಆಯಿತು. ನಾನುಮುಂದು ತಾನುಮುಂದು ಎನ್ನುತ್ತಿದ್ದರು. ಕಡೆಗೆ ಜನ ಬಂದಂತೆಲ್ಲ ಚೀಟಿ ಬರೆದುಕೊಡಲು ಆರಂಭಿಸಿದೆವು. ಆ ಚೀಟಿಯಲ್ಲಿ ಒಂದು ಸಂಖ್ಯೆ ಇರುತ್ತಿತ್ತು. ಸಂಖ್ಯೆಯ ಪ್ರಕಾರ ಒಬ್ಬರ ಹಿಂದೆ ಒಬ್ಬರು ನಿಲ್ಲುವಂತೆ ಏರ್ಪಾಟು ಮಾಡಲಾಯಿತು. ಕ್ರಮೇಣ ಇದು ರೂಢಿಗೆ ಬಂತು.

ಜನಗಳೇನೊ ಸಾಲಾಗಿ ನಿಲ್ಲುತ್ತಿದ್ದರು. ಆದರೆ ಅಂಗಡಿಯವರ ಸಹಕಾರ ವಿರುತ್ತಿರಲ್ಲಿಲ್ಲ. ಒಳಗೆ ಸರಕು ಇದ್ದರೂ ಇಲ್ಲವೆನ್ನುತ್ತಿದ್ದರು. ನಾವೇ ಎಷ್ಟೋ ಸಾರಿ ಅಂಗಡಿ ಕೆಲಸವನ್ನು ಮಾಡುತ್ತಿದ್ದೆವು. ಬಡವರೇ ಇರುತ್ತಿದ್ದ ಗುಡಿಸಲುಗಳಿಗೆ ಹೋಗಿ ಅಲ್ಲಿಯ ಜನರಿಗೆ ಸಹಾಯ ಮಾಡುತ್ತಿದ್ದೆವು. ಪಡಿತರ ಪದ್ಧತಿ ಚೀಟಿ (ರೇಷನ್ ಕಾರ್ಡು) ಯನ್ನು ಸರ್ಕಾರ ವತಿಯಿಂದ ಕೊಡಲು ಆರಂಭಿಸಿದರು. ಅದಕ್ಕೆ ಬೇಕಾದ ಅರ್ಜಿಗಳನ್ನು ಬರೆದುಕೊಟ್ಟು ಜನರಿಗೆ ಕಾರ್ಡು ತಲಪುವಂತೆ ಮಾಡುತ್ತಿದ್ದೆವು. ಕಾರ್ಡು ಮೊದಲು ತುಂಬಾ ದೊಡ್ಡದಿರುತ್ತಿದ್ದವು. ಅದನ್ನು ಚಿಕ್ಕದಾಗಿ ತಯಾರು ಮಾಡಲು ಸರ್ಕಾರಕ್ಕೆ ಸೂಚನೆ ನೀಡಲಾಯಿತು. ಸರ್ಕಾರ ಇದಕ್ಕೆ ಒಪ್ಪಿಗೆ ನೀಡಿ ಮಡಿಕೆಯಾಗಿ ಮಡಿಚುವಂತಹ ಕಾರ್ಡನ್ನು ದಯಪಾಲಿಸಿತು. ಫುಡ್ ವಾಲಂಟೀರ್ಸ್ ಸರಿಸ್ಥೆಯ ಧ್ಯೇಯ ಕಾರ್ಯಗಳು ಈ ವಿವರಗಳು ಪತ್ರಿಕೆಗಳಲ್ಲಿ ಬರಬೇಕು ಎಂದು ಬಯಸಿ ನಾವೆಲ್ಲ ಪತ್ರಿಕಾಲಯವನ್ನು ನೋಡಲು ಹೋದೆವು. ಆಗಿನ ಪ್ರಸಿದ್ಧ ಪತ್ರಿಕೆ ವಿಶ್ವ ಕರ್ಣಾಟಕ.

## ಸಂಪಾದಕನೇ ಕೆಲಸಗಾರ

ವಿಶ್ವ ಕರ್ಣಾಟಕ ಸಂಪಾದಕರ ಕೊಠಡಿಗೆ ಹೋದೆವು. ಅವರು ಅಲ್ಲಿರಲಿಲ್ಲ. ಸ್ವಲ್ಪ ಹೊತ್ತು ಕುಳಿತಿದ್ದೆವು. ಒಬ್ಬ ಕುಳ್ಳನೆಯ ವ್ಯಕ್ತಿ, ಪಂಚೆ ಜುಬ್ಬ ಧರಿಸಿ ಕೈನಲ್ಲಿ ತುಂಡು ಕಾಗದ ಹಿಡಿದಿದ್ದರು. ತಲೆ ಕೆದರಿತ್ತು. ಯಾರೋ ಕೆಲಸಗಾರ ಎಂದು ಕೊಂಡೆವು.

"ಏನು ಬೇಕಿತ್ತು ?" ಎಂದರು.

"ಸಂಪಾದಕರನ್ನು ಕಾಣಬೇಕು ?" ಎಂದೆವು. ನಮ್ಮ ಸಂಸ್ಥೆಯ ಹೆಸರನ್ನು ತಿಳಿಸಿದೆವು.

"ತಾಳಿ, ಸಂಪಾದಕರನ್ನು ಕಳುಹಿಸಿಕೊಡುತ್ತೇನೆ" ಎಂದವರೇ ಒಳಕ್ಕೆ ಹೋದರು. ಅರ್ಧ ಗಂಟೆಯಾದರೂ ಬರಲಿಲ್ಲ. ನಮಗೂ ಬೇಸರವಾಯಿತು.

ಅಷ್ಟರಲ್ಲಿ ಮೊದಲು ನೋಡಿದ ವ್ಯಕ್ತಿಯೇ ಕೊಠಡಿ ಒಳಕ್ಕೆ ಬಂದು ಸಂಪಾದಕರ ಕುರ್ಚಿಯ ಮೇಲೆ ಕುಳಿತದ್ದು ನಮ್ಮ ಗಮನಕ್ಕೆ ಬಂತು.

"ಕ್ಷಮಿಸಿ ಸಾರ್. ನಾವು ಹುಡುಗರು. ತಾವೇ ಸಂಪಾದಕರು ಎಂಬುದು ತಿಳಿಯಲಿಲ್ಲ." ಎಂದು ಕೈ ಜೋಡಿಸಿದೆವು.

ಅವರು ನಗುತ್ತಲೇ ನಾವು ಬಂದ ಕಾರಣ, ಸಂಸ್ಥೆಯ ವಿವರ ಎಲ್ಲಾ ಕೇಳಿ ತಿಳಿದರು. ಎಲ್ಲವನ್ನೂ ಕಾಗದದ ಮೇಲೆ ಗುರುತು ಹಾಕಿಕೊಂಡರು. ತಾವೂ ಮಲ್ಲೇಶ್ವರದಲ್ಲೆ ವಾಸ ಇರುವುದು ಎಂಬುದನ್ನು ತಿಳಿದರು. ನಮಸ್ಕಾರ ಹೇಳಿ ಹೊರ ಬಂದೆವು.

ಹೊರಗಡೆ ಒಬ್ಬ ಕೆಲಸಗಾರ ನಿಂತಿದ್ದ. ಸಂಪಾದಕರು ಯಾರು ಎಂದು ಕೇಳಿದೆವು. ಆಗಷ್ಟೆ, ನಮಗೆ ತಿಳಿದದ್ದು ಅವರು ಸಿದ್ದವನಹಳ್ಳಿ ಕೃಷ್ಣಶರ್ಮರು (ಈಗ ದಿವಂಗತರು) ಎಂದು. ನಮಗಾದ ಸಂತೋಷ ಅಷ್ಟಿಷ್ಟಲ್ಲ. ಆವೇಳೆಗೆ ಅವರ ಅನೇಕ ಕೃತಿಗಳನ್ನು ಓದಿದ್ದೆ. ಅವರ ಶೈಲಿ ನನಗೆ ಮೆಚ್ಚುಗೆಯಾಗಿತ್ತು.

ಮರುದಿನ ಬೆಳಿಗ್ಗೆ ಪತ್ರಿಕೆಯಲ್ಲಿ Food Volunteers ಎಂದು ದೊಡ್ಡ ಅಕ್ಷರಗಳಲ್ಲಿ ಒಂದು ಕಾಲಂ ಪೂರ್ತ ನಮ್ಮ ಸಂಸ್ಥೆ ಬಗ್ಗೆ ಪ್ರಕಟಿಸಿದ್ದರು. ಮತ್ತೊಮ್ಮೆ ಅವರನ್ನು ಕಂಡುಬಂದೆವು.

## ಮಲ್ಲೇಶ್ವರದಲ್ಲಿ ಗಾಂಧೀ ಸಾಹಿತ್ಯ ಸಂಘ

1942ರ ಕ್ವಿಟ್ ಇಂಡಿಯಾ ಚಳುವಳಿ ಯಾರಿಗೆ ತಾನೆ ಗೊತ್ತಿಲ್ಲ ! ಕಾಲೇಜಿಲ್ಲದೆ ಅಲೆಯುವ ನಮ್ಮಂಥ ಹುಡುಗರನ್ನು ಕಲೆಹಾಕಿ ಏನಾದರೂ ರಚನಾತ್ಮಕ ಕಾರ್ಯ ಮಾಡಿಸಬೇಕೆಂದು ಹಿರಿಯರಾದ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು, ಮಂಜುನಾಥ್ ಹಾಗೂ ಕೃಷ್ಣಸ್ವಾಮಿ ಎಂಬುವರು ಯೋಜನೆ ಹಾಕಿದರು. ನಾನೂ ಸೇರಿಕೊಂಡಂತೆ ಶ್ರೀ ಗಜೇಂದ್ರ (ಈಗ ಸ್ವಾಮಿ ವಿಶ್ವಾನಂದ), ರಾಮಚಂದ್ರ, ರಾಮಮೂರ್ತಿ, ಚಂದ್ರಶೇಖರ, ಸಿ. ಆರ್. ರಾಮು ಮೊದಲಾದ ಮಿತ್ರರು ಗಾಂಧೀ ಜಯಂತಿ ಸಮಯದಲ್ಲಿ ಸೇರಿ ಬೆಳಿಗ್ಗೆಯೆಲ್ಲ ಗಾಂಧೀಸಾಹಿತ್ಯ ಮಾರಾಟ, ಸಂಜೆ ಮಲ್ಲೇಶ್ವರದ ಶ್ರೀರಾಮ ಮಂದಿರದಲ್ಲಿ ಸಭೆಸೇರಿ ಭಾಷಣ ಮಾಡುವುದು ಎಂದು ತೀರ್ಮಾನಿಸಿದೆವು. ಹಾಗೆ ಮಾಡಿದೆವು. ಶ್ರೀ ಕೃಷ್ಣಶರ್ಮರದೇ ಮಾರ್ಗದರ್ಶನ. ಗಾಂಧೀ ಜಯಂತ್ಯುತ್ಸವದ ಸಲುವಾಗಿ ಸಂಗ್ರಹಿಸಿದ್ದ ಹಣದಲ್ಲಿ ಉಳಿದದ್ದನ್ನು ಗಾಂಧೀ ಸಾಹಿತ್ಯ ಕೊಳ್ಳಲು ಬಳಸಿದೆವು. ಗ್ರಂಥಗಳನ್ನು ಖರೀದಿ ಮಾಡಿದೆವು. ಶ್ರೀ ಕಂದಾಳೆ ಕೃಷ್ಣಯ್ಯಂಗಾರ್ ಅವರು ಸಲಹೆ ನೀಡಿದಂತೆ ಶ್ರೀ ಕೃಷ್ಣಶರ್ಮರು ಅಪೇಕ್ಷೆ ಪಟ್ಟಂತೆ ಒಂದು ಸಂಘದ ಸ್ಥಾಪನೆಯೂ ಆಯಿತು. ಶ್ರೀ ಕೃಷ್ಣಯ್ಯಂಗಾರ್ ಸಂಘಕ್ಕೆ ಗಾಂಧೀ ಸಾಹಿತ್ಯ ಸಂಘ ಎಂದಿಡಲು ಸೂಚಿಸಿದರು. ಮೊದಲು ಸಂಘದ ಕಟ್ಟಡವೆಂದರೆ ಪುಸ್ತಕಾಲಯ.

ಆ ಪುಸ್ತಕಾಲಯ ವಿರುತ್ತಿದ್ದುದೂ ಸ್ನೇಹಿತರ ಮನೆಗಳಲ್ಲಿ. ಮೊದಲು ಶ್ರೀ ಎಸ್. ಜಿ. ರಾಮಚಂದ್ರ (ಈಗ ಕಿರ್ಲೋಸ್ಕರ್‌ನಲ್ಲಿ ದೊಡ್ಡ ಇಂಜಿನಿಯರ್),ಆರ್. ರಂಗನಾಥ, ಅನಂತರ ರಾಮಮೂರ್ತಿ ಅವರುಗಳ ಮನೆಯಲ್ಲಿ ಪುಸ್ತಕ ಭಂಡಾರವಿತ್ತು. ಕಡೆಗೆ ನನ್ನ ಮನೆಯಲ್ಲೂ ಇತ್ತು. ಹೀಗೆ ಪ್ರಾರಂಭವಾಯಿತು ಗಾಂಧೀ ಸಾಹಿತ್ಯ ಸಂಘ.

1943ರಲ್ಲಿ ಗಾಂಧೀಜಯಂತಿ ಮಾಡಲು ಶ್ರೀ ಕೃಷ್ಣಶರ್ಮರು ಹೇಳಿದರು. ಅವರ ಹೆಸರಿನಲ್ಲಿ ವಿನಂತಿ ಬರೆದು ಪುಸ್ತಕವನ್ನು ಹಿಡಿದು ಹಣ ವಸೂಲಿಗೆ ಹೊರಟೆವು. ಎಷ್ಟೋ ಮಂದಿ ಕೊಟ್ಟರು. ಕೆಲವರು ಊಹೂ ಎಂದರು. ಜಯಂತಿ ಮಾಡಲು ಜಿಲ್ಲಾಧಿಕಾರಿಗಳ ಅಪ್ಪಣೆ ಬೇಕಾಗಿತ್ತು. ಅಪ್ಪಣೆ ಇದ್ದರಷ್ಟೆ ರಾಮಮಂದಿರದಲ್ಲಿ ಸಭೆ ಸೇರಲು ಅವಕಾಶ. ಭಾಷಣ ಮಾಡಲು ಬರುತ್ತಿದ್ದ ಜನ ಹಿಂದು ಮುಂದು ನೋಡುತ್ತಿದ್ದರು. ಸೋಫಿಯಾವಾಡಿಯಾ, ತಿಮ್ಮಾರೆಡ್ಡಿ ಮೊದಲಾದ ಹಿರಿಯರು ಭಾಷಣ ಮಾಡಲು ಧೈರ್ಯವಾಗಿ ಬಂದರು. ಗಾಂಧೀಪಟ ಇಟ್ಟು ಹಿಂದೆ ಒಂದು ಪರದೆ ಇಳಿ ಬಿಟ್ಟು ಮುಂದೆ ನಾಲ್ಕು ಹೂ ಕುಂಡ ಇಟ್ಟಿದ್ದೆವು. ಇಷ್ಟು ಅಲಂಕಾರ. ಭಾಷಣಕಾರರಿಗೆ ಹೂವಿನ ಹಾರ ಇಲ್ಲ. ಕಾಫಿ ಕೇಳುವಂತಿಲ್ಲ. ಕಾರ್ಯಕ್ರಮ ಬೆಳಿಗ್ಗೆ ಪ್ರಾರ್ಥನೆಯಿಂದ ಪ್ರಾರಂಭ. ಕೆಲವರು ರಾಮಮಂದಿರದಲ್ಲಿ ಮಲಗುತ್ತಿದ್ದೆವು. ಉಳಿದವರು ಪ್ರಾರ್ಥನೆಗೆಂದು ಬೆಳಿಗ್ಗೆ ಮನೆಯಿಂದ ಬರುತ್ತಿದ್ದೆವು. ಆಶ್ರಮದ ಮಾದರಿ ಭಜನೆ. ಮಧ್ಯಾಹ್ನ ಒಂದು ಗಂಟೆಗೆ ನೂಲುವುದು. ಸಂಜೆ ಪ್ರಾರ್ಥನೆಯ ನಂತರ ಭಾಷಣ. ದಸರಾ ಕಾಲ ಬೇರೆ. ಹುಡುಗರಿಗೆ ಸಡಗರವೋ ಸಡಗರ. ಖಾದಿಬಟ್ಟೆ ಮಾರಾಟದ ಕಾರ್ಯಕ್ರಮವಿರುತ್ತಿತ್ತು. ಸುಮಾರು ಎರಡು ಮೂರು ಸಾವಿರ ರೂಪಾಯಿಗಳಷ್ಟು ಬಟ್ಟೆ ಮಾರಾಟವಾಯಿತು ಆ ವರುಷ. ನೂಲುವ ಸ್ಪರ್ಧೆ, ರಾಷ್ಟ್ರಗೀತೆ ಸ್ಪರ್ಧೆಗಳನ್ನು ಏರ್ಪಡಿಸುತ್ತಿದ್ದೆವು.

ಒಂದು ಸಾರಿ ರಾಷ್ಟ್ರೀಯ ವಾರ ಆಚರಣೆಯ ರಚನಾತ್ಮಕ ಕಾರ್ಯದಲ್ಲಿ ಶ್ರೀ ಠಕ್ಕರ್‌ಬಾಪಾ ಅವರ ಭಾಷಣ ಕೇಳಿ ಸ್ಫೂರ್ತಿಗೊಂಡೆವು. ರೈಲ್ವೆ ನಿಲ್ದಾಣದ ಪಕ್ಕದಲ್ಲಿದ್ದ ಹರಿಜನ ಕಾಲೋನಿಯಲ್ಲಿ ಅಂಕಿ ಅಂಶ ಸಂಗ್ರಹಣ ಕಾರ್ಯಕ್ರಮಕ್ಕೈಕೊಂಡೆವು. ಠಕ್ಕರ್‌ಬಾಪಾ ಅವರು ನಮ್ಮ ಕಾರ್ಯ ಮೆಚ್ಚಿದರು.

ಮತ್ತೊಮ್ಮೆ ಶ್ರೀ ಎಸ್. ಗೋಪಾಲಸ್ವಾಮಿ ಅವರ ಸಲಹೆಯ ಮೇರೆಗೆ ಮಲ್ಲೇಶ್ವರಂ ಕೋ-ಆಪರೇಟೀವ್ ಬ್ಯಾಂಕಿನ ವರದಿಯನ್ನು ಬ್ಯಾಂಕಿನ ಸದಸ್ಯರಿಗೆ ತಲುಪಿಸಿ ಮೂವತ್ತರಿಂದ ಮೂವತ್ತೈದು ರೂಪಾಯಿ ಸಂಪಾದಿಸಿದೆವು. ಇವನ್ನೆಲ್ಲ ಗಾಂಧೀ ಸಾಹಿತ್ಯ ಸಂಘದ ಕಾರ್ಯಕ್ರಮಗಳಿಗಾಗಿ ವಿನಿಯೋಗಿಸಿದೆವು.

ಶ್ರೀ ಇಗ್ನೇಷಿಯಸ್ ಎಂಬುವರು ಗಾಂಧೀಜಿ ಮತ್ತು ನೆಹರೂರವರ ಭಾವಚಿತ್ರಗಳಿದ್ದ ಚಿತ್ರಪಟಗಳನ್ನು ಸುಲಭ ಬೆಲೆಗೆ ಕೊಟ್ಟರು. ಅವನ್ನು ಮಾರಿ ಸಂಘಕ್ಕೆ ಹಣ ಒದಗಿಸಿದೆವು. 1943ರಲ್ಲಿ ಬಡವರಿಗೆ ಅನ್ನದಾನ ವ್ಯವಸ್ಥೆ ಮಾಡಿದೆವು.

ಹೀಗೆ ಇವೆಲ್ಲ ಆ ದಿನಗಳಲ್ಲಿ ಅಚ್ಚುಕಟ್ಟಾಗಿ ನಡೆಯುತ್ತಿತ್ತು. ಕಾರ್ಯಕರ್ತರೆಂದರೆ ಎಲ್ಲರೂ ಗೌರವಿಸುತ್ತಿದ್ದರು.

ಗಾಂಧೀ ಸಾಹಿತ್ಯ ಸಂಘದಲ್ಲಿ ಕಸ್ತೂರಿಬಾ ದಿನಾಚರಣೆ, ವಿವೇಕಾನಂದ, ರಾಮಕೃಷ್ಣರ ಜನ್ಮದಿನ, ಗೀತಾಜಯಂತಿ ಕಾರ್ಯಕ್ರಮಗಳು ನಡೆಯುತ್ತಿದ್ದವು. ಕಟ್ಟಡವಾಗುವವರೆಗೂ ಇವೆಲ್ಲ ರಾಮಮಂದಿರದಲ್ಲೆ.

## ಚಳುವಳಿಗಳಲ್ಲಿ ಭಾಗವಹಿಸಿದ್ದು

1942ರ ರಾಷ್ಟ್ರೀಯ ಆಂದೋಲನದಲ್ಲಿ ಮುಖ್ಯವಾದ ಕಾರ್ಯಕ್ರಮ ಎಂದರೆ ನಿಗೂಢ ಪತ್ರಿಕೆಗಳನ್ನು ಹೊರಡಿಸುವುದು. ಮಲ್ಲೇಶ್ವರಂ ವೃತ್ತದ ಹತ್ತಿರವೇ ಪೋಲೀಸ್ ಠಾಣೆ. ಅದರ ಪಕ್ಕದ ಮಹಡಿ ಮೇಲೆ ಒಂದು ಟೈಪ್‌ರೈಟಿಂಗ್ ಸಂಸ್ಥೆ. ಅಲ್ಲಿಯೇ ನಮ್ಮ ಪತ್ರಿಕೆಯ ಮುದ್ರಣದ ಕಛೇರಿ. ನಾನು, ಗೋಪಾಲಕೃಷ್ಣರಾವ್, ಲಕ್ಷ್ಮೀನಾರಾಯಣ ಈ ಪತ್ರಿಕೆ ಹೊರಡಿಸುವವರು. ಪತ್ರಿಕೆಯನ್ನು ನಾನಾ ಹೆಸರುಗಳಲ್ಲಿ ಪ್ರಕಟಿಸುತ್ತಿದ್ದೆವು. ಕಲ್ಲಚ್ಚು ಪತ್ರಿಕೆ. ಧೈರ್ಯವಾಗಿ ಕೆಲಸ ಮಾಡುತ್ತಿದ್ದೆವು. ಪಕ್ಕದಲ್ಲಿ ಪೋಲೀಸ್ ಠಾಣೆ. ಯಾರಿಗೂ ಅನುಮಾನ ಬರುತ್ತಿರಲಿಲ್ಲ. ಪತ್ರಿಕೆ ಹಂಚುವುದು ರಾತ್ರಿವೇಳೆ. ನಾನು ನಿಕ್ಕರ್ ಒಳಗಡೆ ಪತ್ರಿಕೆ ಮಡಚಿಟ್ಟು ಗುರುತು ಇದ್ದವರಿಗೆ ಒಂದೊಂದನ್ನು ಕಳ್ಳತನದಲ್ಲಿ ಹಂಚುತ್ತಿದ್ದೆ. ಮೂರು ಕಾಸು, ಒಂದಾಣೆ ಕೊಡುತ್ತಿದ್ದರು. ಪತ್ರಿಕೆ ಹಂಚಬೇಕಾದರೆ ನಮ್ಮ ಪ್ರಧಾನ ಕಛೇರಿ ವೆಂಕಟೇಶ ಸ್ಟೋರ್ಸ್. ಪುಸ್ತಕ ಮತ್ತು ಪತ್ರಿಕೆ ಅಂಗಡಿ. ಯಜಮಾನರನ್ನು ವೆಂಕಟಾಚಾರ್ ಅಥವಾ ವೆಂಕಟಪ್ಪ ಎಂದು ಕರೆಯುತ್ತಿದ್ದವು. ಆತ ಬ್ರಹ್ಮಚಾರಿ. ಅಂಗಡಿಗೆ ಹೋದವರಿಗೆಲ್ಲಾ ಕಾಫಿ ಕೊಡುತ್ತಿದ್ದ. ಒಂದುಸಾರಿ ಪತ್ರಿಕೆ ಕೊಟ್ಟು ಹೋದೆ. ಅವನ ಸ್ನೇಹಿತ ಬಂದವನೇ ಅಂಗಡಿ ಶೋಧಿಸಿದ. ಪತ್ರಿಕೆ ಸಿಕ್ಕಿತು. ಯಜಮಾನರನ್ನು ಬಂಧಿಸಿದ. ಐದಾರು ತಿಂಗಳು ಜೈಲು ಶಿಕ್ಷೆ ವಿಧಿಸಿದರು. ಆಗ ನಾನೂ ಅಂಗಡಿ ನೋಡಿಕೊಂಡು ವ್ಯಾಪಾರ ಮಾಡಿದ್ದುಂಟು. ಆಗಿನ "ಬ್ಲಿಟ್ಜ್' ಪತ್ರಿಕೆ, ತಮಿಳಿನ 'ಕಲ್ಕಿ' 'ಆನಂದ ವಿಕಟನ್' ಪತ್ರಿಕೆಗಳನ್ನು ತಂದು ಮನೆಮನೆಗೂ ಹಂಚುತ್ತಿದ್ದೆ. ಕೃಷ್ಣೋಜಿರಾವ್ ಎಂಬ ನಿಷ್ಠಾವಂತ ಸೇವಕ ಇದ್ದ. ಅವನ ಸಹಕಾರ ಇತ್ತು. ಮನೆಮನೆಗೂ ಪತ್ರಿಕೆ ಹಂಚುತ್ತಿದ್ದ. ಅದರ ಲೆಕ್ಕ, ವ್ಯವಸ್ಥೆ ನಾನು ಮತ್ತು ವೆಂಕಟಪ್ಪನ ಸ್ನೇಹಿತರು ನೋಡಿಕೊಳ್ಳುತ್ತಿದ್ದೆವು.

ವೆಂಕಟೇಶ್ವರ ಸ್ಟೋರ್ಸ್ ಈಗಿಲ್ಲ. ಆಗಿನ ಕಾಲಕ್ಕೆ ಅದು ಪುಸ್ತಕ ಮತ್ತು ಪತ್ರಿಕೆ ಮಾರಾಟ ಅಂಗಡಿ ಮಾತ್ರವಲ್ಲದೆ ಮಲ್ಲೇಶ್ವರದ ರಾಜಕೀಯ ಕೇಂದ್ರವೂ ಆಗಿತ್ತು. ಮಲ್ಲೇಶ್ವರದ ಪ್ರಮುಖ ವ್ಯಕ್ತಿಗಳೆಲ್ಲರೂ ಅಲ್ಲಿಗೆ ಬರದೆ ಹೋಗುತ್ತಿರಲಿಲ್ಲ. ವಿಚಾರ ವಿನಿಮಯವಾಗುತ್ತಿತ್ತು.

ಪತ್ರಿಕೆಯನ್ನು ಮನೆಮನೆಗೆ ಹಂಚುವುದು ರಾತ್ರಿ ವೇಳೆಯಲ್ಲಿ. ನಾನು ಮನೆಯ ವರಾಂಡದಲ್ಲಿ ಮಲಗುತ್ತಿದ್ದೆ. ನಮ್ಮ ತಾಯಿ ಕೋಣೆ ಬಾಗಿಲುಹಾಕಿ ಮಲಗಿದ ಮೇಲೆ ನಿಶ್ಶಬ್ದವಾಗಿ ಎದ್ದು, ರಾತ್ರಿಯೆಲ್ಲಾ ಪತ್ರಿಕೆ ಹಂಚಿ, ಒಂದೋ, ಎರಡೋ ಗಂಟೆಗೆ ಬಂದು ಮಲಗುತ್ತಿದ್ದೆ.

ಒಂದು ದಿನ ಪತ್ರಿಕೆಗೆ ಗೋಂದು ಹಾಕಿ ಕಂಬಕ್ಕೆ ಅಂಟಿಸುತ್ತಿದ್ದೆ. ಆ ಕೆಲಸ ಬಹಳ ಚಮತ್ಕಾರದಿಂದ ಮಾಡಬೇಕು. ಕಂಬದ ಪಕ್ಕದಲ್ಲಿ ಏನೋ ನೋಡುವಂತೆ ನಿಂತಿದ್ದು, ಜೇಬಿನಲ್ಲೇ ಅದಕ್ಕೆ ಅಂಟನ್ನು ಸವರಿ ಕಂಬ ಒರಗಿ ನಿಂತು ಚೀಟಿ ಅಂಟಿಸಿ ಏನೂ ಗೊತ್ತಿಲ್ಲದವನ ಹಾಗೆ ಅಲ್ಲಿಂದ ಹೊರಡಬೇಕು. ಹೀಗೆ ಮಾಡುವಾಗ ಕತ್ತಲಿನಲ್ಲಿ ಅಂದು ಮೋರಿ ಒಳಗಡೆ ಕುಳಿತಿದ್ದ ಪೋಲೀಸಿನವನು ಕಾಣಲಿಲ್ಲ. ನಾನು ಚೀಟಿ ಅಂಟಿಸಿದ ಕೂಡಲೇ ಮೋರಿಯಿಂದ ಪೋಲೀಸಿನವನು ನನ್ನನ್ನು ಹಿಡಿಯಲು ಎದ್ದ. ಸ್ವಲ್ಪ ಸುಳಿವು ತಿಳಿದ ಕೂಡಲೇ ನಾನು ಓಡಿದೆ. ಕಾಲಿಗೆ ಚಪ್ಪಲಿ, ಷೂ, ಹಾಕುತ್ತಿರಲಿಲ್ಲ. ಆಗ ಮಲ್ಲೇಶ್ವರದಲ್ಲಿ ಒಂಬತ್ತು ಗಂಟೆಯಾದರೆ ಜನರ ಓಡಾಟ ಕಡಿಮೆ. ನನಗೇ ಗೊತ್ತಿಲ್ಲ, ಆ ವೇಗದಲ್ಲಿ ಓಡಿದೆ. ನನ್ನನ್ನು ಇಬ್ಬರು ಪೋಲೀಸಿನವರು ಹಿಂಬಾಲಿಸಿದರು. ಇಂದು ನಾನು ಸಿಕ್ಕಿದೆ ಎಂದು ಅಂದುಕೊಂಡು ಮಲ್ಲೇಶ್ವರದ ಹನ್ನೊಂದನೆ ಅಡ್ಡರಸ್ತೆಯಲ್ಲಿ ತಿರುಗಿ, ಒಂದು ಮನೆಯ ಕಾಂಪೌಂಡಿನ ಗಿಡದ ಮಧ್ಯೆ ಕುಳಿತೆ. ಪೋಲೀಸಿನವ ಕಾಂಪೌಂಡಿನ ಪಕ್ಕದಲ್ಲೇ ಬಂದು ನಿಂತ, ಗಿಡದ ಮರೆಯಲ್ಲಿದ್ದ ನಾನು ಸದ್ಯ ಅವರಿಗೆ ಕಾಣಲಿಲ್ಲ. ಉಸಿರು ಬಿಟ್ಟರೆ ಗೊತ್ತಾಗುತ್ತೆ ಎಂದು ಮೂಗು ಮುಚ್ಚಿಕೊಂಡಿದ್ದೆ. ಪೋಲೀಸಿನವರು ಮಾತನಾಡಿಕೊಂಡರು. "ಕೈಗೆ ಸಿಕ್ಕಿದವನನ್ನು ಬಿಟ್ಟೆವಲ್ಲಾ, ಒಂದು ಕಾಲನ್ನಾದರೂ ಮುರಿಯಬೇಕಿತ್ತು. ಯಾವ ಕಡೆ ಹೋಗಿರಬೇಕು! ನೀನು ಬಲಗಡೆಯಿಂದ ಬಾ, ನಾನು ಎಡಗಡೆಯಿಂದ ಬರುತ್ತೇನೆ." ಎಂದು ಹೇಳಿ ಇಬ್ಬರೂ ಒಂದೊಂದು ಕಡೆ ಹೊರಟರು. ನಾನು ಅಲ್ಲಿಯೇ ಒಂದು ಗಂಟೆ ಕುಳಿತೆ. ಎದ್ದರೆ ಇನ್ನು ಮನೆಯವರಿಗೆ ಗೊತ್ತಾಗುವುದು ಎಂದು. ನಂತರ ಕಾಂಪೌಂಡು ಪಕ್ಕದಲ್ಲೇ ಗೊತ್ತಾಗದಂತೆ ಬಂದು ಮನೆ ಸೇರಿದೆ. ಆದಿನ ನಾನು ಸಿಕ್ಕಿಬಿದ್ದಿದ್ದರೆ ಕಾಲು ಮುರಿಯುತ್ತಿದ್ದರು. ಜೈಲು ಸೇರುತ್ತಿದ್ದೆ.

ಒಂದು ರಾತ್ರಿ ಪತ್ರಿಕೆ ಹಂಚಲು ಒಬ್ಬ ದೊಡ್ಡ ಮನುಷ್ಯರ ಮನೆಗೆ ಹೋದೆ ಅವರ ಮನೆ ಹದಿನೆಂಟನೆಯ ಅಡ್ಡರಸ್ತೆಯಲ್ಲಿತ್ತು. ನನ್ನಜೊತೆ ಗೆಳೆಯ ಮುಕುಂದ ಇದ್ದ. ನಾನು ಬಾಗಿಲಿನಲ್ಲಿ ಇರುತ್ತೇನೆ. ಈ ಪತ್ರಿಕೆ ಒಳಗಡೆ ಕೊಟ್ಟು ಬಾ ಅಂದ. ನಾನು ಗೇಟಿನಲ್ಲಿದ್ದ ಫಲಕ ನೋಡಲಿಲ್ಲ. ಸೀದಾ ಒಳಗೆ ಹೋದೆ. ಪತ್ರಿಕೆಯನ್ನು ಬಾಗಿಲಬಳಿಯೇ ಬಿಸಾಡಿದೆ. ಅಲ್ಸೇಷಿಯನ್ ನಾಯಿ ಎಲ್ಲಿತ್ತೋ, ಸೀದಾ ಬಂದು ನನ್ನ ಎರಡು ಹೆಗಲ ಮೇಲೂ ಎರಡು ಕಾಲು ಹಾಕಿ ನಿಂತುಕೊಂಡಿತು. ನನಗೆ ಮೈ ಬೆವರಿತು. ಉಸಿರು ಹೊರಡಲಿಲ್ಲ. ಗೇಟಿನಲ್ಲಿದ್ದ ಮುಕುಂದ ಇದನ್ನು ನೋಡಿ

ಹೊರಗಡೆ ಹೋದ. ಏನು ಮಾಡಬೇಕು ಎನ್ನುವುದು ನನಗೆ ತಿಳಿಯದಾಯಿತು. ನಾಯಿ ಮೂತಿ ನನ್ನ ಮುಖದ ಹತ್ತಿರ ಇದೆ. ಏನಾದರೂ ಬಾಯಿ ಹಾಕಿದರೆ ಮೈಯೆಲ್ಲ ರಕ್ತಮಯವಾಗುತ್ತಿತ್ತು. ಪ್ರೀತಿಯಿಂದ ನಾಯಿಯನ್ನು ಮೆತ್ತಗೆ ಮಾತನಾಡಿಸಿದೆ. ನಾಯಿ ಬೊಗಳಿತು. ಮನೆಯವರು ಇನ್ನೇನು ಬರುವರು ಎಂದು ತಿಳಿಯಿತು. ಪ್ರೀತಿಯಿಂದ ಮಾತನಾಡಿಸುತ್ತ ಒಂದೊಂದೇ ಹೆಜ್ಜೆ ಹಿಂದಕ್ಕೆ ಬಂದೆ. ಅದೂ ಹಾಗೆ ಮುಂದೆ ಬಂತು. ಬೆನ್ನಮೇಲೆ ಕೈಹಾಕಲು ಹೆದರಿಕೆ. ಎಲ್ಲಿ ಕಚ್ಚುತ್ತೋ ಎಂದು. ಗೇಟಿನ ಹತ್ತಿರ ಬಂದೆ. ಬರುವಾಗ ಗೇಟು ತೆಗೆದಿದ್ದು, ಹಾಕಿರಲಿಲ್ಲ. ನಾಯಿ ಬೊಗಳುತ್ತಲೇ ಇತ್ತು. ಗೇಟಿನಿಂದ ಆಚೆ ಬಂದೆ. ಎಡಗೈಯಿಂದ ಗೇಟ್ ಹಿಡಿದೆ, ಬಲಗೈಯಿಂದ ಇನ್ನೊಂದುಗೇಟ್ ಹಿಡಿದು ಜೋರಾಗಿ ಅಪ್ಪಳಿಸಿ ಗೇಟ್ ಹಾಕಿದೆ. ನಾನು ಬೇರೆ ಆದೆ. ನಾಯಿ ಬೇರೆ ಆಯಿತು. ನಾಯಿ ಜೋರಾಗಿ ಬೊಗಳಿತು. ಮನೆಯ ಒಳಗಿನಿಂದ ಬಂದವರು "Who is that ?" ಎಂದು ಜೋರಾಗಿ ಕೂಗಿದರು. ನಾನು ಗೇಟ್ ಹಾಕಿದ್ದೆ ತಡ ವೇಗವಾಗಿ ಓಡಿದೆ. ಎದುರಿಗಿದ್ದ ಮೈದಾನ ದಾಟಿ ಒಂದು ಮನೆ ಮರೆಯಾಗುವತನಕ ಓಡಿದೆ. ಅಷ್ಟರಲ್ಲಿ ಮನೆಯ ಎಲ್ಲಾ ಲೈಟು ಹಾಕಿ ಇಬ್ಬರು, ಮೂವರು ಹೊರಗಡೆ ಬಂದು ನೋಡುತ್ತಿದ್ದರು. ಸ್ವಲ್ಪ ಹೊತ್ತು ಆದಮೇಲೆ ಮುಕುಂದ ಚರಂಡಿಯಿಂದ ಎದ್ದು ಬಂದ. ಆಗ ನನಗೆ ಸ್ವಲ್ಪ ಧೈರ್ಯ ಬಂತು. ಮೈಯಲ್ಲಾ ಬೆವರಿತ್ತು. ನಾಯಿಯ ಕಾಲಿನ ಮಣ್ಣು ಷರ್ಟಿನಮೇಲೆ ಆಗಿತ್ತು. ಒದರಿಕೊಂಡು, ಮುಖ ಒರೆಸಿ ಇಬ್ಬರೂ ಧೈರ್ಯವಾಗಿ ಮನೆ ಸೇರಿದೆವು. ಅಂದಿನಿಂದ ಕಾಂಪೌಂಡ್ ಒಳಗಡೆ ಹೋಗುವುದನ್ನು ಬಿಟ್ಟೆವು. ಪತ್ರಿಕೆಯನ್ನು ಹೊರಗಡೆಯಿಂದಲೇ ಬಿಸಾಡುತ್ತಿದ್ದೆವು.

ದೇಶಕ್ಕೆ ಸ್ವಾತಂತ್ರ್ಯ ಬಂದಾಗ ನಮ್ಮ ಆನಂದ ಹೇಳತೀರದು. ಖಾದಿಬಟ್ಟೆ ತೊಡುವುದು ನಮ್ಮ ಧ್ಯೇಯ. ವ್ಯರ್ಥವಾಗಿ ಒಂದು ಕಾಸೂ ವ್ಯಯಮಾಡುತ್ತಿರಲಿಲ್ಲ. ದೇಶಪ್ರೇಮ, ರಾಷ್ಟ್ರೀಯ ನಾಯಕರು ಇವರದೇ ನಮ್ಮ ಹಂಬಲ. ಅವರ ಭಾಷಣಗಳನ್ನು ಓದದೆ ಇರುತ್ತಿರಲಿಲ್ಲ. ನೆಹರೂರವರ ಆತ್ಮ ಚರಿತ್ರೆ "Glimpses of world History", ಮಹಾತ್ಮ ಗಾಂಧೀಯವರ ಆತ್ಮಕಥೆ, ಸಿದ್ದವನಹಳ್ಳಿ ಕೃಷ್ಣ ಶರ್ಮರ ವಾರ್ಧಾಯಾತ್ರೆ, ಪರ್ಣಕುಟಿ, ರಂಗನಾಥ ದಿವಾಕರರ ಬಾಪೂ, ಹೀಗೆ ಗಾಂಧೀಜಿ ಮತ್ತು ರಾಷ್ಟ್ರೀಯ ಸಾಹಿತ್ಯ ಓದುವುದು ನಮ್ಮ ದಿನ ನಿತ್ಯದ ಕೆಲಸಗಳಲ್ಲೊಂದು.

ನೆಹರೂ ಮದರಾಸಿಗೆ ಬಂದಾಗ, ನಾನು ಮತ್ತು ಸಂಘದ ಗೆಳೆಯ ಎಂ. ಎಸ್. ಕೃಷ್ಣಮೂರ್ತಿ, ರಾಮು, ಮದರಾಸಿಗೆ ಹೋಗಿ ನೆಹರೂರವರ ದರ್ಶನ ಪಡೆದವು. ಗಾಂಧೀಜಿಯವರು ಮದರಾಸಿಗೆ ಬಂದಾಗ, ಹಿಂದೀ ಪ್ರಚಾರ ಸಭಾ ಆಹ್ವಾನದ ಮೇರೆಗೆ ನಾನು ಹಾಗೂ ಎಂ. ಎಸ್. ಕೃಷ್ಣಮೂರ್ತಿ ಮದರಾಸಿಗೆ ಹೋಗಿದ್ದೆವು. ಮದರಾಸಿನಲ್ಲಿ ಹಿಂದೀ ಪ್ರಚಾರ ಸಭೆ ಅಧಿವೇಶನಕ್ಕೆ ಹೋಗಿ ಭಾಗವಹಿಸಲು

ನಮ್ಮಲ್ಲಿ ದುಡ್ಡಿರಲಿಲ್ಲ. ಆದರೂ ಗಾಂಧೀಜಿ ಇಳಿದುಕೊಂಡಿದ್ದ ಸ್ಥಳಕ್ಕೆ ಹೋದೆವು. ಒಳಕ್ಕೆ ಹೋಗಲು ಆಹ್ವಾನ ಪತ್ರಿಕೆ ಕೇಳುತ್ತಿದ್ದರು. ನಮ್ಮಲ್ಲಿರಲಿಲ್ಲ. ಆಗ ಶ್ರೀ ಹೆಚ್. ಸಿ. ದಾಸಪ್ಪನವರು ಗಾಂಧೀಜಿಯವರ ಜೊತೆಯಲ್ಲಿದ್ದಾರೆ ಎಂದು ಗೊತ್ತಾಯಿತು. ಪತ್ರಿಕೆಯಲ್ಲೂ ಓದಿದ್ದೆ. ಸರಿ ಗೇಟಿನ ಮುಂಬಾಗಿಲಿನಲ್ಲಿದ್ದ ಸ್ವಯಂ ಸೇವಕನಿಗೆ "ಮೈಸೂರಿನಿಂದ ಬಂದಿದ್ದೇವೆ. ಶ್ರೀ ಹೆಚ್. ಸಿ. ದಾಸಪ್ಪನವರನ್ನು ಕಾಣಬೇಕು" ಎಂದು ಹೇಳಿದೆವು. ಅವರಿಗೆ ನಮ್ಮ ಪರಿಚಯವಿರಲಿಲ್ಲ. ಆದರೂ ಕೇಳಿಕೊಳ್ಳೋಣ ಎಂದು ಈರೀತಿ ಹೇಳಿದೆವು.

"ದಾಸಪ್ಪನವರು ಒಳಗಡೆ ಇದ್ದಾರೆ. ಹಾಗೆ ಬಿಡಲು ಸಾಧ್ಯವಿಲ್ಲ. ಏನಾದರೂ ಚೀಟಿ ತಂದಿದ್ದೀರಾ ?" ಎಂದು ಕೇಳಿದ. ಅನಂತರ ಹಿರಿಯ ವ್ಯಕ್ತಿಯೊಬ್ಬರು ಬಂದು "ನೋಡಿ ಇಲ್ಲಿಂದ ಮೂರನೇ ಕೊಠಡಿಯಲ್ಲಿ ದಾಸಪ್ಪನವರಿದ್ದಾರೆ. ಅವರನ್ನು ನೋಡಿ ಬೇಗ ಬಂದುಬಿಡಬೇಕು" ಎಂದು ಒಳಕ್ಕೆ ಬಿಟ್ಟರು. ಸರಿ ಎಲ್ಲರ ಜೊತೆ ನಾನು ಎಂ. ಎಸ್. ಕೆ. ಕುಳಿತೆವು. ಗಾಂಧೀಜಿಯವರು ಹಿಂದೀ ವಿದ್ಯಾರ್ಥಿಗಳ ಸಭೆಯನ್ನು ಕುರಿತು ಮಾತನಾಡಿದರು. ನಾವಿಬ್ಬರೂ ವಿದ್ಯಾರ್ಥಿಗಳಂತೆ ಅವರ ಮಧ್ಯೆ ಕುಳಿತೆವು. ಗಾಂಧೀಜಿಯವರನ್ನು ಹತ್ತಿರದಿಂದ ನೋಡುವ ಸುಯೋಗ ದೊರಕಿದ್ದು ಆಗಲೇ. ಸುಮಾರು ಅರ್ಧಗಂಟೆ ಮಾತನಾಡಿದರು. ನಗುತ್ತಾ ಗಾಂಧೀಜಿಯವರು ಮಾತನಾಡಿದ ದೃಶ್ಯ ಇನ್ನೂ ಕಣ್ಮುಂದೆ ನಿಂತಂತಿದೆ. ಅದಾದನಂತರ ಸಂಜೆ ಪ್ರಾರ್ಥನಾ ಬಹಿರಂಗಸಭೆಗೆ ಹಾಜರಾದೆವು. ಲಕ್ಷಾಂತರ ಜನ ಸೇರಿದ್ದರು. ಗಾಂಧೀಜಿಯವರು ಬಂದ ತಕ್ಷಣ ಸಭೆ ನಿಶ್ಶಬ್ದ. 'ರಾಮಧುನ್' ಪ್ರಾರಂಭವಾಗಿ ಪೂರ್ತಿ ಭಜನೆ ನಡೆಸಿದರು. ದಾಸಪ್ಪನವರನ್ನು ಕಾಣಲೇ ಇಲ್ಲ. ಹೋದ ಕೆಲಸ ಆಯಿತು. ಬೆಂಗಳೂರಿಗೆ ಬಂದು ಕೃಷ್ಣಶರ್ಮಾಜಿಯವರ ಹತ್ತಿರ ಹೇಳಿದೆವು.

ಆಗ ನಾನು ಇನ್ನು ಚಿಕ್ಕವನಿರಬಹುದು. ಗಾಂಧೀಜಿಯವರು ಒಮ್ಮೆ ಬೆಂಗಳೂರಿಗೆ ಬಂದಿದ್ದರು. ನಂದಿಬೆಟ್ಟಕ್ಕೆ ಹೋಗುವಾಗಲೋ ಅಥವಾ ಬರುವಾಗಲೋ ತಿಳಿಯದು, ಮಲ್ಲೇಶ್ವರಕ್ಕೆ ಗಾಂಧೀಜಿಯವರನ್ನು ಕರೆಸಿದ್ದರು. ಅಂದು ಶಾಲೆಗೆ ರಜ. ಮಲ್ಲೇಶ್ವರಂ ಅಸೋಸಿಯೇಷನ್ ಮೈದಾನದಲ್ಲಿ ಸಭೆ. ಕನ್ನಿಕಾ ಪರಮೇಶ್ವರಿ ದೇವಸ್ಥಾನದಲ್ಲಿ ಅನ್ನದಾನ. ಗಾಂಧೀಜಿಯವರು ಅನ್ನದಾನ ಮಾಡುವ ಬದಲು ಆ ಹಣವನ್ನು ನಮ್ಮ ನಿಧಿಗೆ ಕೊಡಿ ಎಂದು ಹೇಳಿದ್ದರು. ಅಸೋಸಿಯೇಷನ್ ಬಳಿ ನಿರ್ಮಿತವಾದ ಸ್ಥಳದಲ್ಲಿ ಗಾಂಧೀಜಿ ಕುಳಿತರು. ಅವರಿಗಾಗಿ ತಂದಿದ್ದ ಹೂ, ಹಣ್ಣುಗಳನ್ನು ಅಲ್ಲೇ ವಿನಿಯೋಗ ಮಾಡಿಸಿದರು. ಅನೇಕರು ಹೋಗಿ ಅವರಿಗೆ ನಮಸ್ಕಾರ ಮಾಡಿ ಬರುತ್ತಿದ್ದರು. ಯಾರೇ ನಮಸ್ಕರಿಸಲಿ, ಅವರ ಕೈಯಲ್ಲಿನ ಉಂಗುರ, ಹೆಂಗಸರಾದರೆ ಅವರ ಒಡವೆ ಕೊಡುವಂತೆ ಕೇಳುತ್ತಿದ್ದರು. ಹೆಣ್ಣುಮಕ್ಕಳು ಎರಡು ಕೈ ಜೋಡಿಸಿ ನಮಸ್ಕರಿಸಿದರೆ, ಅವರನ್ನ

ಕೇಳುತ್ತಿದ್ದುದು ಅವರ ಚಿನ್ನದ ಬಳೆ, ಒಡವೆಗಳು. ಕೆಲವರು ಕೊಡುತ್ತಿದ್ದರು. ಗಾಂಧೀಜಿಯವರನ್ನು ನೋಡಿದ್ದು ಇದೇ ಪ್ರಥಮ.

**ವಿದ್ಯಾರ್ಥಿಸಂಘ**

1943ರಲ್ಲಿ ವಿದ್ಯಾರ್ಥಿಸಂಘ (Student Federation) ಸ್ಥಾಪಿಸಿದೆವು. ಆಗ ವಿದ್ಯಾರ್ಥಿ ನಾಯಕರಾಗಿದ್ದ ಎಂ. ಎಸ್. ಕೃಷ್ಣನ್, ವಿ. ಎಸ್. ಕೃಷ್ಣಯ್ಯರ್, ವಸಂತಯ್ಯ ಎಲ್ಲರೂ ಸಂಘದಲ್ಲಿದ್ದರು. ಚಳುವಳಿ ಕಾಲದಲ್ಲಿ ವಿದ್ಯಾರ್ಥಿಗಳು ಗುಂಪುಗೂಡಿ ಯಾವುದಾದರೂ ಒಂದು ಕಾರ್ಯಕ್ರಮ ಮಾಡಲು ಹಂಬಲಿಸುತ್ತಿದ್ದರು.

ಕಮ್ಯುನಿಸ್ಟ್ ನಾಯಕ ಹಾಗೂ ಉಪಾಧ್ಯಾಯ ಮಲ್ಲೇಶ್ವರದಲ್ಲಿದ್ದರಿಂದ ಯಾರಾದರೊಬ್ಬರ ಮನೆಯಲ್ಲಿ ಸೇರಿ ರಷ್ಯಾದ ವಿಚಾರ ಮಾತಾಡುತ್ತಿದ್ದರು. ಬಂಗ್ಲಾದೇಶದಲ್ಲಿ ಕ್ಷಾಮ. ಆಗ ಬ್ರಿಟಿಷ್ ಸರಕಾರವನ್ನು ಈ ಜನ ದೂರುತ್ತಿದ್ದರು. ಬರಗಾಲದ ಪರಿಹಾರಕ್ಕಾಗಿ ಹಣ ಸಂಗ್ರಹಿಸಿ ಕಳುಹಿಸಬೇಕೆಂದು ಚಳುವಳಿ ಹೂಡಿದರು. ನಮಗೆ ಕಮ್ಯೂನಿಸ್ಟ್ ಗುಂಪು ಎಂದರೆ ಏನೆಂದು ತಿಳಿಯದು. ಆದರೂ ಸ್ವಾತಂತ್ರ್ಯದ ಆಕಾಂಕ್ಷೆಯಿಂದ ಆಕಡೆ ಹೆಚ್ಚು ಗಮನ ಕೊಡದೆ ರಾಷ್ಟ್ರಕ್ಕೆ ಏನು ಮಾಡಲೂ ಸಿದ್ಧವಾಗಿದ್ದೆವು. 1942ರ ಚಳುವಳಿಯಲ್ಲಿ ವಿದ್ಯಾರ್ಥಿಗಳಿಗೆ ಹಣದ ವಿಚಾರದಲ್ಲಿ ಕೆಟ್ಟ ಹೆಸರು ಬಂತು. ಬಂಗಾಳ ದೇಶಕ್ಕೆ ಹಣ ಸಂಗ್ರಹಿಸುವ ವಿಚಾರದಲ್ಲಿ ಎಲ್ಲರೂ ಹಿಂಜರಿದರು. ಆದರೆ ಎಂ. ಎಸ್. ಕೃಷ್ಣನ್ ಧೈರ್ಯಮಾಡಿ ನಮ್ಮ ಗುಂಪುಕಟ್ಟಿ "ಬರಗಾಲ ಕ್ಷಾಮ ಪರಿಹಾರ ನಿಧಿ-ವಿದ್ಯಾರ್ಥಿ ವಿಭಾಗ"ವನ್ನು ಆರಂಭಿಸಿದರು. ಮನೆಮನೆಗೂ ಹೋಗಿ ಹಣ, ಬಟ್ಟೆ, ದವಸ ಧಾನ್ಯ ಸಂಗ್ರಹಿಸಿದೆವು. ನಿತ್ಯವೂ ನಾವು ಸಂಗ್ರಹ ಮಾಡಿದ, ಹಣ ನೀಡಿದವರ ಹೆಸರನ್ನು ವಿಶ್ವ ಕರ್ಣಾಟಕ ಪತ್ರಿಕೆಯಲ್ಲಿ ಸಂಪಾದಕರಾಗಿದ್ದ ಸಿದ್ಧವನಹಳ್ಳಿ ಕೃಷ್ಣಶರ್ಮರು ಪ್ರಕಟಿಸಿದರು. ಮಲ್ಲೇಶ್ವರದಲ್ಲಿರುವ ಎಲ್ಲಾ ಮನೆಗಳನ್ನು ಕಂಡೆವು. ಎಲ್ಲೋ ಒಂದಿಬ್ಬರು "ನೀವು ಸರ್ಕಾರದ ಮೂಲಕ ಕಳಿಸುತ್ತಿದ್ದೀರಿ. ಈ ಹಣ ಬಟ್ಟೆ, ದವಸ ಧಾನ್ಯ ಯಾವುದೂ ಆ ಜನಗಳಿಗೆ ಸೇರುವುದಿಲ್ಲ. ಇದೆಲ್ಲ ಸೈನಿಕರಿಗೆ ಕಳಿಸಲಾಗುತ್ತದೆ. ನೀವು ದೇಶ ಸೇವಕರು ಅಂತ ಅನ್ಯಾಯ ಮಾಡುತ್ತಿದ್ದೀರಿ" ಎಂದು ದೂರಿದರು. ನಾವು ಹಿಂಜರಿಯಲಿಲ್ಲ. ಸಂಗ್ರಹಿಸಿದ ಹಣ, ದವಸ, ಬಟ್ಟೆ ಇವುಗಳನ್ನು ಕೇಂದ್ರ ಸಮಿತಿಗೆ ಕಳುಹಿಸಲಾಯಿತು. ಇದು ಒಳ್ಳೆಯ ಅನುಭವ. ಹಣ ಸಂಗ್ರಹ ಕೆಲಸದಲ್ಲಿ ಎಲ್ಲಾ ಜನರ ಸಂಪರ್ಕ ಮತ್ತು ಅವರೊಡನೆ ಸಂಭಾಷಣೆಯ ವಿಚಿತ್ರ ಅನುಭವ. "ವಿದ್ಯಾರ್ಥಿಗಳು ಬಂದಿದ್ದಾರೆ ಯಾರಿಗಾಗಿ ? ಭಾರತದ ಜನ ಹೊಟ್ಟೆಗಿಲ್ಲದೆ ಸಾಯುತ್ತಿರಬೇಕಾದರೆ ಈ ಹುಡುಗರು ಹಣ ವಸೂಲಿಮಾಡಿ ಕಳುಹಿಸುತ್ತಿದ್ದಾರೆ" ಎಂದು ಅನೇಕರು ಸಂತೋಷದಿಂದ ಹಣವನ್ನೋ, ಹಳೆ ಬಟ್ಟೆಯನ್ನೋ, ಅಕ್ಕಿಕಾಳುಗಳನ್ನೋ ಕೊಡುತ್ತಿದ್ದರು.

ಕೆಲವರು ಇದಕ್ಕೆ ವಿರುದ್ಧ. "ಈ ಹುಡುಗರಿಗೆ ಬೇರೆ ಕೆಲಸವಿಲ್ಲ. ಬಂಗಾಳದಲ್ಲಿ ಯಾರೋ ಸತ್ತರೆ ಇವರಿಗೇನಾಗಬೇಕು. ನಮಗೆ ಹೊಟ್ಟೆಗಿಲ್ಲ. ಇದು ಬೇರೆ." ಎಂದು ಬೈದುಕೊಂಡು ಕೊಡುತ್ತಿದ್ದರು.

ಕೆಲಕಾಲದಲ್ಲಿ ವಿದ್ಯಾರ್ಥಿ ಫೆಡರೇಷನ್‌ನಲ್ಲಿ ಒಬ್ಬರಿಗೊಬ್ಬರಿಗೆ ಅಸಮಾಧಾನ ಶುರುವಾಯಿತು. ಕಮ್ಯುನಿಸ್ಟ ಎಂಬ ಭಾವನೆ ಬಂದಮೇಲೆ ಈ ಸಂಘದ ಚಟುವಟಿಕೆಗಳು ಆ ಪಕ್ಷಕ್ಕೆ ಸಂಬಂಧಪಟ್ಟಿದ್ದರಿಂದ ಜಗಳವಾಯಿತು. ಕೃಷ್ಣಯ್ಯರ್, ಅಣ್ಣಯ್ಯ ಮುಂತಾದ ವಿದ್ಯಾರ್ಥಿ ನಾಯಕರು ಫೆಡರೇಷನ್ನಿನಿಂದ ದೂರವಾದರು. ದೊಡ್ಡಣ್ಣ ಮೈದಾನದಲ್ಲಿ ಅಂದೇ ಸಭೆಸೇರಿ ಸ್ಟೂಡೆಂಟ್ ಕಾಂಗ್ರೆಸ್ ಸ್ಥಾಪಿಸಿದರು. ವಿದ್ಯಾರ್ಥಿ ಕಾಂಗ್ರೆಸ್ ಒಂದು ಅಂಗ ಸಂಸ್ಥೆಯಂತೆ ನಡೆಯಿತು. ಕಾಲೇಜುಗಳಲ್ಲಿ ಅದು ಬಲಗೊಂಡಿತು.

ಸ್ಟೂಡೆಂಟ್ ಕಾಂಗ್ರೆಸ್ ಅಧೀನದಲ್ಲಿ ಶಂಕರಪ್ಪ ವಿದ್ಯಾರ್ಥಿನಿಲಯ ಪ್ರಾರಂಭವಾಯಿತು. ಸುಮಾರು ಹತ್ತುವರ್ಷ ನಡೆಯಿತು. ಆನಂತರ ಏನು ಕಾರಣವೋ ನಿಂತುಹೋಯಿತು.

ವಿದ್ಯಾರ್ಥಿ ಕಾಂಗ್ರೆಸ್‌ನವರು ಪರೀಕ್ಷೆಯ ವೇಳೆಯಲ್ಲಿ ಪಾಠ ವ್ಯವಸ್ಥೆ ಮಾಡುತ್ತಿದ್ದರು. ಬೇರೆ ಬೇರೆ ತರಗತಿ ವಿದ್ಯಾರ್ಥಿಗಳಿಗೆ, ಉತ್ತಮ ಉಪಾಧ್ಯಾಯರನ್ನು ಕರೆಸಿ ಉಪನ್ಯಾಸ ಏರ್ಪಡಿಸಿ ತೇರ್ಗಡೆಯಾಗಲು ಅನುಕೂಲ ಮಾಡಿಕೊಡುತ್ತಿದ್ದರು. ಕಾಲೇಜುಗಳಲ್ಲಿ 'ವಂದೇ ಮಾತರಂ' ಪ್ರಾರ್ಥನೆ ಹಾಡಿಸುತ್ತಿದ್ದರು. ಕಾಲೇಜಿನ ಅಧಿಕಾರಿಗಳು ಬೇಡವೆಂದರೂ "ವಂದೇ ಮಾತರಂ" ಹಾಡುವುದನ್ನು ಮಾತ್ರ ಬಿಟ್ಟಿರಲಿಲ್ಲ.

## ಗ್ರಾಮಾಭಿವೃದ್ಧಿ

1949ರಲ್ಲಿ ವಿದ್ಯಾರ್ಥಿ ಕಾಂಗ್ರೆಸ್ ಬೃಹತ್‌ಯೋಜನೆ ಹಾಕಿಕೊಂಡಿತು. ಹಳ್ಳಿಗಳಲ್ಲಿ ರಸ್ತೆ, ವಯಸ್ಕರ ಶಿಕ್ಷಣ, ಹರಿಜನ ದೇವಸ್ಥಾನ ಪ್ರವೇಶ, ಅಕ್ಷರಾಭ್ಯಾಸ, ಈ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುವುದು. ಯೋಜನೆಯೊಂದನ್ನು ತಯಾರಿಸಿ ವಿಶ್ವವಿದ್ಯಾನಿಲಯಕ್ಕೂ, ಗ್ರಾಮಾಭಿವೃದ್ಧಿ ಇಲಾಖೆಯವರಿಗೂ ಕೊಟ್ಟೆವು. ಹಳ್ಳಿಯ ಆರ್ಥಿಕ ಗಣನೆಮಾಡಲು ಯೋಜನೆ ತಯಾರಿಸಿ ಸರ್ಕಾರದ ಸಹಾಯವನ್ನು ಕೇಳಿದೆವು. ಸರ್ಕಾರದ ಸಲಹೆ ಮೇರೆಗೆ ದೊಡ್ಡಬಳ್ಳಾಪುರದ ಬಳಿ ಇರುವ ಮಜುರಾ ಹೊಸಹಳ್ಳಿ ಹಾಗೂ ಅದರ ಸುತ್ತಮುತ್ತಲಿನ 4 ಗ್ರಾಮಗಳಲ್ಲಿ ನಮ್ಮ ಯೋಜನೆ ಕಾರ್ಯಗತ ಮಾಡಲು ಸರ್ಕಾರ ಒಪ್ಪಿತು. ಬೆಂಗಳೂರಿನಿಂದ ಇಪ್ಪತ್ತು ಮೈಲಿ. ಪರೀಕ್ಷೆ ಮುಗಿದಮೇಲೆ ಆ ಹಳ್ಳಿಗೆ ಸೈಕಲ್ ಮೇಲೆ ಹೋಗಿ ಭೇಟಿಕೊಟ್ಟೆವು. ಸ್ಥಳ ಪರೀಕ್ಷೆ ಮಾಡಿದೆವು. ಅಲ್ಲಿಯ ತಹಶೀಲ್ದಾರ್ ಹಾಗೂ ರೆವಿನ್ಯೂ ಇನ್‌ಸ್ಪೆಕ್ಟರ್ ನಮ್ಮೊಡನೆ ಬಂದರು. ಇವರನ್ನು ನೋಡಿದ ಹೊಸಹಳ್ಳಿಯ ಜನ ಊರು ಬಿಟ್ಟು

ಹೊರಗಡೆ ಹೋಗಿದ್ದರು. ಮೊದಲು ಕಾರಣ ತಿಳಿಯಲಿಲ್ಲ. ಯಾರನ್ನು ಕೇಳಿದರೂ ಗಂಡಸರು ಮನೆಯಲ್ಲಿ ಇಲ್ಲ ಎನ್ನುತ್ತಿದ್ದರು. ಸ್ವಲ್ಪದಿವಸ ಆದಮೇಲೆ ತಿಳಿಯಿತು. ಅಧಿಕಾರಿಗಳು, ಅಧಿಕಾರದ ಗತ್ತಿನಲ್ಲಿ ಮಾತಾಡಿ ಹಳ್ಳಿಯವರನ್ನು ಹೆದರಿಸುತ್ತಿದ್ದರೆಂದು. ಇವರ ಕೈಲಿ ಏಕೆ ಬೈಸಿಕೊಳ್ಳಬೇಕು ಎಂದು ಊರುಬಿಟ್ಟು ಹೋಗಿದ್ದರು. ಐದು ಹಳ್ಳಿಗಳನ್ನು ಪರೀಕ್ಷಿಸಿ ಸಂಜೆ ಬೆಂಗಳೂರು ಸೇರಿದೆವು.

ಪತ್ರಿಕೆಗಳಲ್ಲಿ ಈ ವಿಷಯವನ್ನು ಪ್ರಕಟಿಸಲಾಯಿತು. ಗ್ರಾಮಾಭಿವೃದ್ಧಿಯಲ್ಲಿ ಆಸಕ್ತಿ ಇರುವ ವಿದ್ಯಾರ್ಥಿಗಳ ಹೆಸರು ಕೊಟ್ಟು ದೊಡ್ಡಬಳ್ಳಾಪುರಕ್ಕೆ ಹೋಗಲು ಗೊತ್ತುಮಾಡಿದ ತಾರೀಖನ್ನು ತಿಳಿಸಿದೆವು. ವಿಶ್ವವಿದ್ಯಾನಿಲಯದಿಂದ ಆಗಿನ ಕುಲಪತಿಗಳಾಗಿದ್ದ ಶ್ರೀಮಾನ್ ಕಸ್ತೂರ ರಾಜಶೆಟ್ಟಿಯವರು ನಮ್ಮ ಯೋಜನೆ ನೋಡಿ ಐದು ಸಾವಿರ ರೂಪಾಯಿ ಧನಸಹಾಯ ಮಾಡಿದರು. ಇದರಿಂದ ನಮಗೆ ಬೇಕಾದ ಉಪಕರಣಗಳು ಹಾಗೂ ದವಸಧಾನ್ಯವನ್ನು ಕೊಂಡೆವು. ಎಲ್ಲಾ ಪ್ರಾಂತ್ಯಗಳಿಂದ ಸುಮಾರು ನೂರುಜನ ವಿದ್ಯಾರ್ಥಿಗಳು ಬಂದರು. ಹತ್ತು ಜನರ ಗುಂಪುಮಾಡಿ ಹತ್ತು ವಿಭಾಗಮಾಡಲಾಯಿತು. ಆಗಿನ ವಿದ್ಯಾರ್ಥಿ ಕಾಂಗ್ರೆಸ್ ಕಾರ್ಯದರ್ಶಿಯಾಗಿದ್ದ ಶ್ರೀ ಜಿ. ಪಿ. ಕೃಷ್ಣರಾವ್ ಈ ಶಿಬಿರಕ್ಕೆ ಕಾರ್ಯದರ್ಶಿಯಾಗಿ, ನಾನು ಮತ್ತು ಶ್ರೀ ಟಿ. ಬಿ. ವೆಂಕಟೇಶ್‌ರವರು ಸಂಚಾಲಕರಾಗಿ ನೇಮಕಗೊಂಡೆವು. ಒಂದೊಂದು ಗುಂಪಿಗೂ ಒಂದೊಂದು ಬಿಡಾರ. ಊರಿನ ಪಕ್ಕದಲ್ಲೇ ಕಣದಲ್ಲಿ ಬಿಡಾರ ಹಾಕಿದೆವು. ವೃತ್ತಾಕಾರದ ಬಿಡಾರ. ಮಧ್ಯೆ ಕಛೇರಿ ಶಿಬಿರ. ಶೌಚಕ್ಕಾಗಿ ಪಕ್ಕದಲ್ಲಿಯೇ ಗುಂಡಿ ತೆಗೆದು ವ್ಯವಸ್ಥೆ ಮಾಡಲಾಗಿತ್ತು. ಇದರ ಪ್ರಾರಂಭೋತ್ಸವಕ್ಕೆ ಆಗಿನ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಶ್ರೀ ಪಟ್ಟಾಭಿ ಸೀತಾರಾಮಯ್ಯನವರು ಬಂದರು. ನಮ್ಮ ಏರ್ಪಾಡು, ಕಾರ್ಯಕ್ರಮ ನೋಡಿ ಸಂತೋಷಪಟ್ಟರು. ಯಶಸ್ಸುಕೋರಿ ಪ್ರಾರಂಭೋತ್ಸವ ನಡೆಸಿದರು. ಪತ್ರಿಕೋದ್ಯಮಿಗಳು ಬಂದಿದ್ದರಿಂದ ಎಲ್ಲಾ ಪತ್ರಿಕೆಗಳಲ್ಲಿ ಪತ್ರಕರ್ತರು ದೊಡ್ಡ ಶಿರೋನಾಮೆಯಲ್ಲಿ ಪ್ರಕಟಿಸಿ ಪ್ರಚಾರಕೊಟ್ಟರು.

ಒಂದೊಂದು ಬಿಡಾರಕ್ಕೂ ಒಂದೊಂದು ಹೆಸರು. ನಮ್ಮ ಗುಡಾರದ ಹೆಸರು 'ಪರ್ಣಕುಟಿ'. ನಮ್ಮ ಗುಂಪಿನಲ್ಲಿ ಎಲ್ಲಾ ಇಂಜಿನಿಯರ್‌ಗಳೆ. ಶ್ರೀಗಳಾದ ಶ್ರೀನಿವಾಸನ್, ಸುಬ್ಬರಾವ್, ಬಿ. ಕೃಷ್ಣಮೂರ್ತಿ, ಕೆ. ಕೃಷ್ಣಮೂರ್ತಿ, ವೆಂಕಟಕೃಷ್ಣ ಮುಂತಾದವರು. ಜೊತೆಗೆ ಕೊನೆಯ ವರ್ಷದ ಇಂಜಿನಿಯರಿಂಗ್ ವಿದ್ಯಾರ್ಥಿಗಳಾದ ಎಂ. ಕೃಷ್ಣಸ್ವಾಮಿ, ಮತ್ತೂರ ಕೃಷ್ಣಮೂರ್ತಿ (ಈಗ ಲಂಡನ್ನಿನಲ್ಲಿ ಭಾರತೀಯ ವಿದ್ಯಾಭವನದ ರಿಜಿಸ್ಟ್ರಾರ್ ಆಗಿದ್ದಾರೆ) ಎಸ್. ಕೆ. ಮೋಹನ್ (ಸಿದ್ದವನಹಳ್ಳಿ ಕೃಷ್ಣಶರ್ಮರ ಮಕ್ಕಳು) ಹಾಗೂ ಪಟೇಲನೊಬ್ಬನ ಮಗ ರಾಮು ಎಂದು. ಒಂದೊಂದು ಪ್ರಾಂತ್ಯದ ಹುಡುಗರಿಗೂ ಒಂದೊಂದು ಬಿಡಾರ. ಶಿವಮೊಗ್ಗದ ವಿದ್ಯಾರ್ಥಿಗಳು ಬ್ಯಾಂಡ್‌ಸೆಟ್ ತಂದಿದ್ದರು. ಸಣ್ಣ ಕೊಠಡಿ ಕೊಟ್ಟಿದ್ದರು. ಅದರಲ್ಲಿ ಅಡಿಗೆ ಮಾಡಲು ಏರ್ಪಾಡು. ಒಬ್ಬೊಬ್ಬರಿಗೆ ಒಂದೊಂದು ಕೆಲಸ. ನನ್ನದು

ಪ್ರೊಫೆ. ಸೇಲ್ವಿಚಾರ್ಜಿ. ಶ್ರೀ ಜಿ. ಪಿ. ಕೃಷ್ಣರಾವ್‌ರವರು ಶಿಬಿರದ ಹೊರ ಸಂಪರ್ಕ. ಟಿ. ಬಿ. ವೆಂಕಟೇಶ್ ಅವರಿಗೆ ಲೆಕ್ಕ ಮತ್ತು ಕಛೇರಿಯ ಕೆಲಸ. ಶ್ರೀನಿವಾಸನ್‌ಗೆ ಸರ್ವೆ ಮತ್ತು ರಸ್ತೆ ಕೆಲಸ. ವೆಂಕಟಕೃಷ್ಣ ಅವರಿಗೆ ಆಹಾರ ವ್ಯವಸ್ಥೆ. ಕೃಷ್ಣಮೂರ್ತಿ ಅವರು ವಿದ್ಯಾಭ್ಯಾಸ ಹೀಗೆ ಹಂಚಲಾಗಿತ್ತು.

ಶಿಬಿರದಲ್ಲಿ ಎಲ್ಲರೂ ಐದುಗಂಟೆಗೆ ಏಳಬೇಕು. ಆರುಗಂಟೆಗೆ ಸರಿಯಾಗಿ ಧ್ವಜಾರೋಹಣ, ಪ್ರಾರ್ಥನೆ. ಏಳುಗಂಟೆಗೆ ಬೆಳಗಿನ ತಿಂಡಿ ಕಾಫಿ. ಎಂಟು ಗಂಟೆಗೆ ರಸ್ತೆ ನಿರ್ಮಾಣ ಮತ್ತು ಹಳ್ಳಿ ಸ್ವಚ್ಛಮಾಡುವ ಕೆಲಸ. ಈ ರೀತಿಯ ದೇಹಶ್ರಮದ ಕೆಲಸ ಹನ್ನೆರಡರವರೆಗೆ. ಒಂದು ಗಂಟೆ ವಿಶ್ರಾಂತಿ ಮತ್ತು ಬಾವಿಯಲ್ಲಿ ಸ್ನಾನ.

ನಾನು ಈಜು ಕಲಿತಿದ್ದು ಅಲ್ಲಿಯೇ. ಜೊತೆಗಾರರೆಲ್ಲರೂ ಈಜುತ್ತಿದ್ದರು. ಅವರ ಜೊತೆ ನಾನೂ ಸೇರಿದೆ. ಬೆಳಿಗ್ಗೆಯಿಂದ ದೇಹ ಶ್ರಮವಾಗಿದ್ದರಿಂದ ನೀರಿನಲ್ಲಿ ಬಿದ್ದಾಗ ಆಯಾಸ ಪರಿಹಾರ. ಒಂದು ಗಂಟೆಗೆ ಸರಿಯಾಗಿ ಊಟ. ಹಿಟ್ಟು, ಕಾಳು ಹುಳಿ, ಅನ್ನ. ಮಜ್ಜಿಗೆ, ಇದು ಮಧ್ಯಾಹ್ನದ ಊಟ. ಮೂರರಿಂದ ನಾಲ್ಕರವರೆಗೆ ಎಲ್ಲರೂ ಸೇರಿ ಮುಂದಿನ ಕಾರ್ಯಕ್ರಮಗಳ ಚರ್ಚೆ ಮಾಡುತ್ತಿದ್ದೆವು. ಗಾಂಧಿ ವಿಚಾರ ಅಧ್ಯಯನ. ಎಲ್ಲರಿಗೂ ಮಾತನಾಡಲು ಅವಕಾಶ. ಸಂಜೆ ನಾಲ್ಕೂವರೆಗೆ ಪುನಃ ಉಪಹಾರ. ಐದುಗಂಟೆಗೆ ಐದು ಹಳ್ಳಿಗಳಿಗೂ ವಿದ್ಯಾರ್ಥಿಗಳು ಹೋಗಿ ಹಳ್ಳಿಯ ಹುಡುಗರಿಗೆ ಸೇವಾದಳದ ಶಿಕ್ಷಣ, ಆಟಪಾಟ ಕಲಿಸುವುದು, ವಯಸ್ಕರಿಗೆ ಶಿಕ್ಷಣ ನೀಡುವುದು, ಹೆಣ್ಣುಮಕ್ಕಳಿಗೆ ಪಾಠ, ಹಾಡುವವರಿದ್ದರೆ ಭಜನೆ ಮತ್ತು ಹಾಡುಗಳನ್ನು ಹೇಳಿಸುವುದು. ಎಂಟು ಗಂಟೆಗೆ ಹಳ್ಳಿಗಳಿಂದ ವಾಪಸ್ಸು ಬಂದು ಹೊಸಹಳ್ಳಿ ತಲಪುವುದು. ಒಂಬತ್ತು ಗಂಟೆಗೆ ಊಟ. ಯಾರಾದರೂ ಹಳ್ಳಿಯವರು ಬೆಲ್ಲ ಕೊಟ್ಟಿದ್ದರೆ ಪಾಯಸದ ಊಟ. ಹತ್ತುಗಂಟೆಗೆ ಪ್ರಾರ್ಥನೆಮಾಡಿ ಮಲಗುವುದು. ಇದು ದಿನ ನಿತ್ಯದ ಕಾರ್ಯಕ್ರಮ.

ವಿದ್ಯಾರ್ಥಿಗಳ ಉಡುಪು ಒಂದು ನಿಕ್ಕರ್, ಒಂದು ಬನೀನು. ತಲೆಗೊಂದು ಟವಲ್, ಕಾಲಿಗೆ ಚಪ್ಪಲಿ. ವಿಶೇಷವೆಂದರೆ ಒಂದು ಷರ್ಟು. ಹಳ್ಳಿಯವರು ನಮ್ಮನ್ನು ಸೈನಿಕರ ಗುಂಪೆಂದು, ಸೈನ್ಯಕ್ಕೆ ಸೇರಿಸಿಕೊಳ್ಳಲು ಬಂದಿರುವರೆಂದು ಮೊದಲು ಹೆದರಿದರು. ಎಲ್ಲರಲ್ಲೂ ಅಕ್ಕ, ಅವ್ವ, ಅಪ್ಪ, ಅಣ್ಣ ಹೀಗೆ ಮಾತನಾಡಿಸಲು ಪ್ರಾರಂಭಮಾಡಿ ಅವರ ಜೊತೆಗೆ ಚೆನ್ನಾಗಿ ನಡೆದುಕೊಂಡದ್ದರಿಂದ "ಇವರು ವಿದ್ಯಾರ್ಥಿಗಳು. ನಮಗೆ ಒಳ್ಳೆಯದನ್ನು ಮಾಡಲು ಬಂದಿದ್ದಾರೆ" ಎಂದು ಅವರಿಗೆ ಗೊತ್ತಾಯಿತು. ಆನಂತರ ಸಹಕರಿಸಲು ಪ್ರಾರಂಭಿಸಿದರು. ರಸ್ತೆ ನಿರ್ಮಿಸುವಾಗ ಮನೆಗೊಬ್ಬ ಆಳು, ಗುದ್ದಲಿ ಪಿಕಾಸಿ ತೆಗೆದುಕೊಂಡು ಬರಲು ಪ್ರಾರಂಭಿಸಿದರು.

ಹೊಸಹಳ್ಳಿಯಿಂದ ಬೆಂಗಳೂರು ದೊಡ್ಡಬಳ್ಳಾಪುರ ಮುಖ್ಯ ರಸ್ತೆಗೆ ಕಾರು ಹೋಗಿ ಬರುವ ಹಾಗೆ ರಸ್ತೆ ದುರಸ್ತಿ ಮಾಡಿದ್ದು ಮೊದಲನೆಯ ಕೆಲಸ. ಅಲ್ಲಿಂದ

ಬೇರೆ ಊರಿಗೆ ಹೋಗುವ ಹಾಗೆ ರಸ್ತೆಗಳನ್ನು ನುಟ್ಟಮಾಡಲಾಯಿತು. ಗೋಡೆಗಳಿಗೆ ಮಣ್ಣು ಬಳಿದು ಸುಣ್ಣ ಹಚ್ಚಲಾಯಿತು. ಬಿಡುವಾದಾಗ ಮನೆಗಳನ್ನು ಹಂಚಿ ಕೊಂಡು ವಿದ್ಯಾರ್ಥಿಗಳು ಆರ್ಥಿಕ ಗಣನೆ ಕಾರ್ಯಮಾಡಿದರು. ಮೊದಲನೆ ದಿವಸವೇ ಊರು ಊರಿಗೂ ನಮ್ಮ ಬ್ಯಾಂಡ್ ಸೆಟ್ ಜೊತೆಯಲ್ಲಿ ಹೋಗಿ ಪ್ರಚಾರ ಮಾಡಿದೆವು. ಐದನೆ ಹಳ್ಳಿಗೆ ಬರುವ ಹೊತ್ತಿಗೆ ಜ್ವರಬಂತು. ಮೂರು ದಿವಸ ಕೆಲಸ ಮಾಡಿದಮೇಲೆ ಅನೇಕರಿಗೆ ಜ್ವರ, ಬಿಸಿಲಿನ ತಾಪ ತಡೆಯುವುದು ಕಷ್ಟವಾಯಿತು. ಮೈ ಸುಲಿಯಲು ಪ್ರಾರಂಭವಾಯಿತು. ದೊಡ್ಡಬಳ್ಳಾಪುರದಿಂದ ಒಬ್ಬ ವೈದ್ಯರು ನಿತ್ಯ ಒಮ್ಮೆ ಬಂದು ವಿಚಾರಿಸಿ ಔಷಧಿ ಕೊಡುತ್ತಿದ್ದರು. ನೂರು ಜನರ ಶಿಬಿರ ಅಂದರೆ ಸುಮ್ಮನೆಯೇ ? ಹಳ್ಳಿಯ ಕಾರ್ಯಕ್ರಮಗಳಲ್ಲಿ, ಮದುವೆ, ಹಬ್ಬ ಮುಂತಾದವುಗಳಲ್ಲಿ ವಿದ್ಯಾರ್ಥಿಗಳು ಭಾಗವಹಿಸುತ್ತಿದ್ದರು. ಆ ದಿನ ಎಲ್ಲರಿಗೂ ಅಲ್ಲಿಯೇ ಊಟ.

ಇಷ್ಟೆಲ್ಲಾ ಆದರೂ ಹರಿಜನರ ಗುಂಪು ನಮ್ಮ ಜೊತೆ ಸೇರುತ್ತಿರಲಿಲ್ಲ. ಯಾವ ಹರಿಜನರ ಮನೆಗೆ ಹೋದರೂ ಮನೆಬಾಗಿಲು ಹಾಕಿರುತ್ತಿತ್ತು. ಗಂಡಸರಿಲ್ಲ ಎನ್ನುತ್ತಿದ್ದರು. ಅಲ್ಲೇನೋ ಸಮಸ್ಯೆ ಇದೆ ಎಂದುಕೊಂಡೆವು. ನಮ್ಮ ಜೊತೆ ಹರಿಜನರ ತೋಟಿ ದಾಸ ಓಡಾಡುತ್ತಿದ್ದ. ಒಂದುದಿನ ಅವನನ್ನು "ನಿಮ್ಮ ಜನ ಕಾಣಿಸುತ್ತಿಲ್ಲವಲ್ಲ, ನಿಮ್ಮ ಯಜಮಾನರು ಯಾರು" ಎಂದು ಕೇಳಿದೆ. ಆತ ವಿವರವಾಗಿ ಹೇಳಿದ. "ಸ್ವಾಮಿ ನಿಮ್ಮನ್ನ ಕಂಡರೆ ಯಾರಿಗೂ ಭಯವಿಲ್ಲ. ಆದರೆ ತಹಶೀಲ್ದಾರ್, ರೆವಿನ್ಯೂ ಇನ್ಸ್‌ಪೆಕ್ಟರ್ ಇದ್ದಾರಲ್ಲಾ ಅವರನ್ನು ಕಂಡರೆ ಭಯ. ಮನೆ ಕಟ್ಟಲಿಕ್ಕೆ ಸರ್ಕಾರ ಹೆಂಚು ಕೊಡುತ್ತಾರೆ. ಅದನ್ನು ತೆಗೆದುಕೊಳ್ಳಲಿಲ್ಲವೆಂದು ಎಲ್ಲರನ್ನೂ ಬೈಯುತ್ತಾರೆ. ಗೋಡೆ ಕಟ್ಟಬೇಕಲ್ಲ, ಅದಕ್ಕೆಲ್ಲಿದೆ ಹಣ. ತಿನ್ನಲು ಕಾಳಿಲ್ಲ. ಗೌಡರ ಮನೇಲಿ ಕೆಲಸ ಮಾಡಿದರೆ ಉಂಟು. ಇಲ್ಲದಿದ್ದರೆ ಹೊಟ್ಟೆಗಿಲ್ಲ. ಈ ಗುಡಿಸಲೇ ಸಾಕು. ಹೆಂಚು ತಗೊಂಡು ಏನು ಮಾಡೋದು. ಅದಕ್ಕೆ ಎಲ್ಲರೂ ಹೆದರಿ ಬೆದರಿ ತಹಶೀಲ್ದಾರ್ ಬಂದ ತಕ್ಷಣ ಊರು ಬಿಟ್ಟು ಓಡಿ ಹೋಗುತ್ತಾರೆ. ನೀವೂ ಅವರ ಕಡೆಯವರು ಅಂತ ಹೆದರಿದ್ದಾರೆ".

ಗುಟ್ಟು ಗೊತ್ತಾಯಿತು. ಸರಿ ಎಂಟು ದಿನದ ಮೇಲೆ ಒಂದು ಶನಿವಾರ ಹರಿಜನರಿದ್ದ ಗುಡಿಸಲಿನ ಮಧ್ಯೆ ಭಜನೆ ಶುರುಮಾಡಿದೆವು. ನಮ್ಮ ಸಂಘದ ಗೆಳೆಯ ಶ್ರೀ ನಂ.ಕೃಷ್ಣಸ್ವಾಮಿ (ನಂ.ಕಿಟ್ಟಿ ಎಂದು ನಾವು ಪ್ರೀತಿಗೆ ಕರೆಯುತ್ತಿದ್ದೆವು.) ಚೆನ್ನಾಗಿ ಹಾಡಿದ. ಹೆಂಗಸರು, ಮಕ್ಕಳು ಸುತ್ತ ನಿಂತರು. ಭಜನೆ ಕೇಳಿದರು. ಸ್ವಲ್ಪ ಹೊತ್ತಾದಮೇಲೆ ಅವರೂ ಸೇರಿದರು. ಆಮೇಲೆ ಗ್ರಾಮಾಫೋನ್ ರೆಕಾರ್ಡ್ ಹಾಕಿದೆವು. ಅದನ್ನು ಹಳ್ಳಿಯವರು ನೋಡಿಯೇ ಇರಲಿಲ್ಲ. ಅದನ್ನು ನೋಡಲು ಎಲ್ಲರೂ ಹೊರಗಡೆ ಬಂದರು. ಆಶ್ಚರ್ಯಪಟ್ಟು ಕುಳಿತುಕೊಂಡರು. ಒಬ್ಬಳು ಮುದುಕಿ ಬಂದು "ಇದೇನಪ್ಪಾ, ಪೆಟ್ಟಿಗೆಯಲ್ಲೇಕೆ ಅವನನ್ನು ಕುಳ್ಳಿರಿಸಿದ್ದೀರಾ, ಎಷ್ಟು ಹೊತ್ತು ಅಂತ ಆ ಮಗ ಕುಳಿತಿರೋದು. ಹೊರಗಡೆ ತೆಗೀರಿ" ಎಂದೇ ಅಂದಳು.

ನಿಜಸ್ಥಿತಿ ಹೇಳಿದರೂ ಆಕೆಗೆ ಸಮಾಧಾನ ಆಗಲಿಲ್ಲ. ನಮ್ಮ ಜೊತೆ ಮಾತನಾಡಲು ಪ್ರಾರಂಭಿಸಿದಳು. "ಸ್ವಲ್ಪ ನೀರು ಕೊಡುತಾಯಿ ಬಾಯಾರಿಕೆ ಆಗುತ್ತಿದೆ" ಎಂದೆವು. "ತಾವು ಅಯ್ಯೋರು ನಮ್ಮ ಕೈಲಿಂದ ನೀರು ಕುಡಿಯುತ್ತೀರಾ. ನಾವು ಕೊಡಲ್ಲ ಸ್ವಾಮಿ. ನಮಗೆ ಪಾಪ ಬರುತ್ತೆ" ಎಂದಳು. "ಪಾಪ ಬಂದರೂ ಪರವಾಗಿಲ್ಲ ನೀನು ನೀರು ಕೊಡದಿದ್ದರೆ ನಾವೇ ತೆಗೆದುಕೊಂಡು ಕುಡೀತೀವಿ" ಎಂದೆವು. ಗುಡಿಸಲಿನ ಒಳಕ್ಕೆ ಬಿಡಲು ಅವಳಿಗೆ ಹೆದರಿಕೆ. ಬಲವಂತಮಾಡಿ ನೀರು ತರಿಸಿ ಅಲ್ಲಿಯೇ ಕುಡಿದೆವು. ಅವರಿಗೆಲ್ಲಾ ಆಶ್ಚರ್ಯ. ವಿದ್ಯಾರ್ಥಿಗಳೆಲ್ಲ ನೀರು ಕುಡಿದರು. ಆಗ ತಾನು ಮುಂದು, ನಾನು ಮುಂದು ಎಂದು ನೀರು ತಂದುಕೊಟ್ಟರು. ಅಂದಿನಿಂದ ಅಲ್ಲಿಯೇ ಭಜನೆ ಮುಂದುವರಿಸಿದೆವು. ಗಂಡಸರೆಲ್ಲಾ ಗುಡಿಸಲಿನಿಂದ ಹೊರಗಡೆ ಬಂದು ವಿದ್ಯಾರ್ಥಿಗಳ ಜೊತೆ ಸೇರಲಿಕ್ಕೆ ಪ್ರಾರಂಭಿಸಿದರು.

## ಹರಿಜನರಿಂದ ದೇವಸ್ಥಾನ ಪ್ರವೇಶ

ಹರಿಜನರ ಯಜಮಾನನ ಪರಿಚಯವಾಯಿತು. ಹೆಸರು ಹನುಮಂತ. ಮನೆ ದೇವರು ಹನುಮಂತರಾಯನಾದರೂ ಊರಿನ ಹನುಮಂತರಾಯನ ಗುಡಿಯನ್ನು ಅವನು ನೋಡಿರಲಿಲ್ಲ. ಒಳಗೆ ಹೋಗಿರಲಿಲ್ಲ. ಆ ಬಗ್ಗೆ ಅವನಲ್ಲಿ ಕೇಳಿದೆವು.

"ಅಯ್ಯೋ ರಾಮ ! ನಮ್ಮಪ್ಪ ನಮ್ಮನ್ನು ಒಳಕ್ಕೆ ಬಿಡುತ್ತಾನೆಯೇ ? ನಾವು ಹರಿಜನರು. ದೇವಸ್ಥಾನದ ಹತ್ತಿರ ಕೂಡ ಹೋಗುವಂತಿಲ್ಲ. ತಮಟೆ ಬಡಿದರೂ ದೂರ ನಿಂತು ಬಡೀಬೇಕು. ದೇವಸ್ಥಾನದ ಒಳಗೆ ಹೋಗೋದೆ ? ಕೂಡದು. ದೇವರು ಬಿಟ್ಟಾನೆಯೇ ನಮ್ಮನ್ನು" ಎಂದು ಬಿಟ್ಟ. ಇವರಿಗೆ ದೇವಸ್ಥಾನದ ಪ್ರವೇಶ ಇಲ್ಲ ಎಂದು ಆಗಷ್ಟೆ ನನಗೆ ಅರ್ಥವಾಯಿತು.

ಪಟೇಲ ರಾಮೇಗೌಡರ ಹತ್ತಿರ ಮಾತನಾಡಿದೆ. ಒಂದು ಯೋಜನೆ ಹಾಕಿಕೊಂಡೆವು. ಈ ಊರಿನಲ್ಲಿ ಹರಿಜನರಿಂದ ದೇವಸ್ಥಾನದ ಪ್ರವೇಶ ಏಕಾಗಬಾರದು ? ಎಂದು ಊರಿನ ಗೌಡರನ್ನೆಲ್ಲ ಕಂಡು ಮಾತಾಡಿದೆ. ಒಪ್ಪಿಕೊಂಡರು. ಆಗ ಮುಜರಾಯಿ ಮಂತ್ರಿಯಾಗಿದ್ದ ಪಾಮುಡಿ ಸುಬ್ಬರಾಯಶೆಟ್ಟಿ ಅವರನ್ನು ಕರೆಸಲು ಏರ್ಪಾಡುಮಾಡಿ, ಹರಿಜನ ದೇವಸ್ಥಾನ ಪ್ರವೇಶಕ್ಕೆ ಗೊತ್ತುಮಾಡಿದೆವು.

ಆದಿನ ಹಳ್ಳಿಯಲ್ಲಿ ಹಬ್ಬದ ವಾತಾವರಣ. ಎಲ್ಲಿ ನೋಡಿದರೂ ಹಸಿರುತೋರಣ. ಹರಿಜನರ ಕೇರಿಯಲ್ಲಿ ಸಾರಿಸಿ, ಗುಡಿಸಿ ಮಾವಿನಸೊಪ್ಪು ಕಟ್ಟಿದರು. ಎಲ್ಲರೂ ಸ್ನಾನಮಾಡಿ, ಮಡಿಬಟ್ಟೆ ಹಾಕಿಕೊಂಡು ತೆಂಗಿನಕಾಯಿ, ಕಡ್ಡಿ-ಕರ್ಪೂರ ಹಿಡಿದು ದೇವಸ್ಥಾನಕ್ಕೆ ಬರಲು ಸಿದ್ಧರಾಗುತ್ತಿದ್ದರು. ಮಂತ್ರಿಗಳು ಬಂದರು. ಊರಿನಲ್ಲಿ ದೊಡ್ಡ ಸಭೆ ಸೇರಿತು. ಮಂತ್ರಿಗಳು ನಾವು ಮಾಡಿದ ಕಾರ್ಯಕ್ರಮ ಪ್ರಾರಂಭಿಸಿದರು. ಯಜಮಾನ ಹನುಮಂತ ನನ್ನ ಕಣ್ಣಿಗೆ ಬೀಳಲಿಲ್ಲ. ಅವನ ಮೇಲೆ ನನ್ನ ದೃಷ್ಟಿ. ಸರಿ, ಅವನ ಗುಡಿಸಲಿಗೆ ಹೋದೆ. ಅಲ್ಲಿ ಅವನಿರಲಿಲ್ಲ. ಎಲ್ಲರೂ ಅವನಿಗಾಗಿ

ಕಾಯುತ್ತಿದ್ದರು. ಅವನು ಬರದೆ ಯಾರೂ ಬರುವುದಿಲ್ಲ. ಅವನ ಮೊಮ್ಮಗನನ್ನು "ಎಲ್ಲೋ ನಿಮ್ಮ ತಾತ?" ಎಂದು ಕೇಳಿದೆ. ಗೊತ್ತಿಲ್ಲ ಎಂದ. ನನಗೆ ಮೈಬೆವರಿತು. ಮಂತ್ರಿಗಳು ಬಂದಿದ್ದಾರೆ ಎಲ್ಲಿಗೆ ಹೋದ ಈ ಮುದುಕ? ತೋಚಲಿಲ್ಲ. ಆ ಹುಡುಗನನ್ನೇ ಕೈಗೆ ನಾಲ್ಕಾಣೆ ಕೊಟ್ಟು, ಕೇಳಿದೆ. "ನಿಮ್ಮ ತಾತ ಯಾವಾಗಲೂ ಎಲ್ಲಿಗೆ ಹೋಗುತ್ತಾರೆ. ಪಕ್ಕದ ಊರಿನಲ್ಲಿ ನಿಮ್ಮ ನೆಂಟರು ಯಾರಾದರೂ ಇದ್ದಾರಾ" ಎಂದೆ. ಅವನಿಗೆ ಖುಷಿಯಾಯಿತು.

"ಬನ್ನಿ ಅಣ್ಣ ತೋರಿಸುತ್ತೀನಿ" ಎಂದ. ಸೀದಾ ಅವನ ಜೊತೆ ಹೋದೆ.

ಪಕ್ಕದ ಊರು ಅವನ ಮಗಳ ಮನೆ. ಒಳಗಡೆ ಕುಳಿತಿದ್ದ. ನನ್ನನ್ನು ನೋಡಿದ ತಕ್ಷಣ ಅವನಿಗೆ ಗಾಬರಿ.

"ಯಾಕೆ ಸ್ವಾಮಿ ಇಲ್ಲಿಗೆ ಬಂದಿರಿ?"

"ಒಳ್ಳೆ ಕೆಲಸ ಮಾಡಿದೆ. ಎಲ್ಲರೂ ನಿನ್ನ ಅಲ್ಲಿ ಕಾಯುತ್ತಾ ಇದ್ದಾರೆ. ನೀನು ಇಲ್ಲಿಗೆ ಬಂದಿದ್ದೀಯಲ್ಲಾ"

"ನಡೀರಿ ಸ್ವಾಮಿ ಎಲ್ಲರೂ ಬರುತ್ತಾರೆ ನನ್ನದೇನು ಕೆಲಸ"—ಎಂದ ಅವನು.

"ಇಲ್ಲಪ್ಪಾ, ನೀನು ಬರದೆ ಇದ್ದರೆ ಯಾರೂ ಬರೋದಿಲ್ಲ. ಆದ್ದರಿಂದ ನೀನು ಬರಲೇಬೇಕು. ನಡಿ ಹೋಗೋಣ"—ಎಂದೆ.

"ನಡೀರಿ ಸ್ವಾಮಿ ಹೋಗೋಣ" ಎಂದ.

"ನೀನು ಇಲ್ಲಿಗೆ ಯಾಕೆ ಬಂದೆ" ಮತ್ತೆ ನನ್ನ ಪ್ರಶ್ನೆ.

"ಸ್ವಾಮಿ ನನಗೆ ಲಂಗೋಟಿ ಬಿಟ್ಟರೆ ಬೇರೆ ಬಟ್ಟೆಯಿಲ್ಲ. ಹೊದೆಯಲು ಇದೊಂದೇ ಕಂಬಳಿ. ಎಲ್ಲರ ಮುಂದೆ ನಾನು ಹೇಗೆ ಸ್ವಾಮಿ ಬರೋದು" ಎಂದ ಪಾಪ.

ನನಗೆ ಕಣ್ಣೀರು ಬಂತು.

"ತಾತ ಈ ವಿಷಯ ಊರಿನಲ್ಲಿ ಮೊದಲೇ ಹೇಳಬಾರದೆ. ನಾನೇ ವ್ಯವಸ್ಥೆ ಮಾಡುತ್ತಿದ್ದೆ. ನಾನು ಪಂಚೆ ಕೊಡುತ್ತೀನಿ, ಒಂದು ಷರ್ಟು ಕೊಡುತ್ತೀನಿ. ಹಾಕಿಕೊಂಡು ಬರುವಿಯಂತೆ ಬಾ". ಎಂದು ಹೇಳಿ ಕರೆದುಕೊಂಡು ಬಂದೆ.

ಬರುವಾಗಲೇ ಬಾವಿಯ ಹತ್ತಿರ ಕರೆದುಕೊಂಡು ಹೋಗಿ ಸ್ನಾನಮಾಡಿಸಿದೆ. ಪಂಚೆ ಸುತ್ತಿಸಿ ಷರ್ಟು ಹಾಕಿಸಿ ಟವಲ್ ಕೊಟ್ಟು ಮಂತ್ರಿಗಳ ಬಳಿ ಕರೆದುಕೊಂಡು ಬಂದೆ. ಅವನಿಗಾದ ಸಂತೋಷ ಹೇಳತೀರದು. ಅವನಿಗಾಗಿ ಎಲ್ಲರೂ ಕಾಯುತ್ತಿದ್ದರು. ಹರಿಜನ ಹೆಣ್ಣುಮಕ್ಕಳು, ಗಂಡಸರು, ಒಗೆದಬಟ್ಟೆ ಹಾಕಿಕೊಂಡು ಹಣ್ಣು-ಹಂಪಲು ಇಟ್ಟುಕೊಂಡು ಬಂದರು. ದೇವಸ್ಥಾನದ ಒಳಗಡೆ ಎಲ್ಲರೂ ಹೋಗಬೇಕು ಆಗ ಪಕ್ಕದ ಹಳ್ಳಿ ಮಾದ ದೇವಸ್ಥಾನದ ಬಾಗಿಲಿನಲ್ಲಿ ತಡೆದ. ಆತನೂ ಹರಿಜನರವನು. ನೂರೇಳು ವರ್ಷ ವಯಸ್ಸು, ಗಟ್ಟಿಯಾಗಿದ್ದ. ಕೋಲು ಹಿಡಿದು ಕುಣಿಯುತ್ತಿದ್ದ. "ಇಷ್ಟೆಲ್ಲ ಸಂತೋಷವಾಗಿದ್ದೀಯಾ, ಯಾಕೆ ಅಡ್ಡ ಹಾಕಿದೆ"

ಎಂದು ಕೇಳಿದೆ. "ಸ್ವಾಮಿ ನಾವು ದೇವಸ್ಥಾನದ ಒಳಗೆ ಬರೋಲ್ಲ. ನಾವು ದನ ತಿನ್ನೋರು. ದೇವರು ನಮಗೆ ಕೆಟ್ಟದ್ದು ಮಾಡುತ್ತಾನೆ" ಎಂದ. "ದನ ತಿನ್ನುವು ದನ್ನು ಬಿಟ್ಟುಬಿಡು ದೇವರು ಒಳ್ಳೆಯದು ಮಾಡ್ತಾನೆ" ಎಂದೆ.

"ಸ್ವಾಮಿ ದನ ಸತ್ತರೆ ಗೌಡರು ಹೂಳಲಿಕ್ಕೆ ಕೊಡುತ್ತಾರೆ. ನಾವು ಅದನ್ನು ಹೂಳಬೇಕು. ಮಾಂಸ ತಿಂದು ಉಳಿದಿದ್ದನ್ನು ನಾವು ನೆಲಕ್ಕೆ ಹಾಕುತ್ತೀವಿ. ತಿನ್ನದೆ ಇರುವುದು ಹೇಗೆ? ಎಂದ.

ಪಟೇಲರನ್ನು ಕರೆದೆ. ಮಂತ್ರಿಗಳ ಸಮಕ್ಷಮ-"ಇನ್ನುಮುಂದೆ ದನ ಸತ್ತರೆ ಗೌಡರು, ಹರಿಜನರೆಲ್ಲರೂ ಸೇರಿ ಹೂಳಬೇಕು. ಇದರಿಂದ ಯಾರಿಗೂ ತೊಂದರೆ ಯಿಲ್ಲ. ಹರಿಜನರು ದನ ತಿನ್ನಬೇಕಾದ್ದು ಇಲ್ಲ." ಎಂದು ತೀರ್ಪು ನೀಡಿದೆವು. ಇಬ್ಬರೂ ಒಪ್ಪಿಕೊಂಡರು. ಎಲ್ಲರಿಗೂ ಸಂತೋಷವಾಯಿತು. ತಮಟೆ, ಗಂಟೆ, ವಾದ್ಯ ಸಮೇತ ಎಲ್ಲರೂ ದೇವಸ್ಥಾನದೊಳಗೆ ಹೋದರು. ಹರಿಜನರ ಕಣ್ಣಿನಲ್ಲಿ ಕಂಬನಿ ಹರಿಯಿತು.

## ಸಾರ್ಥಕ ಕೆಲಸ ಎಂದರು

ಆಗಿನ ಮುಖ್ಯಮಂತ್ರಿ ಕೆ. ಸಿ. ರೆಡ್ಡಿ, ಮಂತ್ರಿ ಟಿ. ಮರಿಯಪ್ಪ, ಮುಂತಾ ದವರು ನಮ್ಮ ಶಿಬಿರಕ್ಕೆ ಬಂದಿದ್ದರು. ಪ್ರತಿಯೊಬ್ಬ ವಿದ್ಯಾರ್ಥಿಯು ಕಡೇಪಕ್ಷ ಆರು ತಿಂಗಳು ಹಳ್ಳಿಯಲ್ಲಿ ಈ ರೀತಿಯಾಗಿ ಶಿಬಿರ ಹಾಕಿ ಕೆಲಸ ಮಾಡಿದರೆ, ಸರ್ಕಾರದ ಗ್ರಾಮಾಭಿವೃದ್ಧಿ ಇಲಾಖೆ ಐದು ವರ್ಷದಲ್ಲಿ ಮುಚ್ಚಿಬಿಡಬಹುದು. ಒಂದು ಹಳ್ಳಿಗೆ ಒಬ್ಬ ಇಂಜಿನಿಯರ್, ಒಬ್ಬ ವೈದ್ಯ, ವಿಜ್ಞಾನದ ವಿದ್ಯಾರ್ಥಿ, ಕಲೆ, ಹೀಗೆ ಐದು ಜನರ ವಿದ್ಯಾರ್ಥಿಗಳ ಗುಂಪು ಒಂದೊಂದು ಹಳ್ಳಿಯಲ್ಲಿ ಆರು ತಿಂಗಳು ಶಿಬಿರಮಾಡಿ, ಆ ಹಳ್ಳಿಯ ಅಭಿವೃದ್ಧಿಗಾಗಿ ಯೋಜನೆ ತಯಾರಿಸಿ ಸರ್ಕಾರಕ್ಕೆ ಕೊಟ್ಟರೆ ಅದಕ್ಕಿಂತಲೂ ಹೆಚ್ಚಾದ ಕೆಲಸ ಇನ್ನೇನು ಬೇಕು. ಹಳ್ಳಿಯ ಸಮಸ್ಯೆಗಳೆಲ್ಲಾ ಪರಿಹಾರವಾಗುತ್ತವೆ. ವಿದ್ಯಾರ್ಥಿಗಳಿಗೂ ಹಳ್ಳಿಯ ಹಾಗೂ ಜನರ ಸಂಪರ್ಕ ಬೆಳೆಯುತ್ತದೆ.

ಸಮಾರೋಪ ಭಾಷಣವನ್ನು ಕುಲಪತಿಯಾದ ಕಸ್ತೂರಿ ರಾಜಶೆಟ್ಟಿಯವರು ಮಾಡಿದರು. ಸಭೆಗೆ ಸಿದ್ದವನಹಳ್ಳಿ ಕೃಷ್ಣಶರ್ಮರೇ ಮುಂತಾದ ನಾಯಕರು ಬಂದಿದ್ದರು. ಎಲ್ಲಾ ವಿದ್ಯಾರ್ಥಿಗಳಿಗೂ ಒಂದೊಂದು ಪ್ರಶಸ್ತಿ ಪತ್ರ ಕೊಡಲಾಯಿತು. ಹಳ್ಳಿಯಲ್ಲಿ ಆದಿನ ಹಬ್ಬದ ವಾತಾವರಣ. ಹಳ್ಳಿಬಿಟ್ಟು ಬರಬೇಕಾದರೆ ನಮ್ಮ ಕಣ್ಣಿನಲ್ಲೂ ನೀರು. ಹಳ್ಳಿಯ ಜನರೆಲ್ಲರಲ್ಲೂ ಕಣ್ಣೀರು. ಪ್ರತಿವಾರ ಬರಬೇಕೆಂದೂ ಕೇಳಿಕೊಂಡರು. ನಮ್ಮ ಜೊತೆ ಸಹಾಯಕನಾಗಿದ್ದ ಕರೀಂ ಎಲ್ಲಾ ವಿದ್ಯಾರ್ಥಿ ಗಳಲ್ಲೂ ಅಚ್ಚುಮೆಚ್ಚಿನವ. ಅವನು ಮಾಡದ ಕೆಲಸವಿಲ್ಲ. ನೀರು ತರುವುದರಿಂದ ಹಿಡಿದು ಪಾತ್ರೆ ತೊಳೆಯುವುದು, ಅಡಿಗೆಗೆ ಸಹಕರಿಸುವುದು, ರಸ್ತೆ ರಿಪೇರಿ ಕೆಲಸ,

ಸಂಜೆ ಭಜನೆಯಲ್ಲಿ ಪಾಲುಗೊಳ್ಳುವುದು. ರಾತ್ರಿ ಅಕ್ಷರ ಕಲಿಯುವುದು. ಇವೆಲ್ಲ ವನ್ನು ಮಾಡುತ್ತಿದ್ದ. ಸುಮಾರು ಒಂದು ವರ್ಷ ನಮ್ಮ ಮನೆಗೂ ಬಂದು ಹೋಗು ತ್ತಿದ್ದ. ಆಗಿನ ವಿದ್ಯಾರ್ಥಿ ಕಾಂಗ್ರೆಸ್ಸಿನಲ್ಲಿ ಇದೊಂದು ಮೈಲಿಗಲ್ಲು. ಶಿಬಿರದಲ್ಲಿ ಇದ್ದ ವಿದ್ಯಾರ್ಥಿಗಳ ಪರೀಕ್ಷೆ ಫಲಿತಾಂಶ ತಿಳಿಯಿತು. ನಮ್ಮ ಗುಂಪಿನಲ್ಲಿ ಎಲ್ಲರೂ ತೇರ್ಗಡೆ ಆಗಿದ್ದರು. ಇಂಜಿನಿಯರಿಂಗ್ ಕಾಲೇಜು ಕೊನೆ ವರ್ಷ. ಕೆಲಸ ಹುಡುಕ ಬೇಕಿತ್ತು. ಜೀವನದಲ್ಲಿ ಈ ಶಿಬಿರ ಮರೆಯುವ ಹಾಗಿಲ್ಲ. ಶಿಬಿರದ ಫಲವನ್ನು ಸವಿದ ಎಲ್ಲರೂ ಇದನ್ನು ಒಂದು ಸಾರ್ಥಕ ಕೆಲಸ ಎಂದರು.

## ಕಾಗ್ರೆಸ್ ಸಮ್ಮೇಳನಗಳಲ್ಲಿ

ವಿದ್ಯಾರ್ಥಿ ಕಾಂಗ್ರೆಸ್ ಆದಮೇಲೆ ಯೂತ್ ಕಾಂಗ್ರೆಸ್ ಕಟ್ಟಿದೆವು. ಅನೇಕ ಕಾರ್ಯಕ್ರಮಗಳನ್ನು ನಡೆಸಲಾಯಿತು. ವಲ್ಲಭಬಾಯಿ ಪಟೇಲ್, ಪಂಡಿತ್ ನೆಹರು, ಇವರುಗಳನ್ನು ಕರೆಸಿ ಸೆಂಟ್ರಲ್ ಕಾಲೇಜು ಮೈದಾನದಲ್ಲಿ ಭಾಷಣ ಏರ್ಪಡಿಸ ಲಾಯಿತು.

1951ರಲ್ಲಿ ಅಖಿಲಭಾರತ ಕಾಂಗ್ರೆಸ್ ಅಧಿವೇಶನ ಬೆಂಗಳೂರಿನ ಲಾಲ್‌ಬಾಗಿ ನಲ್ಲಿ ನಡೆಯಿತು. ನಾನು ಆ ವೇಳೆಗೆ ಕಾರ್ಖಾನೆಯಲ್ಲಿ ಕೆಲಸಮಾಡುತ್ತಿದ್ದೆ. ರಜೆ ಹಾಕಿ ನಾನೊಬ್ಬ ಸ್ವಯಂ ಸೇವಕನಾಗಿ ಕೆಲಸಮಾಡಿದೆ. ನನಗೆ ಕಾರ್ಯನಿರ್ವಾಹಕ ಸಮಿತಿ ಸದಸ್ಯರುಗಳನ್ನು ನೋಡಿಕೊಳ್ಳುವ, ಅವರಿಗೆ ಸಹಾಯ ಮಾಡುವ ಜವಾಬ್ದಾರಿ. ಕುಮಾರ ಪಾರ್ಕಿನಲ್ಲಿ ಕಾರ್ಯನಿರ್ವಾಹಕ ಸಭೆ. ಪುರುಷೋತ್ತಮ ದಾಸ್ ಟಂಡನ್ ಅವರು ಕಾಂಗ್ರೆಸ್ ಅಧ್ಯಕ್ಷ. ಸಣ್ಣ, ಕುಳ್ಳನೆಯ ವ್ಯಕ್ತಿ. ಗಡ್ಡ, ಕೆದರಿದ ಕೂದಲು, ಜುಬ್ಬ, ಪಂಚೆ, ಸಾಧಾರಣ ಚಪ್ಪಲಿ. ಅವರ ಊಟ ಸರಳ. ಕಾಳು, ತರಕಾರಿ. ಹಾಲೂ ಸಹ ಇಲ್ಲ. ಅವರ ಬಟ್ಟೆ ಅವರೇ ಒಗೆದುಕೊಳ್ಳು ತ್ತಿದ್ದರು. ಬಲು ಚುರುಕಾದ ಓಡಾಟ. ಒಂದು ನಿಮಿಷವೂ ಸುಮ್ಮನೆ ಇರುತ್ತಿರ ಲಿಲ್ಲ. ಅವರನ್ನು ಕಂಡರೆ ಎಲ್ಲರಿಗೂ ಭಯ.

ಬೆಳಿಗ್ಗೆ ಎಂಟು ಗಂಟೆಗೆ ಕಾರ್ಯನಿರ್ವಾಹಕ ಸಮಿತಿ ಸಭೆ ಪ್ರಾರಂಭವಾದರೆ ಸುಮಾರು ಮಧ್ಯಾಹ್ನ ಒಂದುವರೆ ಗಂಟೆ ತನಕ ನಡೆಯುತ್ತಿತ್ತು. ನಾಲ್ಕು ಗಂಟೆಗೆ ಮತ್ತೆ ಪ್ರಾರಂಭವಾದರೆ ರಾತ್ರಿ ಎಂಟು ಅಥವಾ ಒಂಬತ್ತು ಗಂಟೆಯವರೆಗೆ. ಒಂದೊಂದು ಸಾರಿ ರಾತ್ರಿಯೆಲ್ಲಾ ನಡೆಯುತ್ತಿತ್ತು. ನಾಯಕರನ್ನು ನೋಡಲು ಜನ ನೂಕುನುಗ್ಗಲು. ಆದರೆ ಅವರ ರಕ್ಷಣೆ ನೋಡುವುದು ಜವಾಬ್ದಾರಿ ಕೆಲಸ.

ನೆಹರೂಜಿಯವರು ಅರಮನೆಯಲ್ಲಿ ಇಳಿದುಕೊಂಡಿದ್ದರು, ವೇಳೆಗೆ ಸರಿಯಾಗಿ ಸಭೆಗೆ ಹಾಜರು. ಸಭೆ ನಡೆಯುವಾಗ ಸುತ್ತಲೂ ನಿಶ್ಶಬ್ದ. ಯಾರು ಓಡಾಡಿದರೂ ಸಹಿಸುತ್ತಿರಲಿಲ್ಲ.

ಪುರುಷೋತ್ತಮದಾಸ್ ಟಂಡನ್‌ರವರ ಕಾರ್ಯದರ್ಶಿ ನನ್ನ ಸ್ನೇಹಿತರಾದರು. ಅವರು ನನ್ನನ್ನು ಎಲ್ಲಿ ಕಡೆ ಕರೆದುಕೊಂಡು ಹೋಗುತ್ತಿದ್ದರು. ಎ. ಐ. ಸಿ. ಸಿ. ಯ ಸಭೆ ಪ್ರಾರಂಭವಾದಾಗ ಕಾರ್ಯನಿರ್ವಾಹಕ ಸಮಿತಿ ಸಭೆಯೊಡನೆ ನನ್ನನ್ನು ಅವರ ಸಹಾಯಕನನ್ನಾಗಿ ಕರೆದು ಕೂರಿಸಿದರು. ಗೋವಿಂದವಲ್ಲಭಪಂತ್, ಪಟೇಲ್, ನೆಹರೂ, ಷೇಕ್‌ಅಬ್ದುಲ್ಲಾ ಇಂತಹ ನಾಯಕರ ದರ್ಶನದ ಜೊತೆಗೆ ಅವರ ವಾಣಿಯನ್ನು ಹತ್ತಿರ ಕೂತು ಕೇಳಲು ಅವಕಾಶವಾಯಿತು. ಆಗ ಕೆಂಗಲ್ ಹನುಮಂತಯ್ಯನವರು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರು.

ಒಮ್ಮೆ ಅಖಿಲಭಾರತ ಕಾಂಗ್ರೆಸ್ ಸಮ್ಮೇಳನ ಲಾಲ್‌ಬಾಗಿನ ಗಾಜಿನ ಮನೆಯಲ್ಲಿ ನಡೆಯಿತು. ರವೀಂದ್ರವರ್ಮ ಆಗಿನ ವಿದ್ಯಾರ್ಥಿ ಸಂಘದ ಅಧ್ಯಕ್ಷರು. ಭಾರತದ ಎಲ್ಲಾ ಪ್ರಾಂತ್ಯಗಳಿಂದ ವಿದ್ಯಾರ್ಥಿಗಳು ಬಂದಿದ್ದರು. ಕಲ್ಕತ್ತದಿಂದ ಬಂದ ಗುಂಪಿನ ಮೇಲ್ವಿಚಾರಣೆ ನನ್ನದು. ಎಲ್ಲರೂ ಸೊಗಸಾಗಿ ಹಾಡುತ್ತಿದ್ದರು. ರಾತ್ರಿಯೆಲ್ಲಾ ಕುಳಿತು ಅವರ ಹಾಡುಗಳನ್ನು ಕೇಳುತ್ತಿದ್ದೆ. ಈ ಸಮ್ಮೇಳನಗಳಿಂದ ಊಟ, ಉಪಚಾರ, ವಸತಿ ಹೇಗೆ ಏರ್ಪಡಿಸಬೇಕೆಂಬುದನ್ನು ಕಲಿತೆ. ಈ ಸಮ್ಮೇಳನಕ್ಕೆ ಆಚಾರ್ಯ ಕೃಪಲಾನಿ, ಶ್ರೀಮತಿ ಸುಚೇತಾ ಕೃಪಲಾನಿ ಅವರುಗಳು ಆಗಮಿಸಿದ್ದರು.

ಮಲ್ಲೇಶ್ವರದಲ್ಲಿ ಯಾವ ಚುನಾವಣೆ ನಡೆದರೂ ಯುವಕರಾದ ನಮ್ಮ ಸಲಹೆ, ಬೆಂಬಲ ಇಲ್ಲದೆ ಚುನಾವಣೆ ಇಲ್ಲ. ಸ್ವಯಂ ಸೇವಕರೇ ಸ್ವಂತ ಹಣ ಖರ್ಚುಮಾಡಿ ಚುನಾವಣಾ ಪ್ರಚಾರ ಮಾಡುತ್ತಿದ್ದರು.

**ತಿಲಕ್ ಕಾರ್ಮಿಕ ಸಂಘ**

ಮಲ್ಲೇಶ್ವರದಲ್ಲಿ ಗಾಂಧೀ ಸಾಹಿತ್ಯ ಸಂಘ ಪ್ರಾರಂಭಿಸಿದ ಮೇಲೆ ಶ್ರೀರಾಂಪುರದಲ್ಲಿ ತಿಲಕ್ ಸಂಘ ಪ್ರಾರಂಭವಾಯಿತು. ಕಾರ್ಮಿಕ ಬಂಧುಗಳ ಜೊತೆ ಸೇರುವುದು, ಗಾಂಧೀಜಯಂತಿ ವಿಜೃಂಭಣೆಯಿಂದ ನಡೆಸುವುದು ಇವರ ಕಾರ್ಯಕ್ರಮ. ಈ ಸಂಘದ ನಾಯಕ ಮಹಾರಾಜ ಮಿಲ್ಸ್‌ನಲ್ಲಿ ಕೆಲಸ ಮಾಡುತ್ತಿದ್ದ. ಕಾರ್ಮಿಕ ನಾಯಕ ಅಯೋಧ್ಯಾರಾಂ, ವಿ. ಆರ್. ನಾಯ್ಡು ಈ ತಿಲಕ್ ಸಂಘಕ್ಕೆ ಸದಸ್ಯರಾದರು. ರಚನಾತ್ಮಕ ಕಾರ್ಯಮಾಡಲು ಸೇರಿದರು. ಅಧ್ಯಕ್ಷರೂ ಆದರು. ಮುಂದಿನ ಚುನಾವಣೆಯಲ್ಲಿ ಅವರಿಗೆ ಕಾರ್ಮಿಕ ಪ್ರತಿನಿಧಿಯಾಗಿ ಚುನಾಯಿಸಬೇಕೆಂದು ಕೇಳಿಕೊಳ್ಳಲಾಯಿತು. ಆಗ ಬೆಂಗಳೂರು ಸಿಟಿ ಮುನಿಸಿಪಲ್ ಸದಸ್ಯತನಕ್ಕೆ ಕಾರ್ಮಿಕರ ಪರವಾಗಿ ನಿಲ್ಲಬೇಕೆಂದು ಅರ್ಜಿಹಾಕಿದರು. ಆಗ ಮಲ್ಲೇಶ್ವರದ ನರಸಿಂಹಯ್ಯಂಗಾರ್ ಕಾಂಗ್ರೆಸ್ ಪರವಾಗಿ ಸ್ಥಳ ಕೊಡಬೇಕೆಂದು ಅರ್ಜಿ ಹಾಕಿದರು. ಸಿದ್ದವನಹಳ್ಳಿ ಕೃಷ್ಣಶರ್ಮರು ಆಯ್ಕೆ ಸಮಿತಿಯ ಸದಸ್ಯರು. ನರಸಿಂಹಯ್ಯಂಗಾರ್‌ಗೆ ಸೀಟು ಕೊಡುತ್ತಾರೆಂದು ತಿಳಿಯಿತು. ಶರ್ಮಾಜಿಗೆ ಫೋನ್ ಮಾಡಿದೆವು.

ನರಸಿಂಹಯ್ಯಂಗಾರ್ ಅವರಿಗೆ ಟಿಕೆಟ್ ಕೊಡಕೂಡದು ಎಂದು ತಿಳಿಸಿದೆವು. ಹಾಗೇನಾದರೂ ಕೊಟ್ಟರೆ ಚುನಾವಣೆಯ ಜವಾಬ್ದಾರಿ ನಮ್ಮದಲ್ಲವೆಂದೆವು. ಫೋನ್ ಮಾಡುವಾಗ ಶರ್ವಾಜಿಯವರು, ಸಾಹುಕಾರ್ ಚನ್ನಯ್ಯನವರ ಕೈಲಿ ಕೊಟ್ಟರು. ನಮ್ಮ ಗಲಾಟೆ ಕೇಳಿ "ಸರಿ, ಹುಡುಗರು ಕೇಳಿದ ಹಾಗೆ ಮಾಡೋಣ. ಪಿ. ಆರ್. ನಾಯ್ಡುಗೆ ಕೊಡಿ" ಎಂದರು. ಚುನಾವಣೆಯಲ್ಲಿ ನಾಯ್ಡು ಗೆದ್ದರು.

ಹೀಗೆ ಯುವಕರಾಗಿದ್ದ ನಮ್ಮ ಮಾತಿಗೆ ಹಿರಿಯರು ಗೌರವ ಕೊಡುತ್ತಿದ್ದರು. ಕಾರಣ ಕೆಲಸಗಾರರು ಮುಖ್ಯ ಎಂದು.

## ಹರಿಜನರ ಮುದ್ದಣ್ಣ

ಗಾಂಧೀಜಯಂತಿ, ಕಸ್ತೂರಬಾ ದಿನಾಚರಣೆ ಇವುಗಳಲ್ಲಿ ಆಸಕ್ತಿ ವಹಿಸುತ್ತಿದ್ದವ ಎಂದರೆ ಮುದ್ದಣ್ಣ. ಹರಿಜನರವ. ನನ್ನ ಸ್ನೇಹಿತ. ಈತ ಮಲ್ಲೇಶ್ವರದ ಮುನಿಸಿಪಾಲಿಟಿ ಆಸ್ಪತ್ರೆಯಲ್ಲಿ ಕಾಂಪೌಂಡರ್. ಬಣ್ಣ ಕಪ್ಪು, ಎತ್ತರವಾದ ಮನುಷ್ಯ. ಬಿಳಿಯ ಜುಬ್ಬ, ಪೈಜಾಮ, ವಾಸ್‌ಕೋಟು, ಗಾಂಧೀ ಟೋಪಿ, ಇದು ಆತನ ಉಡುಪು. ಸಂಜೆ ಹೊತ್ತು ಮಕ್ಕಳಿಗೆ ಪಾಠ ಹೇಳುತ್ತಿದ್ದ. ಕಸ್ತೂರಿಬಾ ಶಾಲೆ ತೆರೆದ. ರಚನಾತ್ಮಕ ಕಾರ್ಯದಲ್ಲಿ ಆಸಕ್ತಿ. ಗಾಂಧೀ ಜಯಂತಿಗೆ ಹಣ ವಸೂಲಿಗೆ ಓಡಾಡುವಾಗ, ಮೈ ಹುಷಾರಿಲ್ಲದೆ ರಕ್ತಭೇಧಿ ಆಯಿತು. ಔಷಧಿ ತೆಗೆದುಕೊಳ್ಳಲು ಮುನಿಸಿಪಾಲಿಟಿ ಆಸ್ಪತ್ರೆಗೆ ಹೋದೆ. ಅದೇ ದೊಡ್ಡ ಆಸ್ಪತ್ರೆ ನಮಗೆ. ನಾನು ಚಿಕ್ಕಂದಿನಿಂದಲೂ ಅಲ್ಲೇ ಔಷಧಿ ತೆಗೆದುಕೊಳ್ಳುತ್ತಿದ್ದುದು. ಕಾರಣ ಅಲ್ಲಿ ಉಚಿತ. ಹೀಗೆ ಔಷಧಿಗೆ ಹೋದಾಗ ಗಾಂಧೀಟೋಪಿ, ಖಾದಿಬಟ್ಟೆ ಹಾಕಿದ್ದ ನನ್ನನ್ನು ನೋಡಿ ಮಾತನಾಡಿಸಿದ. ಸಂಜೆ ನಮ್ಮ ಮನೆಗೆ ಬಂದ. ಹಣ ವಸೂಲಿ ಕಾರ್ಯದಲ್ಲಿ ಸಹಕರಿಸಿದ. ಹಾಗೆಯೇ ಸ್ನೇಹ ಬೆಳೆಯಿತು. ಹಾಡುವುದಕ್ಕೆ ಚೆನ್ನಾಗಿ ಬರದಿದ್ದರೂ, ಗಂಟಲು ಚೆನ್ನಾಗಿರದಿದ್ದರೂ, ಗಾಂಧೀ ಮೇಲೆ ಒಂದು ಹಾಡನ್ನು ಯಾವ ಸಭೆಯಲ್ಲಾದರೂ ಹಾಡಬೇಕು. ಪರಿಚಯವಾದ ಮೇಲೆ ನನಗೆ ಅವನೇ ವೈದ್ಯ. ಮನೆಯಲ್ಲಿ ಯಾರಿಗೆ ಹುಷಾರಿಲ್ಲದಿದ್ದರೂ ಆತನೆ ಔಷಧಿ ಕೊಡುತ್ತಿದ್ದ.

ಒಂದು ಸಾರಿ ನಮ್ಮ ಭಾವನವರ ತಮ್ಮ ನಾರಾಯಣ ಕಾಲು ಹುಣ್ಣು ಮಾಡಿಕೊಂಡು ಮಲಗಿದ್ದರು. ಅದು ದೊಡ್ಡದಾಗಿ ತಿರುಗಾಡಲೂ ಆಗದಾಯಿತು. ಆಗ ಮುದ್ದಣ್ಣನೆ ಔಷಧಿ ಹಾಕಿ ವಾಸಿಮಾಡಿದ. ಕಾಲು ಸರಿಹೋಯಿತು.

ಒಂದುದಿನ ಮುದ್ದಣ್ಣ ಹರಿಜನರವನೆಂದು ನಮ್ಮ ತಾಯಿಗೆ ತಿಳಿಯಿತು. ನನ್ನನ್ನು ಹೀಯಾಳಿಸಿದರು. ಚೆನ್ನಾಗಿ ಬೈದರು. "ಹುಟ್ಟಿದ ಜಾತಿ ಏನೂ ಮಾಡುವುದಿಲ್ಲ. ಈಗ ನಾವು ಒಕ್ಕಲಿಗರ ಜಾತಿಯಲ್ಲಿ ಹುಟ್ಟಿದರೂ ಬ್ರಾಹ್ಮಣರ ಹಾಗೆ ನಮ್ಮ ನಡವಳಿಕೆ, ಆಚಾರ, ವ್ಯವಹಾರವೆಲ್ಲಾ ಇಲ್ಲವೆ. ಅವರಂತೆ ಆಗಬೇಕು

ಎಂದು ಪ್ರಯತ್ನ ಪಡುತ್ತಿಲ್ಲವೆ. ನಮ್ಮ ಮನೆ ಬಾಡಿಗೆಗೆ ಇರುವ ಬ್ರಾಹ್ಮಣರು ನಮ್ಮನ್ನು ಶೂದ್ರ ಎಂದು ಒಳಗೆ ಸೇರಿಸದ ಇದ್ದರೆ ನಿಮ್ಮ ಮನಸ್ಸು ಹೇಗಾಗುತ್ತೆ. ಹಾಗೆ ಮುದ್ದಣ್ಣನೂ ಸಹ ಅಲ್ಲವೆ. ಆದ್ದರಿಂದ ನೀವು ಬೇಜಾರು ಪಟ್ಟುಕೊಳ್ಳ ಬೇಡಿ" ಎಂದ. ಅವರ ಮನಸ್ಸನ್ನು ಬದಲಾಯಿಸಲು ಸಾಧ್ಯವೆ. "ಏನಾದರೂ ಮಾಡಿಕೊ" ಎಂದು ಸುಮ್ಮನಾದರು.

ಮುದ್ದಣ್ಣ ಹರಿಜನರ ಮಕ್ಕಳಿಗಾಗಿ ಒಂದು ಹಾಸ್ಟೆಲ್ ತೆರೆದ. ಅದರ ಹೆಸರು ಕಸ್ತೂರಿಬಾ ವಿದ್ಯಾರ್ಥಿ ನಿಲಯ. ಅದಕ್ಕಾಗಿ ಬೇಕಾದಷ್ಟು ಶ್ರಮಿಸಿದ. ಸ್ವಲ್ಪ ದಿನಗಳಲ್ಲಿ ಅವನಿಗೆ ಬೇರೆ ಕಡೆಗೆ ವರ್ಗವಾಯಿತು.

## ಕಾಲೇಜು ದಿನಗಳು

ಇಂಟರ್ ಮೀಡಿಯಟ್ ಕಾಲೇಜಿನಲ್ಲಿದ್ದಾಗಲೆ 42ರ ಚಳುವಳಿ ಆರಂಭ ವಾಗಿದ್ದು. ಮುಷ್ಕರದ ಬಳಿಕ ಕಾಲೇಜಿಗೆ ಹೋದೆವು. ತರಗತಿ ಸೇರಿದೆವು. ವಂದೇಮಾತರಂ ಎಲ್ಲರೂ ಸೇರಿ ಹಾಡುವುದು ಪದ್ಧತಿ. ನನಗೆ ಚೆನ್ನಾಗಿ ಹಾಡಲು ಬರು ತ್ತಿತ್ತು. ವಿದ್ಯಾರ್ಥಿ ಸಂಘದ ಅಧ್ಯಕ್ಷ ನನ್ನನ್ನು ಕರೆಸಿ ಹಾಡಿಸುತ್ತಿದ್ದ. ಅದೇ ಒಂದು ಹೆಮ್ಮೆ. ಅದೇ ಸಭಾಂಗಣದಲ್ಲಿ ರೈಟ್ ಹಾನರಬಲ್ ಸಿಲ್ವರ್‌ಟಂಗ್ ಶ್ರೀನಿವಾಸಶಾಸ್ತ್ರಿ ಅವರ ಭಾಷಣ ಕೇಳಿದೆ. ವರಕವಿ ದ. ರಾ. ಬೇಂದ್ರೆಯವರು ಗಂಗಾವತರಣವನ್ನು ಇಲ್ಲಿ ಹಾಡಿದ್ದರು. ಅವರ ಕಂಠಮಾಧುರ್ಯ ಕೇಳಿದ್ದು ಇಲ್ಲಿ. ಎಲ್ಲಾ ನಾಯಕರ ಭೇಟಿ ಆಗಬಹುದಾದ ಅವಕಾಶವಿತ್ತು. ಆಗ ನನ್ನ ಉಡುಪು ದಟ್ಟಿಪಂಚೆ, ಕಾಲರ್ ಇಲ್ಲದ ಅಂಗಿ, ಗಾಂಧೀಟೋಪಿ. ಬೆಳಿಗ್ಗೆ ಕಾಲೇಜಿನಲ್ಲಿ ವ್ಯಾಯಾಮಕ್ಕೆಂದು ಒಂದು ಕಾಕಿ ನಿಕ್ಕರ್ ಹೊಲಿಸಿದ್ದೆ. ಆಗ ನನ್ನಲ್ಲಿ ಪ್ಯಾಂಟು ಇರಲಿಲ್ಲ. ಕಾಲೇಜಿಗೆ ನಡವೇ ಹೋಗಬೇಕಿತ್ತು. ಸಂಸ್ಕೃತವನ್ನು ಎರಡನೆಯ ಭಾಷೆಯನ್ನಾಗಿ ತೆಗೆದುಕೊಂಡಿದ್ದೆ. ಭೌತ, ರಸಾಯನಶಾಸ್ತ್ರ, ಗಣಿತ, ಐಚ್ಛಿಕ ವಿಷಯ.

ಸಂಸ್ಕೃತವನ್ನು ಶ್ರೀರಾಮಚಂದ್ರರಾಯರು ಹೇಳಿ ಕೊಡುತ್ತಿದ್ದರು. ಇವರು ಕ್ಲಾಸ್ ತೆಗೆದುಕೊಂಡರೆ ಆ ತರಗತಿ ಭರ್ತಿ. ಸ್ಥಳ ಸಿಗುವುದೇ ಕಷ್ಟವಾಗುತ್ತಿತ್ತು. ಒಂದು ಸಾರಿ ಬೇರೆ ತರಗತಿಯ ಹುಡುಗರು ಬಂದು ಕುಳಿತ್ತಿದ್ದರು. ಅವರನ್ನು ನೋಡಿದ ರಾಮಚಂದ್ರರಾಯರು "ಬೇರೆ ತರಗತಿ ಹುಡುಗರು ಬಂದಿದ್ದಾರೆ, ಹಾಗೆ ಬರಬಾರದು. ಬಾಳಿದರೆ ಒಬ್ಬ ಗಂಡನ ಹತ್ತಿರ ಬಾಳಬೇಕು. ಸಂಸ್ಕೃತ ಪಾಠ ಕೇಳಬೇಕಾದರೆ ನಿಮ್ಮ ತರಗತಿಗೆ ಹೋಗಬೇಕೇ ವಿನಹ ಬೇರೆ ತರಗತಿಗೆ ಹೋಗ ಬಾರದು" ಎಂದು ತಮಾಷೆ ಮಾಡಿದರು. ನಾವೆಲ್ಲ ನಕ್ಕಿದ್ದೇ ನಕ್ಕಿದ್ದು.

ಸಂಸ್ಕೃತದ ಅಧ್ಯಾಪಕರು ಮತ್ತೊಬ್ಬರು ಶ್ರೀ ಕೃಷ್ಣಸ್ವಾಮಿ. ನಮಗೆ ಇಟ್ಟಿದ್ದು ಕಾಳಿದಾಸ ಮಹಾಕವಿಯ ರಘುವಂಶ 14ನೆಯ ಭಾಗ. ಅದರಲ್ಲಿ ಸೀತೆಯ

ಗುಣವನ್ನು ವಿವರಿಸುತ್ತ ಅಗಸನ ಕಥೆ ಹೇಳಲು ಪ್ರಾರಂಭಿಸಿದರು. ಶ್ರೀರಾಮ ಸೀತೆ ವಿಚಾರದಲ್ಲಿ, ಅನುಮಾನ ಪಡುವುದಕ್ಕೆ ಏನೂ ಕಾರಣವಿಲ್ಲ. "What more certificates does Rama want"? ಪ್ರಶ್ನಿಸಿದರು. ನನ್ನ ಹಿಂದೆ ಶ್ರೀನಿವಾಸನ್ ಕುಳಿತಿದ್ದರು. ಮೆಲ್ಲಗೆ "ಮೆಡಿಕಲ್ ಸರ್ಟಿಫಿಕೇಟ್ ಸಾರ್" ಎಂದರು.

ಉಪಾಧ್ಯಾಯರಿಗೆ ಸಿಟ್ಟುಬಂತು. ಪುಸ್ತಕ ಮುಚ್ಚಿ ತರಗತಿಯಿಂದ ಹೊರಟು ಹೋದರು. ಎರಡು ಮೂರು ತರಗತಿ ತೆಗೆದುಕೊಳ್ಳಲಿಲ್ಲ. ನನಗೆ ಪರಿಚಯ ವಿದ್ದುದರಿಂದ ಅವರಲ್ಲಿ ಹೋಗಿ ವಿದ್ಯಾರ್ಥಿಗಳ ಪರವಾಗಿ ಕ್ಷಮಾಪಣೆ ಕೇಳಿದೆ. ರಾಮ ಸೀತೆಯರ ಮೇಲೆ ಸಂಸ್ಕೃತ ವಿದ್ಯಾರ್ಥಿಗಳಾದ ನಿಮಗೆ ಗೌರವವಿಲ್ಲ. ನಿಮ್ಮಂತವರಿಗೆ ಪಾಠ ಹೇಳಿದರೇನು ಬಿಟ್ಟರೇನು ? ಎಂದರು. ಪುನಃ ಕ್ಷಮಾಪಣೆ ಕೇಳಿದೆ. ಯಾರು ಆ ವಿದ್ಯಾರ್ಥಿ ಎಂದು ಕೇಳಿದರು. "ಗೊತ್ತಿಲ್ಲ ಸಾರ್, ಗೊತ್ತಾದ ಮೇಲೆ ಹೇಳು ತ್ತೀನಿ" ಎಂದು ಹೇಳಿ ತರಗತಿಗೆ ಬಂದಮೇಲೆ ಒಟ್ಟಿಗೆ ಕ್ಷಮಿಸಿ ಎಂದು ಕೂಗಿಕೊಂಡೆವು. ಆಗ ಸಮಾಧಾನವಾಗಿ ಪಾಠ ಹೇಳಿದರು.

ನನಗೆ ವಿದ್ಯಾರ್ಥಿ ವೇತನ ಆಗ ಹನ್ನೊಂದು ರೂಪಾಯಿ ಬರುತ್ತಿತ್ತು. ಬಡ ಹುಡುಗ ಎಂದು ಉಚಿತವಾಗಿ ಮಧ್ಯಾಹ್ನದ ವೇಳೆ ಒಂದು ದೊನ್ನೆ ಅನ್ನಕೂಡ ಸಿಗುತ್ತಿತ್ತು. ಹೋಟೇಲಿಗೆ ಹೋಗುವುದಂತು ಗೊತ್ತೇ ಇರಲಿಲ್ಲ. ಮನೆಯಲ್ಲಿ ತಿಂಡಿ–ಕಾಫಿ ಮಾಡಿದರೆ ಉಂಟು ಇಲ್ಲದಿದ್ದರೆ ಇಲ್ಲ.

ವಿದ್ಯಾರ್ಥಿ ವೇತನಕ್ಕೆ ಬಹಳ ಕಷ್ಟಪಟ್ಟೆ. ನಮ್ಮ ಮನೆ ಎದುರಿಗೇ ಮಿಡಲ್ ಸ್ಕೂಲಿದೆ. ಅಲ್ಲಿ ತಿಮ್ಮಯ್ಯ ಎಂದು ಜವಾನ. ನಮ್ಮೂರಿನ ಹತ್ತಿರವೇ ಇರುವ ಸಣಬ, ಆತನ ಊರು. ನಮ್ಮ ತಂದೆ ತಂಗೀಸ ಆ ಊರಿಗೆ ಕೊಟ್ಟಿದ್ದರಂತೆ. ಮನೆ ಎದುರಿಗೇ ಇರುವುದರಿಂದ ತಿಮ್ಮಯ್ಯನ ಪರಿಚಯವಾಯಿತು. ಆಗ ಕಾಗದದ ಅಭಾವ. ಒಂದು ಕಡೆ ಬರೆದಿರುವ ಹಳೆ ಕಾಗದ ಎಲ್ಲಾ ಸೇರಿಸಿ ನನಗೆ ಕೊಡುತ್ತಿದ್ದ. ಅದರಲ್ಲಿ ಬರೆಯುತ್ತಿದ್ದೆ. ನನಗೆ ಸ್ಕಾಲರ್ ಷಿಪ್ ಆಗಬೇಕು ಎಂದು ಆತನಿಗೆ ಹೇಳಿದೆ. ನೋಡೋಣ ಮರಿ ಯಾರನ್ನಾದರೂ ಹಿಡಿಯೋಣ ಎಂದ. ಕಡೆಗೆ ಸಮಿತಿ ಸದಸ್ಯ ರನ್ನ ಹಿಡಿದು ಸ್ಕಾಲರ್ ಷಿಪ್ ಮಾಡಿಸಿಕೊಂಡೆ.

### ನಿನಗೇಕಯ್ಯಾ ಇಂಜಿನಿಯರಿಂಗ್ ?

ಇಂಜಿನಿಯರಿಂಗ್ ಕಾಲೇಜಿನಲ್ಲಿ ಓದುತ್ತಿರಬೇಕಾದರೆ ಸ್ಕಾಲರ್ ಷಿಪ್ ಗೆ ಸಮಿತಿ ಸದಸ್ಯರನ್ನು ಕಂಡೆ. ಒಬ್ಬ ಸದಸ್ಯರು "ನೀನೇಕಯ್ಯಾ ಇಂಜಿನಿಯರಿಂಗ್ ಓದಬೇಕು. ಹಳ್ಳಿಗೆ ಹೋಗಿ ಹೊಲ ಉಳು. ಸ್ಕಾಲರ್ ಷಿಪ್ ಕೊಟ್ಟು ಓದಿಸುವುದಕ್ಕೆ ಖಜಾನೆ ಇಟ್ಟಿದೇವಾ ? ಫೀಜು ಬೇಕಾದರೆ ಮಾಫಿ ಮಾಡೋಣ. ನೋಡ್ತೀನಿ ಹೋಗು" ಎಂದರು. ಕಾಲೇಜಿನ ಉಪಾಧ್ಯಾಯರನ್ನು ಕೇಳಿದೆ "ಸ್ಕಾಲರ್ ಷಿಪ್ ಕೊಡುವುದು

ಕಷ್ಟ. ಫೀಜು ಮಾಫಿ ಮಾಡ್ತೀಸಿ" ಎಂದರು. ನನಗೆ ಚಿಂತೆಯಾಯಿತು. ಸ್ಕಾಲರ್ ಷಿಪ್ ಬರದೆ ಇದ್ದರೆ ಬಟ್ಟೆ, ಪುಸ್ತಕಗಳಿಗೆ ಏನು ಮಾಡುವುದು ? ಕಮಿಟಿ ಸದಸ್ಯ ರನ್ನು ಕಂಡೆ. ಅವರು ಇಲ್ಲ ಎಂದಾಗ ಕಣ್ಣೀರು ಬಂತು. ಏನು ಮಾಡಬೇಕು ಗೊತ್ತಾಗಲಿಲ್ಲ. ಮನೆಗೆ ಬಂದು ಅತ್ತೆ. ನಮ್ಮ ತಾಯಿ ಸಮಾಧಾನ ಮಾಡಿದರು. ಆಗ ತಿಮ್ಮಯ್ಯ ಮನೆಗೆ ಬಂದ. ನಡೆದ ಕಥೆ ಹೇಳಿದೆ.

ಮಾರನೆಯ ದಿನ ಬಂದ ತಿಮ್ಮಯ್ಯ. "ಮಂತ್ರಿಗಳಾದ ಸಿದ್ದಯ್ಯನವರಿಗೆ ಅರ್ಜಿ ಬರೆ. ನಿಮ್ಮ ತಂದೆ ಜವಾನನಾಗಿದ್ದುದು. ಈಗ ಅವರು ಇಲ್ಲದಿರುವುದು, ಬಡತನ, ಈ ಎಲ್ಲಾ ವಿಷಯಗಳನ್ನು ಸೇರಿಸಿ ಬರಿ. ನಾಳೆ ಅಠಾರ ಕಛೇರಿಗೆ ಹೋಗೋಣ. ಅಲ್ಲಿ ಒಬ್ಬ ಸ್ನೇಹಿತನನ್ನು ಗೊತ್ತುಮಾಡಿದ್ದೀಸಿ" ಎಂದ.

ಅರ್ಜಿ ಬರೆದೆ. ಮಾರನೆಯ ದಿನ ತಿಮ್ಮಯ್ಯನ ಜೊತೆ ಅಠಾರ ಕಛೇರಿಗೆ ಹೋದೆ. ನಮ್ಮ ತಂದೆ ಜೊತೆಯಲ್ಲಿ ಹೋಗಿ ಮೊದಲನೆ ಕೌನ್ಸಿಲ್ ಕಛೇರಿಯಲ್ಲಿ ಆಟವಾಡಿದ್ದುದು ಜ್ಞಾಪಕಕ್ಕೆ ಬಂತು. ಅಲ್ಲಿಗೇ ತಿಮ್ಮಯ್ಯ ಕರೆದುಕೊಂಡು ಹೋದ. ಅವನ ಸ್ನೇಹಿತ ಸಿದ್ದಯ್ಯ. ಮಂತ್ರಿಗಳ ಹತ್ತಿರ ದಫೇದಾರ. "ಅರ್ಜಿ ತಂದಿದ್ದೀಯಾ" ಎಂದ. ಸಿದ್ದಯ್ಯ ಬರೆದಿದ್ದ ಅರ್ಜಿಯನ್ನು ಅವರ ಕೈಲಿಕೊಟ್ಟೆ. ಅವನಿಗೆ ಓದಲು ಬರೆಯಲು ಬಂದರೆ ತಾನೆ ! ಅದೇನು ಬರೆದಿದ್ದೀಯಾ ಓದಿ ಹೇಳು ಎಂದ. ಓದಿದೆ. ಸರಿ ನಾನು ಉಳಿದದ್ದು ಬರೆಸಿಕೊಳ್ಳುತ್ತೀನಿ ನೀನು ಹೋಗು ಎಂದ. ತಿಮ್ಮಯ್ಯ ಸುಮ್ಮನಿರಲಿಲ್ಲ. ಈಗಲೇ ಹೋಗಿ ಮಂತ್ರಿಗಳಿಗೆ ಹೇಳು ಅವರೇನು ಹೇಳ್ತಾರೆ ನೋಡೋಣ ಎಂದ. ಸರಿ ಅರ್ಜಿ ತೆಗೆದುಕೊಂಡು ಮಂತ್ರಿಗಳ ಆಪ್ತ ಕಾರ್ಯದರ್ಶಿ ಬಳಿ ಹೋದ. ಅಲ್ಲಿ ಮಾತನಾಡಿ ಸೀದಾ ಮಂತ್ರಿಗಳ ಆಫೀಸಿನ ಕೊಠಡಿ ಒಳಕ್ಕೆ ಹೋದ. ಹತ್ತು ನಿಮಿಷಗಳು ಆದ ನಂತರ ಬಂದು ನಿಮ್ಮ ಕಾಲೇಜಿಗೆ ಕಳಿಸಿ ಕೊಡುತ್ತಾರೆ ಹೋಗು ಎಂದ.

ತಿಮ್ಮಯ್ಯ ಸುಮ್ಮನಿರಲಿಲ್ಲ. ಆಗ ವಿಶ್ವವಿದ್ಯಾನಿಲಯದ ಕುಲಪತಿಗಳು ಸಿಂಗಾರುವೇಲು ಮೊದಲಿಯಾರ್. ಅವರನ್ನು ಹೇಗಾದರೂ ಕಂಡು ಸ್ಕಾಲರ್ ಷಿಪ್ ಮಾಡಿಸಿಕೊಡಬೇಕು ಎಂದು ಯೋಚಿಸಿದ. ಅವರ ಮನೆಗೆ ಹೋಗುತ್ತಿದ್ದ ಮಾಲಿ ಯನ್ನು ಕಂಡ. ಅವರ ಮನೆಗೂ ನನ್ನ ಕರೆದುಕೊಂಡು ಹೋದ. ಆತ ಹೂ ಕಟ್ಟುತ್ತಿದ್ದ ನನ್ನ ವಿಚಾರ ತಿಳಿಸಿದ. ನಮ್ಮ ತಂದೆ ಹೆಸರು ಹೇಳಿದ ತಕ್ಷಣ ಆತ "ನಮ್ಮ ಹೊನ್ನಪ್ಪಗೌಡರ ಮಗ" ಎಂದು ನಿಟ್ಟುಸಿರು ಬಿಟ್ಟ. ಎಂತಹ ಉಪಕಾರಿ. ಎಷ್ಟು ಜನಕ್ಕೆ ಅನ್ನ ಕೊಟ್ಟಿದ್ದಾನೆ. ನನಗೂ ಅನ್ನ ಕೊಟ್ಟವರು ಅವರೇ. ನಾನು ಖಂಡಿತ ಉಪಕುಲಪತಿಗಳಿಗೆ ಹೇಳಿ ಸ್ಕಾಲರ್ ಷಿಪ್ ಮಾಡಿಸಿ ಕೊಡ್ತೀನಿ. ಅವರ ಋಣ ತೀರಿಸೋದು ಬೇಡವೆ ಎಂದ. ಸರಿ ಅಲ್ಲಿಯೇ ಕುಳಿತು ಅರ್ಜಿ ಬರೆದುಕೊಟ್ಟೆ. ನಾಳೆ ಬೆಳಿಗ್ಗೆ ಸಾಹೇಬರನ್ನು ಕಾಣುತ್ತೇನೆ ಎಂದ.

ಕಾಲೇಜಿನ ನೋಟೀಸ್ ಬೋರ್ಡಿನಲ್ಲಿ ಸ್ಕಾಲರ್‌ಷಿಪ್ ಪ್ರಕಟಿಸಿದರು. ನನ್ನ ಹೆಸರು ಇರಲಿಲ್ಲ. ನನ್ನ ಹೆಸರು ಪೂರ್ಣ ಶುಲ್ಕ ಮಾಫಿ ಅನ್ನುವುದರಲ್ಲಿತ್ತು. ಆ ದಿನವೇ ತಿಮ್ಮಯ್ಯನನ್ನು ಕಂಡು ವಿಷಯ ಹೇಳಿದೆ. ತಕ್ಷಣ ಸಿದ್ದಯ್ಯನಿಗೂ, ಮಾಲಿ ರಾಮಯ್ಯನಿಗೂ ವಿಷಯ ತಿಳಿಸಿದೆವು. ಮಂತ್ರಿಗಳು ಉಪಕುಲಪತಿಗಳಿಗೆ ನನ್ನ ಅರ್ಜಿಯನ್ನು ಕಳಿಸಿಕೊಟ್ಟರು. ಮಾಲಿ ರಾಮಯ್ಯ ಕುಲಪತಿಗಳನ್ನು ಕಂಡಾಗ "ಏನೋ ರಾಮಯ್ಯ ? ಮಂತ್ರಿಗಳಿಂದ ಶಿಫಾರಸ್ಸು ಬಂದಿದೆಯಲ್ಲಾ ಆ ಹುಡುಗನಿಗೇ ಕೊಡಿ ಎಂದು" ಎಂದು ಕೇಳಿದ್ದರಂತೆ.

ಮೂರು ದಿವಸದ ನಂತರ ಕಾಲೇಜು ನೋಟೀಸ್ ಬೋರ್ಡಿನಲ್ಲಿ ನನ್ನ ಹೆಸರು ಸ್ಕಾಲರ್‌ಷಿಪ್ ಬಂದಿರುವವರ ಪಟ್ಟಿಯಲ್ಲಿ ಇತ್ತು. ಸ್ನೇಹಿತರು ಬಂದು ಹೇಳಿದರು. ಹೋಗಿ ನೋಡಿದೆ ಸಂತೋಷವಾಯಿತು. ಸಂಜೆ ತಿಮ್ಮಯ್ಯನಿಗೆ ಹೇಳಿದೆ. "ಚೆನ್ನಾಗಿ ಓದಿ ಇಂಜಿನಿಯರ್ ಆಗಬೇಕು ನಿಮ್ಮಪ್ಪನ ಹೆಸರು ಉಳಿಸಬೇಕು" ಎಂದ ತಿಮ್ಮಯ್ಯ ನನ್ನು ಮರೆಯಲಾರೆ.

## ರಜಾ ದಿನಗಳಲ್ಲಿ ಕೆಲಸ ಮಾಡಿದ್ದು

ಇಂಟರ್ ಮೀಡಿಯಟ್ ಕಾಲೇಜು ಆದಮೇಲೆ ಬೇಸಿಗೆ ರಜೆಯನ್ನು ಏನು ಮಾಡುವುದು ಎಂದು ಯೋಚಿಸಿದೆ. ನನ್ನ ಸ್ನೇಹಿತ ರಾಮು ವ್ಯವಸಾಯ ಇಲಾಖೆ ಯಲ್ಲಿ 25ರೂಗೆ ಕ್ಲಾರ್ಕ್ ಕೆಲಸ ಮಾಡುತ್ತಿದ್ದ. ನನಗೂ ಆ ತರಹ ಕೆಲಸ ಸಿಕ್ಕಿದರೆ 25ರೂ ಬರುತ್ತದಲ್ಲ. ಮೂರು ತಿಂಗಳಿಗೆ 75ರೂ ಬರುತ್ತದಲ್ಲ. ಎಲ್ಲಾ ಕಡೆಗೂ ಅರ್ಜಿಹಾಕಿದೆ. ಡಿ. ಪಿ. ಐ. ಆಫೀಸಿನಲ್ಲಿ ಕೆಲಸ ಖಾಲಿ ಇದೆ ಎಂದು ತಿಳಿಯಿತು. ಒಂದು ದಿನ ಹೋಗಿ ಮ್ಯಾನೇಜರವರಿಗೆ ಅರ್ಜಿಕೊಟ್ಟೆ. ಮರುದಿನ ಬರಲು ಹೇಳಿದರು.

ಮಾರನೆಯ ದಿನ ಆಫೀಸಿಗೆ ಹೋದೆ. ಕೆಲಸಕ್ಕೆ ಸೇರಿಕೊಂಡಿದ್ದೇನೆ ಎಂದು ಬರೆದುಕೊಡು ಎಂದರು. ಅನಂತರ ಕಾಗದಗಳಿಗೆ ವಿಳಾಸಬರೆದು ಟಪಾಲಿಗೆ ಕಳುಹಿಸುವ ಕೆಲಸ ಹೇಳಿದರು. ಮುಖ್ಯಾಧಿಕಾರಿಗಳು ರಾಮಸ್ವಾಮಿ ಎಂದು. ಅವರ ಹತ್ತಿರ ಹೋಗಿ ತಿಳಿಸಿದ್ದೆ. ವಿಳಾಸ ಬರೆಯುವ ಟಪಾಲು ಕಳಿಸುವ ಕೆಲಸ ಮಾಡು ಎಂದರು.

ಹೊಸದಾಗಿ ಕೆಲಸಕ್ಕೆ ಸೇರಿದ್ದರಿಂದ ಸ್ವಲ್ಪವೂ ಕಾಲ ವ್ಯಯಮಾಡದೆ, 10-30 ರಿಂದ 5ರ ವರೆಗೆ ಕೆಲಸ ಮಾಡುತ್ತಿದ್ದ. ಮುಖ್ಯಾಧಿಕಾರಿ ರಾಮಸ್ವಾಮಿ ನನ್ನ ಕೆಲಸವನ್ನು ಮೆಚ್ಚಿಕೊಂಡರು. ಯಾರು ರಜೆ ಇದ್ದರೂ ಆ ಕೆಲಸ ನನ್ನದು. ವಿಲೇವಾರಿ ವಿಭಾಗ, ಎಲ್ಲಾ ವಿಭಾಗದಲ್ಲೂ ಕೆಲಸ ಮಾಡಿದೆ. ಎಲ್ಲರೂ ಸುಲಭವಾಗಿ ತಮ್ಮ ಕೆಲಸಬಿಟ್ಟು ಏನಾದರೂ ಕೆಲಸ ಕೊಡುತ್ತಿದ್ದರು. ಬಿಡುವು ಇಲ್ಲದೆ ಕೆಲಸ ಮಾಡುತ್ತಿದ್ದೆ.

ಸೀನಿಯರ್ ಇಂಟರ್‌ನಲ್ಲಿ ಸಂಸ್ಕೃತದಲ್ಲಿ ತೇರ್ಗಡೆಯಾಗಲಿಲ್ಲ. ಒಂದು ವರ್ಷ ನಷ್ಟವಾಯಿತು. ಹೇಗಾದರೂ ಮಾಡಿ ಪರೀಕ್ಷೆ ಪಾಸುಮಾಡಬೇಕು. ಅದುವರೆಗೆ ಕೆಲಸದಲ್ಲಿರಬೇಕು ಎಂದು ಯೋಚಿಸಿದೆ. ಆರು ತಿಂಗಳಾದ ಮೇಲೆ ಪರೀಕ್ಷೆ ಪಾಸು ಮಾಡಿದೆ. ಅದುವರೆಗೆ ಡಿ. ಪಿ. ಐ. ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದೆ. ಒಂದು ಸಾರಿ ಒಬ್ಬ ಪದವೀಧರನ ಕೆಲಸ ಖಾಲಿ ಇತ್ತು. ಆ ಕೆಲಸ ನಾನು ಮಾಡುತ್ತಿದ್ದೆ. ನಮ್ಮ ಮ್ಯಾನೇಜರ್ ಮೇಲಧಿಕಾರಿಗಳಿಗೆ ಬರೆದು 25ರೂ ಬದಲು ತಿಂಗಳಿಗೆ 40ರೂ. ಪಧವೀಧರನ ವೇತನಕೊಟ್ಟರು. ನನಗೆ ಅಂದು 4 ಸಾವಿರ ರೂ. ಕೊಟ್ಟಷ್ಟು ಸಂತೋಷವಾಯಿತು. ಈ ಕಛೇರಿಯಲ್ಲಿ ಕೆಲಸ ಮಾಡುತ್ತಾ ಅನೇಕ ವಿಷಯ ತಿಳಿದೆ.

ಒಂದು ಸಾರಿ ರಾಮಣ್ಣ ಎಂಬ ಗುಮಾಸ್ತರು ರಜಾ ಹೋದರು. ಅವರ ಕೆಲಸ ನಾನು ಮಾಡಿದೆ.

ಅಂಕಿ ಅಂಶದ (Statistics) ಕೆಲಸವನ್ನು ಕೆಲವು ತಿಂಗಳು ಮಾಡಿದೆ. ಆಫೀಸಿನಲ್ಲಿ ಗುಮಾಸ್ತರ ಕೆಲಸದ ವಿಚಾರದಲ್ಲಿ ಅಂಕಿ ಅಂಶ ಸಂಗ್ರಹಿಸಿ ಡೈರೆಕ್ಟರ್ ರವರಿಗೆ ಕಳಿಸಿಕೊಡುತ್ತಿದ್ದೆ. ಅವರು ತಮ್ಮ ಒಪ್ಪಿಗೆ ಸೂಚಿಸಿ ಸಂತೋಷ ವ್ಯಕ್ತ ಪಡಿಸಿದರು.

ಒಂದು ಸಾರಿ ಕಛೇರಿಯ ತನಿಖೆಗೆ ಒಬ್ಬರು ಬರುವವರಿದ್ದರು. ಹಿಂದಿನ ದಿನ ಮುಖ್ಯಾಧಿಕಾರಿ ರಾಮಸ್ವಾಮಿಗಳು ಹೇಳಿದರು "ನಾಳೆ ಗಾಂಧಿ ಟೋಪಿ ಹಾಕಿ ಬರ ಬೇಡಿ. ಡೈರೆಕ್ಟರ್ ಸಾಹೇಬರು ಬರುತ್ತಾರೆ. ಅವರಿಗೆ ಬಹಳ ಸಿಟ್ಟು. ಮನೆಗೆ ಕಳಿಸಿಬಿಡುತ್ತಾರೆ" ಎಂದು ಹೆದರಿಸಿದರು. "ಕೆಲಸ ಮುಖ್ಯವೋ ಬಟ್ಟೆ ಮುಖ್ಯವೋ ನಾನು ಬರುವುದು ಹೀಗೆ" ಎಂದೆ.

ಮಾರನೆಯ ದಿನ ಡೈರೆಕ್ಟರ್ ಸಾಹೇಬರು ಬಂದರು. ಎಲ್ಲಾ ಕೆಲಸದ ವಿಚಾರ ಪರೀಕ್ಷಿಸಿದರು. ಅವರ ಆಪ್ತಕಾರ್ಯದರ್ಶಿಗಳಿಗೆ "ಇವರಿಗೆ ಕೆಲಸ ಚೆನ್ನಾಗಿ ಗೊತ್ತಿದೆ ಇವರನ್ನು ಖಾಯಂ ಮಾಡಬೇಕು" ಎಂದರು. ಅವರ ಸಹಾಯಕರಾಗಿದ್ದ ಪಿಳ್ಳೆ ಯವರು "ತಾತ್ಕಾಲಿಕ ರಜಾ ಕಾಲದ ಕೆಲಸದ ಮೇಲೆ ಇದ್ದಾರೆ. ಅವರು ಇಂಟರ್ ಮೀಡಿಯಟ್ ಪಾಸ್ ಮಾಡಿದ್ದಾರೆ. ನಾಳೆ ವರ್ಷ ಬಿ. ಇ. ಕಾಲೇಜಿಗೆ ಸೇರ ಲಿದ್ದಾರೆ. ಆದ್ದರಿಂದ ತೆಗೆದುಕೊಳ್ಳುವುದು ಬೇಡ'' ಎಂದರು.

### ಅಂಟಿಕೊಂಡಿದ್ದೆ ಅಂಟಪ್ಪನಿಗೆ

ಕಾಲೇಜಿನ ವಿದ್ಯಾಭ್ಯಾಸದಲ್ಲಿ ನನಗೆ ಅಂಟಿಕೊಂಡಿದ್ದವರು ಎಂದರೆ ಅಂಟಪ್ಪ. ಇದೇನು ಈ ಹೆಸರು ಎಂದು ಕೇಳಬಹುದು. ನಿಜ ನಾಮಧೇಯ ಬಿ. ವೆಂಕಟಾ ಚಾರ್. ಇದರ ವಿವರ ಈ ಹಿಂದೆ ಬಂದಿದೆ. ವೆಂಕಟೇಶ್ವರ ಸ್ಟೋರ್ಸ್ ಮಾಲೀಕ. ಪುಸ್ತಕ ಹಾಗೂ ಪೇಪರಿನ ಅಂಗಡಿ. ಹೇಗೋ ಸ್ನೇಹ ಬೆಳೆಯಿತು. ರಾಜಕೀಯ

ಸ್ವಾತಂತ್ರ್ಯ ಹೋರಾಟದಲ್ಲಿ ಈತ ಖಾದಿಧಾರಿ, ಬ್ರಹ್ಮಚಾರಿ. ವಿದ್ಯಾರ್ಥಿಯಾಗಿದ್ದರೂ ಅಂಗಡಿಯಲ್ಲಿ ವ್ಯಾಪಾರ ಮಾಡುತ್ತಿದ್ದ. ಎಲ್ಲಿಗಾದರೂ ಹೋದರೆ ಅಂಗಡಿ ನೋಡಿಕೊಳ್ಳಲು ನನಗೆ ಹೇಳುತ್ತಿದ್ದ. ಈ ಅಂಗಡಿಯಲ್ಲಿ ಹೆಚ್ಚು ಪತ್ರಿಕೆಗಳು ಖರ್ಚಾಗುತ್ತಿದ್ದವು. ಅವು ತಮಿಳು ಪತ್ರಿಕೆಗಳು "ಆನಂದ ವಿಕಟನ್" "ಕಲ್ಕಿ". ಶುಕ್ರವಾರ ಬಂದರೆ ಭಾನುವಾರ ಇರುತ್ತಿರಲಿಲ್ಲ. ಅದರಲ್ಲೂ ದೀಪಾವಳಿ ವಿಶೇಷ ಸಂಚಿಕೆ ಬಂದರೆ ಮುಂಗಡವಾಗಿ ದುಡ್ಡು ಕೊಡುವವರಿಗೆ ಮಾತ್ರ ದೊರೆಯುತ್ತಿತ್ತು. ಆ ಪುಸ್ತಕ ಇಲ್ಲದೆ ಗಂಡಸರು ಮನೆಗೆ ಹೋಗುವಂತಿರಲಿಲ್ಲ. ಕಾರಣ ಮನೆಯಲ್ಲಿ ಹೆಂಗಸರಿಂದ ಬೈಸಿಕೊಳ್ಳಬೇಕಾಗುತ್ತಿತ್ತು.

ಈ ಅಂಗಡಿಯಲ್ಲಿ ಸುಪ್ರಸಿದ್ಧ ಚಿತ್ರಕಲಾವಿದ ವೆಂಕಟಪ್ಪನವರು, ಜಿಲ್ಲಾಧಿಕಾರಿಯಾಗಿದ್ದ ತಿಪ್ಪೇರುದ್ರಯ್ಯ, ಇಂಜಿನಿಯರಿಂಗ್ ಕಾಲೇಜ್ ಪ್ರಿನ್ಸಿಪಾಲ್ ರಾಜಾರಾವ್ ಎಲ್ಲರೂ ಸೇರುತ್ತಿದ್ದರು. ಅಂಗಡಿಯಲ್ಲಿ ಕುಳಿತರೆ ತಿಂಡಿ, ಕಾಫಿಗೆ ಎಲ್ಲೂ ಹೋಗಬೇಕಾಗಿರಲಿಲ್ಲ. ಇಂಜನಿಯರಿಂಗ್ ಕಾಲೇಜು ಸೇರಿದ ಮೇಲೆ ಒಂದು ತಾಂತ್ರಿಕ ಪುಸ್ತಕ ಭಂಡಾರ ಪ್ರಾರಂಭಿಸಿ ಸುಮಾರು ನೂರುಜನ ವಿದ್ಯಾರ್ಥಿಗಳನ್ನು ಸೇರಿಸಿದೆ. ತಿಂಗಳಿಗೆ ಒಂದು ರೂಪಾಯಿ. ನನಗೆ ಮಾತ್ರ ಉಚಿತ.

ಇಂಜಿನಿಯರಿಂಗ್ ಕಾಲೇಜಿನಲ್ಲಿ ಓದುತ್ತಿರಬೇಕಾದರೆ, ಹದಿನೆಂಟು ರೂ ಫೀಜು ಕೊಡಬೇಕಾಗಿತ್ತು. ಆದರೆ, ನನಗೆ ಇಷ್ಟು ಹಣ ಎಲ್ಲಿಂದ ಬರಬೇಕು? ಬಾಡಿಗೆ ಬರುತ್ತಿದ್ದುದು 24ರೂ. ಅಷ್ಟರಲ್ಲೇ ಜೀವನ. ಇಂತಹ ಪರಿಸ್ಥಿತಿಯಲ್ಲಿ ಅನೇಕ ಸ್ನೇಹಿತರು ಸಹಾಯ ಮಾಡುತ್ತಿದ್ದರು. ಅವರಲ್ಲಿ ಮುಖ್ಯವಾಗಿ ಈ ಅಂಟಪ್ಪ ಹದಿನೆಂಟು ರೂ. ಫೀಜು ಪೂರ್ಣ ಅವನೇ ಕೊಡುತ್ತಿದ್ದ. ಅಷ್ಟು ಭಾರ ನನಗೆ ಕಡಿಮೆ ಆಗುತ್ತಿತ್ತು. ಸ್ಕಾಲರ್‌ಷಿಪ್ ಕೊಡುವಾಗ ಫೀಜು ವಾಪಸ್ಸು ಕೊಡುತ್ತಿದ್ದರು. ಆಗ ಆತನಿಗೆ ತಂದುಕೊಡುತ್ತಿದ್ದೆ. ಅವರ ಮನೆಯಲ್ಲಿ ಏನು ವಿಶೇಷವಾದರೂ ಸರಿ ನಾನು ಹಾಜರಿ. ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಸೇರಿದಾಗ ಮೆಕ್ಯಾನಿಕಲ್ ವಿಭಾಗವನ್ನು ತೆಗೆದುಕೊಂಡೆ. ಆಗಲೆ ನಿರ್ಧಾರವಾಗಿತ್ತು ಮುಂದೆ ಸೇರುವುದು ಕಾರ್ಖಾನೆಯನ್ನು ಎಂದು. ಪ್ರಿನ್ಸಿಪಾಲ್ ಶ್ರೀ ಇ. ಕೆ. ರಾಮಸ್ವಾಮಿ ಅವರು ಮೆಕ್ಯಾನಿಕಲ್ ಇಂಜಿನಿಯರಿಂಗಿನ ಪಾಧ್ಯಾಪಕರು ಆಗಿದ್ದರು. ಶ್ರೀ ಸಿ. ಗೋಪಾಲಕೃಷ್ಣ, ಶ್ರೀ ಜೆ. ಪಿ. ದಾಸ್, ಶ್ರೀ ಬಿ. ಆರ್. ನಾರಾಯಣಯ್ಯಂಗಾರ್ ಶ್ರೀ ಜೆ. ಎಂ. ಪಾಲ್‌ರಾಜ್ ಇವರೆಲ್ಲ ನನ್ನ ಉಪಾಧ್ಯಾಯರಾಗಿದ್ದರು.

**ಪ್ರವಾಸ ಶಿಕ್ಷಣ–ಹಣವಿಲ್ಲ**

ನಾನು ಮೂರನೆ ವರ್ಷ ಬಿ. ಇ. ಗೆ ಬಂದಾಗ ಆ ವರುಷ ಶೈಕ್ಷಣಿಕ ನಿಯಮದಂತೆ ದಕ್ಷಿಣಭಾರತ ಪ್ರವಾಸ ಕೈಗೊಳ್ಳಬೇಕಾಗಿ ಬಂತು. ತಾಂತ್ರಿಕ ಜ್ಞಾನ ಬೆಳೆಸಿಕೊಳ್ಳಲು ಸಕಾಲ. ನಾಲ್ಕನೆ ವರುಷ ಉತ್ತರ ಭಾರತ ಪ್ರವಾಸ. ಈ ಎರಡೂ

ಪ್ರವಾಸಗಳಿಗೆ ಹೋಗಲು ಹಣಕಟ್ಟಲು ದುಡ್ಡಿಲ್ಲ. ಪ್ರವಾಸ ಹೋಗಲು ಆಗುವು ದಿಲ್ಲ ಎಂದೆ. ಮೈಸೂರಿನ ಶ್ರೀ ಸುಬ್ಬರಾಮು ನೆರವಿಗೆ ಬಂದರು. "ಮುಂದೆ ಹಣ ಸಿಕ್ಕಬಹುದು. ಆದರೆ ಈ ಅವಕಾಶ ಮುಂದೆ ಸಿಕ್ಕುವುದೆ ? ಹೋಗಿಬಾ" ಎಂದು ಧನ ಸಹಾಯ ಮಾಡಿದರು. ಪ್ರವಾಸ ಮಾಡಿದ್ದಾಯಿತು. ಹಿಂದೂಸ್ಥಾನ ವಿಮಾನ ಕಾರ್ಖಾನೆಯಲ್ಲಿ ಕೆಲಸಕ್ಕೆ ಸೇರಿದಮೇಲೆ ಕಂತಿನಲ್ಲಿ ಅವರ ಹಣ ವಾಪಸ್ಸು ಮಾಡಿದೆ. ಇಂಜಿನಿಯರಿಂಗ್ ಶಿಕ್ಷಣ ದುಬಾರಿ. ಈಗ ಇದು ಇನ್ನೂ ದುಬಾರಿಯಾಗಿದೆ. ಕಾಲೇಜ್ ಸೇರಲು ಡೊನೇಶನ್ ಹಣ ಕಟ್ಟಬೇಕು. ಕಾಲೇಜುಗಳಲ್ಲಿ ಸೀಟು ಸಿಕ್ಕು ವುದೂ ಕಷ್ಟವೇ. ನಾವು ಓದಿದ್ದು ನಲವತ್ತು, ಐವತ್ತರಲ್ಲಿ. ಆಗಲೇ ಅಷ್ಟು ಕಷ್ಟ ವಿತ್ತು. ನಮ್ಮ ತಾಯಿಯವರೇ ಇರುವವನೊಬ್ಬ ಗಂಡುಮಗ ಚೆನ್ನಾಗಿ ಓದಲಿ" ಎಂದು ನನ್ನನ್ನು ಬಿ. ಇ. ಓದಿಸಿದರು.

## ಹಳ್ಳಿಯ ದಿನಗಳು

ನಾ ಕಂಡ ನನ್ನ ಸುತ್ತಲ ಜಗತ್ತನ್ನು ಹೇಳುವಾಗ ನನ್ನ ಹಳ್ಳಿಯಲ್ಲಿ ಕಳೆದ ಕೆಲವು ಮರೆಯಲಾಗದ ದಿನಗಳನ್ನು ಕುರಿತು ಹೇಳದಿದ್ದರೆ ತೃಪ್ತಿಯಾಗುವುದಿಲ್ಲ. ಅದು ಹೇಳಬೇಕಿದ್ದರೆ ಈ ಕಾಲದ ಏರುಪೇರಿನ ಜೀವನವೇ ಕಾರಣ. ಹೇಳಿದಷ್ಟೂ ಇನ್ನೂ ಹೇಳುವುದಿರುತ್ತದೆ. ಆ ಸಂಸ್ಕೃತಿ ಪರಿಸರ ಇವೆಲ್ಲ ತಿಳಿಯುವಂತದೇ. ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಹಾಗೂ ಅದಕ್ಕೆ ಮೊದಲೇ ಆಗಲಿ ಬೇಸಿಗೆ ರಜೆಯಲ್ಲಿ ನನ್ನ ತಾಯಿ ಹಳ್ಳಿಗೆ ಕಳುಹಿಸುತ್ತಿದ್ದರು. 1939-40ರ ಕಾಲ. ಎರಡನೆ ಮಹಾ ಯುದ್ಧ ಆರಂಭವಾಗಿತ್ತು. ಬಾಂಬ್ ಹಾಕುತ್ತಾರೆ ಎನ್ನುವ ಸುದ್ದಿ ಜನರನ್ನು ಕಂಗೆಡಿಸಿತ್ತು. ಅನೇಕರು ಬೆಂಗಳೂರು ಬಿಟ್ಟು ಹಳ್ಳಿ ಸೇರಿದ್ದರು. ಕೆಲವರಂತೂ ಬೆಂಗಳೂರಿನಲ್ಲಿದ್ದ ಮನೆ ಮಠ ಮಾರಿಕೊಂಡು ಊರು ಸೇರಿದ್ದೂ ಉಂಟು. ನಾನು ಅಪಮಗೆರೆಗೆ ಹೋದೆ. ಹೊಲ ಉಳುವುದು, ಗಾಡಿ ಹೊಡೆಯುವುದು ಕಲಿತೆ. ಬೆಳಗಾಗುತ್ತಿದ್ದಂತೆ ಎದ್ದು ಗಾಡಿ ಕಟ್ಟಿಕೊಂಡು ಕೆರೆಯಿಂದ ಗೋಡುಮಣ್ಣನ್ನು ತಂದು ಹೊಲಕ್ಕೆ ಹಾಕುತ್ತಿದ್ದೆ. ಆಗ ನನ್ನೊಡನಿದ್ದವನು ನನ್ನ ಸೋದರ ಮಾವನ ಮಗ ತಿರುಮಲಯ್ಯ. ಅನಂತರ ಹೊಳೆಗೆ ಹೋಗಿ ಸ್ನಾನಮಾಡಿ ಬರುತ್ತಿದ್ದೆ. ಅಲ್ಲಿಂದ ಬಂದ ತಕ್ಷಣ ಬಿಸಿ ಬಿಸಿ ರಾಗಿರೊಟ್ಟಿ. ಹುಚ್ಚೆಳ್ಳಿನ ಚಟ್ನಿಪುಡಿ, ಬೆಲ್ಲ, ಮೊಸರು ಕೊಡುತ್ತಿದ್ದರು. ನಾನು ಬೆಂಗಳೂರಿನವನು ಎಂದು ಕಾಫಿ ಕೊಡುತ್ತಿದ್ದರು. ಹನ್ನೆರಡು ಗಂಟೆಮೇಲೆ ಊಟ. ನಾನು ರೊಟ್ಟಿ ತಿಂದು ಹೊಲ ಉಳಲು ಹೋಗು ತ್ತಿದ್ದೆ. ಅಲ್ಲಿ ಕೆಲಸ ಮಾಡುವವರಿಗೆ ರೊಟ್ಟಿ, ಮಿಾನು, ಮಜ್ಜಿಗೆ ಹೊತ್ತುಕೊಂಡು ಹೋಗುತ್ತಿದ್ದೆ. ಸಂಜೆ ಇನ್ನು ಬೆಳಕು ಇದ್ದಹಾಗೆ ಎಲ್ಲರೂ ಮನೆಗೆ ಬರುತ್ತಿದ್ದರು ದನಕರುಗಳನ್ನು ಕಟ್ಟಿ ಹುಲ್ಲು ಸೊಪ್ಪು ಹಾಕಿ ಊಟಮಾಡಿ ಮಲಗುತ್ತಿದ್ದರು. ಬೆಂಗಳೂರಿನಲ್ಲಿ ಏನು ನಡೆಯುತ್ತಿರುತ್ತಿತ್ತು ಎಂಬುದು ತಿಳಿಯಲು ಪತ್ರಿಕೆಗಳು ಸಿಕ್ಕು

ತ್ತಿರಲಿಲ್ಲ ಅವು ತಪ್ಪಿಯೂ ಬರುವಂತಿಲ್ಲ. ಸಂತೆಗೆ ಹೋಗಿದ್ದವರು, ಬೆಂಗಳೂರಿನಿಂದ ಬಸ್ಸಿನಲ್ಲಿ ಬರುತ್ತಿದ್ದವರು ಏನಾದರೂ ಗಾಳಿ ಸಮಾಚಾರ ಕೊಟ್ಟರೆ ಉಂಟು. ಇಲ್ಲ ದಿದ್ದರೆ ಇಲ್ಲ.

ಆ ವರ್ಷ ನನ್ನ ದೊಡ್ಡಪ್ಪನ ಮಗನ ಮದುವೆ ನಡೆಯಿತು. ಹಳ್ಳಿಗಳಲ್ಲಿ ನಡೆಯುತ್ತಿದ್ದ ಮದುವೆ ವೈಭವ ಹೇಳತೀರದು. ಆಗೆಲ್ಲ ಮದುವೆ ಎಂದರೆ ಮೂರು ನಾಲ್ಕು ದಿನಗಳ ಸಮಾರಂಭ. ಗಂಡು ಎಲ್ಲಿಯೂ ಹೊರಗೆ ಹೋಗುವಂತಿಲ್ಲ. ಅನೇಕ ಶಾಸ್ತ್ರಗಳು. ಮೈಗೆಲ್ಲ ಅರಿಸಿನ ಹಚ್ಚಿ ಸ್ನಾನ ಮಾಡಿಸುತ್ತಿದ್ದರು. ಮದುವೆಯಾದ ಮೇಲೆ ಎಂಟು ದಿವಸ ಹಸಿಮೈ ಎಂದು ಗಂಡನ್ನು ಹೊರಗೆ ಕಳುಹಿಸುತ್ತಿರಲಿಲ್ಲ. ಮದುವೆ ಹಿಂದಿನ ದಿನ ಚಪ್ಪರ. ಆ ದಿನ ಹೆಣ್ಣನ್ನು ಬೇರೆ ಊರಿನಿಂದ ಕರೆದುಕೊಂಡು ಬಂದು ಆ ಊರಿನ ಬೇರೊಂದು ಮನೆಯಲ್ಲಿ ಇರಿಸುತ್ತಿದ್ದರು. ಹೆಣ್ಣನ್ನು ಕರೆದು ಕೊಂಡು ಬಂದವರಿಗೆ ಎದುರುಗೊಂಡು ಬೆಲ್ಲದ ನೀರು ಕೊಟ್ಟು ಹಣೆಗೆ ವಿಭೂತಿ ಹಚ್ಚಿ ಎಲೆ ಅಡಿಕೆ ಕೊಟ್ಟು ಊರೊಳಗೆ ಕರೆದುಕೊಂಡು ಬರುತ್ತಿದ್ದರು. ಕತ್ತಲಾದ ಮೇಲೆ ಸೋಬಾನದ ಹಾಡುಗಳನ್ನು ಮುತ್ತೈದೆಯರು ಹಾಡುತ್ತಿದ್ದರು. ಸೌದೆಯಿಂದ ಮೊದಲುಗೊಂಡು ಅಡಿಗೆ ಸಾಮಾನುಗಳನ್ನು ಸಿದ್ಧಪಡಿಸುವುದು ಊರಿಗೆ ಸೇರಿದ್ದು. ಊರಿನ ಯಜಮಾನ ವಯಸ್ಸಾದವನು. ಮದುವೆಗೂ ಅವನೇ ಯಜಮಾನ. ಆದಿನ ತಲೆಗೆ ಪೇಟಕಟ್ಟಿ ದುಪ್ಪಟಿ ಹೊದ್ದು ಕೈಯಲ್ಲಿ ಕೋಲು ಹಿಡಿದು ಎಲ್ಲಾ ಕಡೇ ಅವನದೇ ಓಡಾಟ.

ಚಪ್ಪರದ ದಿನ ಸಂಜೆ ಕತ್ತಲಾಗುವುದರಲ್ಲಿ ನೆಂಟರೆಲ್ಲ ಸೇರುತ್ತಿದ್ದರು. ಮದುವೆ ಮನೆ ಊಟ ಎಂದರೆ ಆಗಲೇ. ಅಡಿಗೆ ಮಾಡುವುದು ಬಡಿಸುವುದು ಊರಿನವರಿಗೆ ಸೇರಿದ್ದು. ಮನೆಗೊಬ್ಬ ಆಳು ಬರುತ್ತಿದ್ದ. ವಿಶೇಷ ಅಂದರೆ ಪಾಯಸ. ಹಿಟ್ಟು, ಅವರೇಕಾಳು ಹುಳಿ. ಅನ್ನ ಇದ್ದರೆ ಉಂಟು ಇಲ್ಲದಿದ್ದರೆ ಇಲ್ಲ. ಬಂದ ನೆಂಟರಿಗೆ ಮೊದಲು ಊಟ. ಕೊನೆಯಲ್ಲಿ ಊರಿನವರಿಗೆ.

ಬಾವಿಗೋ ಕೆರೆಗೋ ಹೋಗಿ ಗಂಗೆ ತಂದು ಪೂಜೆಗೆ ಇಡುತ್ತಾರೆ. ಅದೇ ಮನೆ ದೇವತೆ. ವಾದ್ಯ, ತಮಟೆ. ಸ್ವಲ್ಪ ದೊಡ್ಡ ಮನುಷ್ಯರಾದರೆ ಓಲಗದವರನ್ನೇ ಕರೆಸುತ್ತಿದ್ದರು. ಅಗಸರವನು ಪಂಜು ಹಿಡಿಯುತ್ತಿದ್ದ ಶಾಸ್ತ್ರಗಳಿಗೆ ಮಡಿಬಟ್ಟೆ ಕೊಡುತ್ತಿದ್ದ. ಅವನಿಗೆ ಅದಕ್ಕೆ ದುಡ್ಡಿಲ್ಲ. ಮದುವೆಯಲ್ಲಿ ಊಟ.

ಊಟಕ್ಕೆ ಮೊದಲು, ನಂತರ ರಾತ್ರಿ ಶಾಸ್ತ್ರಗಳು. ತಲೆ ಮಾರಿನಿಂದ ನಡೆದು ಬಂದದ್ದು. ವಿಶೇಷ ತಿಂಡಿ ಎಂದರೆ ಕಜ್ಜಾಯ. ಮದುವೆ ದಿನ ಬೆಳಿಗ್ಗೆ ಪುರೋಹಿತ ಬಂದರೆ ತಾಳಿ ಕಟ್ಟಿಸುತ್ತಿದ್ದ. ಇಲ್ಲದಿದ್ದರೆ ಊರಿನ ಯಜಮಾನನೇ ಮದುವೆ ಮಾಡಿಸುತ್ತಿದ್ದ. ಸಾಧಾರಣ ಏಳುಗಂಟೆಗೆ ಧಾರೆ. ಆಮೇಲೆ ಉಳಿದ ಶಾಸ್ತ್ರಗಳು.

ಕತ್ತಿ ಹಿಡಿದುಕೊಂಡ ಗಂಡನ್ನು ಕುದುರೆ ಮೇಲೆ ಕೂರಿಸಿ ದೇವಸ್ಥಾನದಿಂದ ಮನೆಯವರೆಗೂ ಮೆರವಣಿಗೆ ಮಾಡಿಸುತ್ತಿದ್ದರು. ಆದಿನ ಅವನೇ ದೊರೆ. ಧಾರೆ

ಆದಮೇಲೆ ಎಲ್ಲರೂ ತೆರಳುತ್ತಿದ್ದರು. ಸಾಧಾರಣವಾಗಿ ಮದುವೆ ಆಗುತ್ತಿದ್ದುದು ಬೇಸಿಗೆಯಲ್ಲಿ. ರೈತ ದವಸ ಧಾನ್ಯವನ್ನೆಲ್ಲ ಮನೆಗೆ ತಂದಿಟ್ಟಿರುವ ಕಾಲ. ಆಗಲೇ ಬಿಡುವು. ಮೂರು ದಿನಗಳಾದಮೇಲೆ ಗಂಡು ಹೆಣ್ಣಿನ ಮನೆಯಲ್ಲಿ. ಅಲ್ಲಿ ಅಳಿಯನಿಗೆ ಉಪಚಾರ. ಐದಾರು ದಿನವಾದ ಬಳಿಕ ವಾಪಸ್ಸು ಕಳುಹಿಸುತ್ತಿದ್ದರು.

## ಆಸ್ತಿಗಾಗಿ ಕಲಹ

ನಾನು ಹಳ್ಳಿಗೆ ಹೋಗಿದ್ದ ವರ್ಷ ಅಕ್ಕಿಯನ್ನು ಬೆಂಗಳೂರಿಗೆ ತರಬೇಕಾಗಿತ್ತು. ಆಗ ಪಡಿತರ ಪದ್ಧತಿ ಇತ್ತು. ಆಹಾರ ಸಾಲುತ್ತಿರಲಿಲ್ಲ. ಹಳ್ಳಿಯಿಂದ ಬತ್ತ ತೆಗೆದುಕೊಂಡು ನಾಗಮಂಗಲಕ್ಕೆ ಹೋಗುತ್ತಿದ್ದೆವು. ಅಲ್ಲಿ ಅಕ್ಕಿ ಮಾಡಿಸಿ ಬೆಂಗಳೂರಿಗೆ ಸುಮಾರು ಎಂಬತ್ತು ಮೈಲಿ ಎತ್ತಿನ ಗಾಡಿಯಲ್ಲಿ ಬರುತ್ತಿದ್ದೆವು. ಮೂರು ದಿನಗಳು ಹಿಡಿಯುತ್ತಿತ್ತು.

ಹಳ್ಳಿಯಲ್ಲಿ ನಮ್ಮ ತಂದೆಯವರ ಕುಟುಂಬದ ಹೆಸರಿನಲ್ಲಿ ಸ್ವಲ್ಪ ಜಮೀನಿತ್ತು. ಎರಡು ಎಕರೆ ಜಮೀನನ್ನು ಬಳ್ಳೇಕೆರೆ ಹತ್ತಿರ ಕೊಂಡುಕೊಂಡಿದ್ದರು. ನಮ್ಮ ತಂದೆ ಬೆಂಗಳೂರಿಗೆ ಬಂದ ಮೇಲೆ ನನ್ನ ಚಿಕ್ಕಪ್ಪನ ಮಗ ತಿಮ್ಮಯ್ಯ ಹಾಗೂ ದೊಡ್ಡಪ್ಪನ ಮಗ ಮರಿಗೌಡ ಇಬ್ಬರಿಗೂ ಸಹಾಯ ಮಾಡುತ್ತಿದ್ದರು. ಹೀಗಾಗಿ ನಮ್ಮ ತಂದೆ ತೀರಿಕೊಂಡಮೇಲೆ ಹಳ್ಳಿಯಲ್ಲಿ ಜಮೀನು ಸಾಗುವಳಿ ಮಾಡಲು ನನ್ನ ತಾಯಿ ತಿಮ್ಮಯ್ಯನಿಗೆ ಜಮೀನು ವಹಿಸಿದರು. “ವರ್ಷಕ್ಕೊಂದು ಬಾರಿ ದವಸ ಕೊಡಲಿ. ಮನೆಗೆ ದಿನಸಿ ಆಗುತ್ತೆ. ಬರೋ ಬಾಡಿಗೆಯಲ್ಲಿ ಮಗನನ್ನು ಓದಿಸಬಹುದು” ಎಂದು ಆಲೋಚನೆ ಮಾಡಿದ್ದರು ನನ್ನ ತಾಯಿ. ಹಳ್ಳಿಯಲ್ಲಿ ತಿಮ್ಮಯ್ಯ ಯಜಮಾನ. ಎತ್ತರವಾದ ಕಟ್ಟುಮಸ್ತಾದ ಆಳು, ಬಲಿಷ್ಟ. ತಿಮ್ಮಯ್ಯ ಜಮೀನಿನ ಇಳುವರಿಯ ಲಾಭವನ್ನು ತಾನೇ ಪಡೆದ. ನಮ್ಮ ತಾಯಿ ಪಾಲು ಕೇಳಿದರೆ ಜಗಳಕ್ಕೆ ಬರುತ್ತಿದ್ದ. ಕೊನೆ ಕೊನೆಗೆ ಜಗಳ ಇಬ್ಬರಲ್ಲೂ ಮನಸ್ತಾಪ ತಂದಿತು. ನಮ್ಮ ತಾಯಿ ಎಷ್ಟೋ ಹೇಳಿ ನೋಡಿದರು. ಪಂಚಾಯಿತಿ ಕೂಡಿಸಿದರು. ತಿಮ್ಮಯ್ಯ ಕೇಳಲಿಲ್ಲ. ಕೊನೆಗೆ ಗದ್ದೆಯನ್ನು ಮಾರಲು ನಿಶ್ಚಯಿಸಿದರು ನಮ್ಮ ತಾಯಿ. ಆದರೆ ತಿಮ್ಮಯ್ಯನಿಗೆ ಹೆದರಿ ಗದ್ದೆ ಕೊಂಡುಕೊಳ್ಳಲು ಯಾರೂ ಮುಂದೆ ಬರಲಿಲ್ಲ. “ಜಮೀನಿನ ವ್ಯವಹಾರ ನಮಗೆ ಬೇಡ. ಅವನೇ ನೋಡಿಕೊಳ್ಳಲಿ” ಎಂದು ನನ್ನ ತಾಯಿಗೆ ಹೇಳಿ ನೋಡಿದೆ. ಆದರೆ ಹಿರೀಕರ ಆಸ್ತಿ. ಅವರಿಗೆ ಅದು ಒಪ್ಪಲಿಲ್ಲ.

ಒಂದು ಸಾರಿ ಬೇಸಿಗೆಯಲ್ಲಿ ನಮ್ಮ ತಾಯಿಯವರು ಊರಿಗೆ ಹೋಗಿದ್ದರು. ನಮ್ಮ ಭಾವ ತಿಮ್ಮಯ್ಯ ಹಾಗೂ ಮರಿಯಣ್ಣ ಇವರುಗಳೊಡನೆ ಮಾತನಾಡಿ ಅವರೇ ಜಮೀನು ಕೊಳ್ಳುವಂತೆ ಏರ್ಪಾಡು ಮಾಡಿದರು. ಎರಡು ಎಕರೆ ಜಮೀನು ೬00ರೂಗೆ ಕೊಟ್ಟೆವು. ತಿಮ್ಮಯ್ಯ ಅರ್ಧಕೊಂಡು ಇನ್ನರ್ಧ ಮರಿಯಣ್ಣನಿಗೆ ಕೊಟ್ಟ. ಆದರೆ ಕಾಲಕ್ರಮದಲ್ಲಿ ಅವರಲ್ಲಿ ಜಗಳ ಉಂಟಾಯಿತು. ಮರಿಯಣ್ಣ ನಮ್ಮಲ್ಲಿ

ಬಂದು ಹೇಳಿಕೊಂಡ. ಕೊನೆಗೆ ನಮ್ಮ ತಾಯಿ ಜಮೀನು ಪಾಲು ಮಾಡೋಣ. ಪಂಚಾಯ್ತಿ ಸೇರಿಸಿ" ಎಂದು ಅಪ್ಪಣೆ ಕೊಡಿಸಿದರು. ಎಲ್ಲರಿಗೂ ಬೇಕಾಗಿದ್ದವರು ನನ್ನ ತಾಯಿ. ಅವರು ಹೇಳಿದ ಹಾಗೆ ಕೇಳಬೇಕಾದುದು ಧರ್ಮ. ತಿಮ್ಮಯ್ಯ ಮರಿಯಣ್ಣ ಹಾಗೂ ನನಗೂ ಸೇರಿಸಿದಂತೆ ಜಮೀನು ಪಾಲುಮಾಡಿ ಹಂಚಿದರು. ನನಗೆ ಬಂದ ಪಾಲನ್ನು ಮರಿಯಣ್ಣನಿಗೆ ಕೊಟ್ಟೆ. ಜಮೀನು ಈಗಲೂ ಅವನೇ ನೋಡಿಕೊಳ್ಳುತ್ತಿದ್ದಾನೆ. ಜಮೀನು ಇದ್ದರೇನು ? ಆದಾಯ ಇಲ್ಲ. ಕಂದಾಯ ಮಾತ್ರ ನಾನು ಕಟ್ಟುತ್ತಿದ್ದೇನೆ.

ನನ್ನ ಭಾಗಕ್ಕೆ ಬಂದ ಮನೆ ಒಡೆದು ಹೊಸ ಜಾಗ ಕೊಟ್ಟರು. ತಿಮ್ಮಯ್ಯ ಮರಿಯಣ್ಣ ಮನೆ ಕಟ್ಟಿಕೊಂಡರು. ನನ್ನ ಸೈಟು ಹಾಗೆಯೇ ಇತ್ತು. ಈ ಜಮೀನಿನಲ್ಲಿ ಆದಾಯವಿಲ್ಲದನ್ನು ನೋಡಿ ಎಲ್ಲಾ ಮಾರಿ ಬೆಂಗಳೂರಿನಲ್ಲಿ ಏನಾದರೂ ಮಾಡಬೇಕು ಎಂದು ಯೋಚಿಸಿ, ನಾಗಮಂಗಲಕ್ಕೆ ಹೋದೆ. ತಟ್ಟೇಕೆರೆ ಮಾದಪ್ಪಗೌಡರು ಹಿರಿಯರಾದ್ದರಿಂದ ಅವರಿಗೆ ವಿಚಾರ ತಿಳಿಸಿದೆ. ಅವರು "ಶ್ರೀನಿವಾಸಯ್ಯ ನೀನು ನಾಗಮಂಗಲ ತಾಲ್ಲೂಕಿನವ. ಬೆಂಗಳೂರಿಗೆ ಹೋಗಿ ವಿದ್ಯಾವಂತನಾಗಿ ಒಳ್ಳೆ ಕೆಲಸ ಮಾಡುತ್ತಾ ಇದ್ದಿ. ಹೆಸರನ್ನು ಪಡೆದಿದ್ದಿ. ಇದು ನಾಗಮಂಗಲಕ್ಕೆ ಒಂದು ಗೌರವ ಎಂದು ಇದ್ದೇವೆ. ನೀನು ನಮ್ಮ ಊರನ್ನೇ ಬಿಡಬೇಕು ಎಂದು ಇದ್ದೀಯಲ್ಲಾ. ಈ ಜಮೀನನ್ನೆಲ್ಲಾ ಮಾರಿದರೆ ಎಷ್ಟು ಬರುವುದು. ಒಂದು ತಿಂಗಳೋ, ಎರಡು ತಿಂಗಳಿನ ಸಂಬಳ ಆದೀತೆ. ಸುಮ್ಮನೆ ವಾಪಸ್ಸು ಹೋಗು. ಜಮೀನು ಮಾಡುವವ ಕಂದಾಯ ಕಟ್ಟುತ್ತಾನೆ. ಬೆಳೆದರೆ ಸ್ವಲ್ಪ ಕಾಳು ಕೊಡುತ್ತಾನೆ. ಊರಿಗೆ ಬಂದು ದೇವರು ದಿಂಡರು ಮಾಡಿಕೊಂಡು ಹೋಗಬಹುದು. ನಮ್ಮ ತಾತನ ಊರು. ನಮ್ಮ ತಂದೆ ಊರು, ನಮ್ಮ ಊರು ಎನ್ನುವ ಅಭಿಮಾನ ಇರಲಿ ಎಂದು ಹೇಳಿ ಎಲ್ಲಿಗೋ ಹೊರಟಿದ್ದವರು ವ್ಯಾನಿನಲ್ಲಿ ಕೂರಿಸಿಕೊಂಡು ಮನೆಗೆ ಕರೆದುಕೊಂಡು ಹೋದರು. ಊಟ ಮಾಡಿಸಿ ಸಂಜೆ, ಬೆಂಗಳೂರು ಬಸ್ಸಿಗೆ ಹತ್ತಿಸಿ ವಾಪಸ್ಸು ಕಳಿಸಿದರು. ಸೈಟು ಮಾರುವುದನ್ನು ನಿಲ್ಲಿಸಿದೆ.

ನಮ್ಮ ತಂದೆ ಊರಿನಲ್ಲಿ ರಾಮ ಮಂದಿರ ಕಟ್ಟಿಸಬೇಕು ಎಂದು ಹಣ ವಸೂಲಿ ಮಾಡಿ ಹಳ್ಳಿಯವರ ಬಳಿ ಕೊಟ್ಟಿದ್ದರು. ಕೆಲಸ ಏನೂ ಆಗಿರಲಿಲ್ಲ. ನನಗೆ ಕೊಟ್ಟ ಮುಂದಾಳಿನಲ್ಲಿ ಒಂದು ಮನೆ ಕಟ್ಟಿಸಿ, ಹೋಗಿ ಬರುವವರಿಗೆ ಇಳಿದುಕೊಳ್ಳಲು ಅನುಕೂಲವಾಗುವಂತೆ ಮಾಡಲು ಯೋಚಿಸಿದೆ. ಆದರೆ ಅದು ನನ್ನ ಸ್ವಂತದ್ದಾಗುತ್ತದೆ. ಊರಿನವರನ್ನು ಸೇರಿಸಬೇಕಾಗದೆ ಇರಬಹುದು. ಅದಕ್ಕೆ ಒಂದು ಸಾರಿ ಊರಿಗೆ ಹೋದಾಗ ಊರಿನವರನ್ನು ಮಾರೀಗುಡಿಗೆ ಕರೆಸಿದೆ. ಏನಾದರೂ ಮಾಡಿ ಒಂದು ಶ್ರೀರಾಮ ಮಂದಿರ ಕಟ್ಟಿ ಎಂದು ಹೇಳಿದೆ. ಅನೇಕರು ಸಲಹೆ ಕೊಟ್ಟರು. ಆದರೆ ಕಟ್ಟುವವರು ಯಾರು ? "ನಮ್ಮಲ್ಲಿ ಹಣವಿಲ್ಲ. ನೀವೇ ಕಟ್ಟಿಸಿ ಬಿಡಿ" ಎಂದು ಸಲಹೆ ಬಂತು. "ನಾನು ಕಟ್ಟಿಸಿದರೆ ನನ್ನದಾಯಿತು. ನೀವೆಲ್ಲರೂ ಸೇರಿ ಮಾಡಿದ

ಹಾಗೆ ಆಗುತ್ತದೆಯೋ ? ಎಲ್ಲರೂ ಸೇರಿ ಕಟ್ಟಿಸಿದರೆ ಊರಿನದಾಗುತ್ತದೆ" ಎಂದೆ. ಎಲ್ಲರೂ ತಮ್ಮ ಕೈಲಾದಷ್ಟು ಕೆಲಸ ಮಾಡಲು ಒಪ್ಪಿಕೊಂಡರು. ಬೆಂಗಳೂರಿಗೆ ವಾಪಸ್ಸು ಬಂದೆ. ಮಾರಿಗುಡಿ ಪಕ್ಕದಲ್ಲಿ ಶ್ರೀರಾಮ ಮಂದಿರ ಕಟ್ಟಿಸಿದರೆ ಅನುಕೂಲ. ಎಲ್ಲರೂ ಸೇರಿ ಕೆಲಸ ಮಾಡಬಹುದು. ಮಾರಿಗುಡಿ ಪಕ್ಕದ ಸ್ಥಳ ಯಾರದು ಎಂದು ವಿಚಾರಿಸಿದೆ. ದೊಡ್ಡ ತಿಮ್ಮಯ್ಯ ಎಂಬುವರದು ಎಂದು ತಿಳಿಯಿತು. ಬೆಂಗಳೂರಿಗೆ ಬಂದಾಗ ಅವರಿಗೆ ಹೇಳಿದೆ. "ನನ್ನ ಮುಂದಾಳನ್ನು (ಖಾಲಿ ಜಾಗವನ್ನು) ನಿಮಗೆ ಕೊಡುತ್ತೇನೆ. ನಿಮ್ಮ ಮುಂದಾಳನ್ನು ನನಗೆ ಕೊಡಿ. ನಾನು ಊರಿಗೆ ದಾನ ಬರೀ ತೀನಿ" ಎಂದೆ. ಅವರೂ ಒಪ್ಪಿಕೊಂಡರು.

ಒಂದು ದಿನ ನಾಗಮಂಗಲಕ್ಕೆ ಬರಹೇಳಿದೆ. ಅಂದು ರಿಜಿಸ್ಟರ್ ಮಾಡಿಕೊಟ್ಟು ಅವರ ಜಮೀನು ನನ್ನ ಹೆಸರಿಗೆ ಬರೆದರು. ಪುನಃ ಊರಿನ ಹೆಸರಿಗೆ ರಿಜಿಸ್ಟರ್ ಮಾಡಿದೆ. ನಾಲ್ಕು ದಿವಸ ಆದಮೇಲೆ ಎಲ್ಲರಿಗೂ ತಿಳಿಯಿತು. ನಮ್ಮ ದಾಯಾದಿ ಗಳು "ಹಳೇ ಜಾಗದಲ್ಲೇ ರಾಮ ಮಂದಿರ ಕಟ್ಟಬೇಕಿತ್ತು. ನಾವು ದೀಪ ಹಚ್ಚು ತ್ತಿದ್ದೆವು" ಎಂದರು. ನಾನು ಯಾರ ಮಾತೂ ಕೇಳಲಿಲ್ಲ.

## ರೈತರ ಯುವಕ ಸಂಘ

ನಮ್ಮೂರಿನ ಜವರೇಗೌಡ, ನಾನು, ಬೆಂಗಳೂರಿನಲ್ಲೇ ವಾಸವಾಗಿದ್ದ ನಮ್ಮೂ ರಿನ ಇತರರು ಕೂಡಿ ಚೌದರಿಕೊಪ್ಪಲು ರೈತ ಸೇವಾ ಸಂಘ ಎಂದು ಪ್ರಾರಂಭಿಸಿದೆವು. ಒಬ್ಬೊಬ್ಬರ ಮನೆಯಲ್ಲಿ ತಿಂಗಳಲ್ಲಿ ಒಂದು ದಿನ. ಎರಡನೇ ಭಾನುವಾರ ಸೇರುವುದು. ತಿಂಗಳಿಗೆ ಹತ್ತು ರೂಪಾಯಿ ಕೊಡುವುದು. ಒಂದೆರಡು ವರ್ಷಗಳ ನಂತರ ಈ ಹಣ ವನ್ನು ಸಂಗ್ರಹಿಸಿ ಊರಿನ ಅಭಿವೃದ್ಧಿಗೆ ವಿನಿಯೋಗಿಸುವುದು. ಇದಕ್ಕೆ ಎಲ್ಲರೂ ಒಪ್ಪಿಕೊಂಡರು. ಮೂರು ತಿಂಗಳು ಹೀಗೆ ಸಭೆ ಸೇರುತ್ತಿದ್ದೆವು.

ಒಂದು ಶನಿವಾರ ಎಲ್ಲರೂ ಊರಿಗೆ ಹೋಗಿದ್ದೆವು. ಊರಿನವರನ್ನು ಸೇರಿ ಸಿದೆವು. ಮಾರೀ ಗುಡಿಯಲ್ಲಿ ಕುಳಿತೆವು. ಶ್ರೀರಾಮ ಮಂದಿರ ಹೇಗೆ ಕಟ್ಟುವುದು ಎಂಬುದನ್ನು ಯೋಚಿಸಿದೆವು. ನಾನು ಸಲಹೆ ಕೊಟ್ಟೆ. "ಕಟ್ಟಡ ಕಟ್ಟುವುದಕ್ಕೆ ನಾನು ಸಹಾಯ ಮಾಡುತ್ತೇನೆ. ಆದರೆ ಊರಿನವರೆಲ್ಲಾ ಸೇರಿ ಒಟ್ಟಿಗೆ ನಿಂತು ಕೊಂಡು ಕೆಲಸ ಮಾಡಬೇಕು. ಆಗಲೇ ಶ್ರೀರಾಮ ಮಂದಿರ ಎಲ್ಲರದು, ಎನ್ನುವ ಅಭಿಮಾನ ಬರುವುದು" ಎಂದೆ. ಎಲ್ಲರೂ ಒಪ್ಪಿಕೊಂಡರು. ಮಾರನೆಯ ದಿನವೇ ಗುದ್ದಲಿ ಪೂಜೆಮಾಡಿ ಅಸ್ತಿಭಾರ ಹಾಕಲಾಯಿತು. ಬರುವಾಗ ಆದಿ ಚುಂಚನಗಿರಿ ಮಠದ ಶ್ರೀ ಶ್ರೀ ಬಾಲಗಂಗಾಧರ ಸ್ವಾಮಿಗಳ ದರ್ಶನ ಪಡೆಯಲು ಹೋಗಿದ್ದೆ. ಅವರಲ್ಲಿ ಶ್ರೀರಾಮ ಮಂದಿರ ಕಟ್ಟಿಸುವ ವಿಚಾರ ಹೇಳಿದೆ. ಅವರು ಸಂತೋಷ ಪಟ್ಟರು. ಮಠ ನಾಗಮಂಗಲ ತಾಲ್ಲೂಕಿನಲ್ಲಿದ್ದರೂ, ಅಲ್ಲಿಯ ಹಳ್ಳಿಗಳನ್ನು

ನೋಡಿರಲಿಲ್ಲ ಎಂದರು. ಶ್ರೀರಾಮ ಮಂದಿರ ಕಟ್ಟಿದಮೇಲೆ ಪ್ರಾರಂಭೋತ್ಸವ ತಾವೇ ಮಾಡಬೇಕು ಎಂದು ಕೇಳಿಕೊಂಡೆ. ಒಪ್ಪಿಕೊಂಡರು.

ಶ್ರೀರಾಮ ಮಂದಿರ ಸಿದ್ಧವಾಯಿತು. ಸ್ವಾಮಿಗಳು ಪ್ರಾರಂಭೋತ್ಸವ ಮಾಡಲು ಒಪ್ಪಿಕೊಂಡರು. ಮಾನ್ಯ ಮಂತ್ರಿಗಳಾಗಿದ್ದ ಶ್ರೀ ಹುಚ್ಚಮಾಸ್ತಿಗೌಡರು ಅಧ್ಯಕ್ಷತೆ ವಹಿಸಲು ಒಪ್ಪಿಕೊಂಡರು. ಈ ಉತ್ಸವಕ್ಕೆ ತಗುಲುವ ಖರ್ಚನ್ನು ನಾನೇ ವಹಿಸಿಕೊಂಡೆ. ಓಡಾಡಿದವರು ಊರಿನವರು. ಸ್ವಾಮಿಗಳು ನಮ್ಮ ಹಳ್ಳಿಗೆ ಬಂದದ್ದು ಇದೇ ಮೊದಲು. ಊರಲ್ಲೆಲ್ಲಾ ಸಡಗರ. ದೊಡ್ಡದಾಗಿ ಚಪ್ಪರ ಹಾಕಿದ್ದರು. ಧ್ವನಿವರ್ಧಕದ ಏರ್ಪಾಡಾಗಿತ್ತು. ದೇವಲಾಪುರದಿಂದಲೇ ಮೆರವಣಿಗೆ. ದಾರಿಯುದ್ದಕ್ಕೂ ಪಟದ ಕುಣಿತ. ಊರು ಊರಿನಲ್ಲೂ ಸಂಭ್ರಮದ ಸ್ವಾಗತ. ಚೌದರಿಕೊಪ್ಪಲಿಗೆ ಬಂದ ಕೂಡಲೆ, ಚುಂಚನಗಿರಿ ಸ್ವಾಮಿಗಳನ್ನು ಕುರಿತು ಸೋಬಾನದ ಹಾಡುಗಳು. ಸ್ವಾಮಿಗಳಿಗೆ ಪಾದಪೂಜೆ ಆದನಂತರ ಶ್ರೀರಾಮ ಮಂದಿರದ ಪ್ರಾರಂಭೋತ್ಸವ. ಶಾಸಕ ಕೃಷ್ಣಪ್ಪ, ಸಿಂಗಾರಿಗೌಡರು, ನಾಗಮಂಗಲದ ಇಂಜಿನಿಯರ್ ನಂಜೇಗೌಡರು ಪೋಲೀಸ್ ಅಧಿಕಾರಿಗಳು ಎಲ್ಲರೂ ಬಂದಿದ್ದರು. ಅಷ್ಟೊಂದು ಕಾರುಗಳನ್ನು, ಜೀಪುಗಳನ್ನು ನಮ್ಮ ಊರಿನವರು ನೋಡೇ ಇರಲಿಲ್ಲ. ಹೊರಗಡೆಯಿಂದ ಬಂದವರಿಗೆ ಪುಳಿಯೋಗರೆ, ಮೊಸರನ್ನ, ಹಂಚಲಾಯಿತು. ಊರಿನವರಿಗೆಲ್ಲಾ ಗುಗ್ಗರಿ ಪ್ರಸಾದ. ಹೀಗೆ ಶ್ರೀರಾಮ ಮಂದಿರ ಪ್ರಾರಂಭವಾಯಿತು. ಪ್ರತಿ ಶನಿವಾರ ಅಲ್ಲಿ ಈಗ ಭಜನೆ ನಡೆಯುತ್ತದೆ.

ರೈತ ಯುವಕ ಸಂಘ ಪ್ರಾರಂಭಿಸಬೇಕು ಎಂದು ಊರಿನ ಯುವಕರನ್ನು ಸೇರಿಸಿ ಒಂದು ಸಂಘ ರಿಜಿಸ್ಟರ್ ಮಾಡಿಸಿದೆವು. ಬೆಂಗಳೂರಿನಲ್ಲಿ ಚೌದರಿಕೊಪ್ಪಲು ಶ್ರೀರಾಮ ರೈತ ಯುವಕ ಸಂಘ ಎಂಬ ಸಂಸ್ಥೆಯನ್ನು ರಿಜಿಸ್ಟರ್ ಮಾಡಿಸಿದೆವು ಹೇಗಾದರೂ ಮಾಡಿ ರಸ್ತೆ ಸರಿಪಡಿಸಬೇಕು. ವಿದ್ಯುದ್ದೀಪ, ಒಂದು ಬಾವಿ ಮಾಡಿಸಬೇಕು. ಅಧಿಕಾರಿಗಳನ್ನು ಕೇಳಿದ್ದಾಯಿತು. ಎಲ್ಲರೂ ಸಹಕರಿಸಿದರು.

ಲೋಕೋಪಯೋಗಿ ಮಂತ್ರಿ ಶ್ರೀಕಂಠಯ್ಯ ಮತ್ತು ಮಂತ್ರಿಗಳಾಗಿದ್ದ ಎಚ್. ಟಿ. ಕೃಷ್ಣಪ್ಪ ಇವರನ್ನು ಅದಮಗೆರೆಗೆ ಕರೆಸಬೇಕು ಎಂದು ನಮ್ಮ ಸೋದರಮಾವನ ಮಗ ಲಕ್ಷ್ಮಣ್ಣ ಏರ್ಪಾಡು ಮಾಡಿದರು. ಅದೇ ಸಮಯದಲ್ಲಿ ಚೌದರಿಕೊಪ್ಪಲಿಗೂ ಏಕೆ ದೀಪ ಹಾಕಿಸಬಾರದು ಎಂದು ಯೋಚಿಸಿ ಅಧಿಕಾರಿಗಳನ್ನು ಕಂಡು ಬೀದಿ ದೀಪ ಹಾಕಿಸಲು ವ್ಯವಸ್ಥೆ ಮಾಡಲಾಯಿತು.

ಮಂತ್ರಿಗಳಿಬ್ಬರೂ ಬಂದರು. ಉದ್ಘಾಟನೆ ಮಾಡಲಾಯಿತು. ಶ್ರೀರಾಮ ಮಂದಿರಕ್ಕೆ, ಮಾರಿಗುಡಿಗೆ ಬೆಂಗಳೂರಿನ ಸಂಘದ ಹಣದಿಂದ ದೀಪ ಹಾಕಿಸಲಾಗಿದೆ. ಒಂದು ಬೋರ್‌ವೆಲ್ ಸಹ ಹಾಕಿದ್ದಾರೆ. ಮಳೆ ಬಂದರೆ ಕೆರೆ ಕೋಡಿ ಹರಿದು ಊರಿನ ಹುಡುಗರು ಪಕ್ಕದ ತೂಬಿನಕೆರೆ ಶಾಲೆಗೆ ಹೋಗಲು ಆಗುತ್ತಿರಲಿಲ್ಲ.

ಇಂಜಿನಿಯರ್ ಸಾಹೇಬರು ಮನಸ್ಸುಮಾಡಿ ಒಂದು ಸಣ್ಣ ಕಟ್ಟೆ ಕಟ್ಟಿಸಿ ರಸ್ತೆ ಮಾಡಲು ಏರ್ಪಾಡು ಮಾಡಿದರು.

ಈಗ ಚೌದರಿಕೊಪ್ಪಲಿಗೆ ಲಾರಿ, ಕಾರು, ಹೋಗಲು ಅನುಕೂಲವಿದೆ. ಒಂದು ಶಾಲೆ, ಏನಾದರೂ ಮಾಡಿ ಪ್ರಾರಂಭಿಸಬೇಕು ಎನ್ನುವ ಯೋಚನೆ. ಬೆಂಗಳೂರಿನ ಸಂಘದ ಸದಸ್ಯರು ಈಗಲೂ ಎರಡನೇ ಭಾನುವಾರ ಒಂದೊಂದು ತಿಂಗಳು ಒಬ್ಬೊಬ್ಬರ ಮನೆಯಲ್ಲಿ ಸೇರುತ್ತೇವೆ. ವರ್ಷಕ್ಕೊಮ್ಮೆ ಸೇರುವುದರಿಂದ ಎಲ್ಲರೂ ಸಂತೋಷವಾಗಿ ಅತಿಥಿಗಳನ್ನು ಸತ್ಕರಿಸುತ್ತಾರೆ. ಹೀಗೆ ಬೆಂಗಳೂರಿನಲ್ಲಿರುವ ನಮ್ಮೂರಿನ ಜನಗಳಿಗೆ, ಚೌದರಿಕೊಪ್ಪಲಿನ ಜನಕ್ಕೆ ಸಂಬಂಧ ಉಂಟಾಗಿದೆ. ಇದನ್ನು ನೋಡಿ ಬೇರೆಯವರೂ ಅನುಸರಿಸುತ್ತಿದ್ದಾರೆ.

## ಶ್ರೀರಾಮ ಮಂದಿರ

ನಮ್ಮ ತಂದೆಯವರ ಜೊತೆ ಬೆಂಗಳೂರಿನ ಮಲ್ಲೇಶ್ವರದ ತೆಂಗಿನಮರದ ರಸ್ತೆಯಲ್ಲಿರುವ ರಾಮಮಂದಿರಕ್ಕೆ ಹೋಗುತ್ತಿದ್ದೆ. ಅನಂತರ ನಮ್ಮ ತಾಯಿಯವರ ಜೊತೆ ಭಜನೆಗೆ ಹೋಗುತ್ತಿದ್ದೆ. 1942ರ ಆಂದೋಳನದಲ್ಲಿ ಭಾಗವಹಿಸದ ಮೇಲೆ ಹೋಗುವುದು ಕಡಿಮೆಯಾಗಿತ್ತು. ಒಂದೆರಡು ಸಾರಿ ಗಾಂಧೀ ಸಾಹಿತ್ಯ ಸಂಘದ ಕೆಲವು ಸಭೆಗಳನ್ನು ಅಲ್ಲಿಯೇ ಕರೆದೆ. ಅದು ಆಗ ಆಡಳಿತ ನಡೆಸುವವರಿಗೆ ಇಷ್ಟವಿರಲಿಲ್ಲ. ಸಂಕ್ರಾಂತಿ ಹಬ್ಬದಲ್ಲಿ ಒಂದು ದಿನ ನಾವು ಧನುರ್ಮಾಸ ಪೂಜೆ ನಡೆಸುತ್ತಿದ್ದೆವು. ದೇವೋಜಿರಾವ್ ವಯಸ್ಸಾಗಿದ್ದುದರಿಂದ ಬೆಂಗಳೂರು ಬಿಟ್ಟು ಹಳ್ಳಿ ಸೇರಿದರು. ನೋಡಿಕೊಳ್ಳುವವರು ಇರಲಿಲ್ಲ. ರತ್ನಾಬಾಯಿ ಎಂಬಾಕೆ ಒಂದು ಮಠ ಮಾಡಬೇಕು ಎಂದು ಹೇಳಿ ಇದ್ದಕ್ಕಿದ್ದ ಹಾಗೆ ರಾಮ ಮಂದಿರದಲ್ಲಿ ಬಂದು ಬಿಡಾರ ಮಾಡಿದರು. ಆಗ ಆಡಳಿತ ನಡೆಸುತ್ತಿದ್ದ ಅಂದಾನಪ್ಪ ಮತ್ತು ಇತರರು ಆಕೆಯನ್ನು ಬಿಡಿಸಬೇಕು ಎಂದು ಪ್ರಯತ್ನ ಮಾಡುತ್ತಿದ್ದರು. ರತ್ನಾಬಾಯಿ ಸುತ್ತ ಮುತ್ತ ಇದ್ದ ಜನಗಳ ಬೆಂಬಲ ಪಡೆದರು. ಅನಂತಾಶ್ರಮ ಮತ್ತು ಇತರ ಮಠಗಳ ಅಧಿಪತಿಗಳನ್ನು ಕರೆದು ತಂದು ಸಪ್ತಾಹಕ್ಕೆ ವ್ಯವಸ್ಥೆ ಮಾಡಿದರು. ವಿಠಲಾನಂದ ಮಠ ಮಾಡಲು ಏರ್ಪಾಡು ಮಾಡಿದರು. ನನ್ನಲ್ಲಿಗೆ ಅವರ ಕಡೆಯಿಂದ ಒಬ್ಬ ಪ್ರತಿನಿಧಿ ಬಂದ. ನಾವು ಕೋರ್ಟಿಗೆ ಹೋಗಬೇಕು ಎಂದು ಇದ್ದೇವೆ. ರಾಮ ಮಂದಿರದ ಆಡಳಿತ ಸರಿ ಇಲ್ಲ. ನೋಡಿಕೊಳ್ಳುವವರು ಇಲ್ಲ. ಮಠ ಮಾಡಿದರೆ ಎಲ್ಲರ ಸಹಾಯ ಸಿಗುವುದು. ನಿಮ್ಮ ಭಾವ ತಮ್ಮಯ್ಯನವರು ಮತ್ತು ಉಳಿದಿರುವ ಧರ್ಮದರ್ಶಿಗಳು ಅವರ ಸಹಿ ಹಾಕಬೇಕು ಎಂದು ಹೇಳಿಕಳಿಸಿದರು. ನಾನು ನೋಡೋಣ ನಮ್ಮ ಭಾವನವರಿಗೆ ಹೇಳಿ ಕರೆಸುತ್ತೇನೆ ಎಂದು ಸಮಾಧಾನ ಮಾಡಿ ಕಳಿಸಿದೆ. ಈ ವಿಷಯವನ್ನು ಅಂದಾನಪ್ಪ ಎಂಬುವರಿಗೆ ತಿಳಿಸಿದೆ.

ಸಿದ್ದವನಹಳ್ಳಿ ಕೃಷ್ಣಶರ್ಮರ ಹತ್ತಿರ ಚರ್ಚಿಸಿ ಅವರನ್ನೂ ಶ್ರೀರಾಮ ಮಂದಿರದ ಸಮಿತಿಯ ಸಭೆಗೆ ಕರೆದುಕೊಂಡು ಬಂದೆ. ಅವರನ್ನು ಉಪಾಧ್ಯಕ್ಷರನ್ನಾಗಿ ಮಾಡಿದೆವು. ಒಂದುದಿನ ಶರ್ಮಾಜಿಯವರು ಒಬ್ಬರೇ ರಾಮಮಂದಿರಕ್ಕೆ ಹೋದರು. ಅಲ್ಲಿ ಕೆಲವರಿಗೆ ಆಶ್ಚರ್ಯ. ಶ್ರೀರಾಮ ಮಂದಿರದ ಆಡಳಿತ ಸರಿ ಇಲ್ಲ. ಇದನ್ನು ಮಠ ಮಾಡೋಣ ಎಂದಿದ್ದೇವೆ. ನಿಮ್ಮ ಸಹಕಾರ ಬೇಕು ಎಂದರು. "ರಾಮ ಮಂದಿರಕ್ಕೆ ದುಡಿಯುತ್ತಿರುವ ಜನ ಬೇಕಾದಷ್ಟು ಜನ ಇದ್ದಾರೆ. ಅವರೆಲ್ಲರನ್ನೂ ಸೇರಿಸೋಣ. ಎಲ್ಲರೂ ಸೇರಿ ಏನು ತೀರ್ಮಾನ ಮಾಡುವರೋ ನೋಡೋಣ. ಮೂರನೆಯವರ ಮಧ್ಯಸ್ಥಿಕೆಯಲ್ಲಿ ರಾಮ ಮಂದಿರದ ಬೀಗದ ಕೈ ಕೊಡೋಣ, ಸಭೆ ತೀರ್ಮಾನಿಸಿದಂತೆ ಮಾಡೋಣ" ಹೀಗೆಂದವರು ನಮ್ಮ ಕೃಷ್ಣಶರ್ಮರು. ಎಲ್ಲರೂ ಇದಕ್ಕೊಪ್ಪಲೇ ಬೇಕಾಯಿತು.

ಒಂದು ತಾರೀಖು ಗೊತ್ತುಮಾಡಿ, ಆ ದಿನ ರಾಮಮಂದಿರ ಖಾಲಿಮಾಡಿ, ಬೀಗದ ಕೈ ಅದೇ ರಸ್ತೆಯಲ್ಲಿ ವಾಸವಾಗಿದ್ದ ಶ್ರೀ ಎಂ. ಎಸ್. ಮೂರ್ತಿ ಎನ್ನುವರಿಗೆ ಕೊಟ್ಟೆವು. ಹದಿನೈದು ದಿನ ಆದಮೇಲೆ ಸಾರ್ವಜನಿಕ ಸಭೆ ಅವರೇ ಕರೆದರು. ನಾನು ಆಗ ನಮಗೆ ಬೇಕಾದ ಜನಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಸೇರಿಸಿದೆ. ರತ್ನಾಬಾಯಿ ಮತ್ತು ಅವರ ಕಡೆಯವರೂ ಬಂದರು. ಶರ್ಮಾಜಿಯವರು ಬಹು ಚಾಕಚಕ್ಯತೆಯಿಂದ ಸಭೆ ನಡೆಸಿದರು. ವಿಷಯಗಳನ್ನು ವಿವರಿಸಿದರು. ಸುಮಾರು 20 ವರ್ಷಗಳ ಕಾಲದಿಂದ ಶ್ರೀರಾಮ ಮಂದಿರ ನಡೆದುಕೊಂಡು ಬಂದಿದೆ. ಈಗ ಕೆಲವರು ವಿಠಲಾನಂದ ಮಠ ಮಾಡಬೇಕು ಎಂದು ಅಪೇಕ್ಷೆ ಪಟ್ಟಿದ್ದಾರೆ. ಈಗ ಏನು ಮಾಡಬೇಕು ಎಂಬುವುದನ್ನು ಹೇಳಿ ಎಂದು ಕೇಳಿದರು. ಅದರ ಬಗ್ಗೆ ಚರ್ಚೆ ನಡೆಸಿದರು. ಸಭೆಗೆ ನಮಗೆ ಬೇಕಾದ ಜನರೇ ಹೆಚ್ಚು ಬಂದಿದ್ದರು. ಶ್ರೀರಾಮ ಮಂದಿರವೇ ಆಗಬೇಕು. ಸುವ್ಯವಸ್ಥಿತವಾಗಿ ನಡೆಯಬೇಕು. ನಿಯಮಾವಳಿಯನ್ನು ತಯಾರಿಸಲು ಒಂದು ಸಣ್ಣ ಸಮಿತಿ ಮಾಡಿ ತಿಂಗಳಿಗೊಂದು ಸಭೆ ಕರೆಯ ಬೇಕೆಂದು ತೀರ್ಮಾನಿಸಿದೆವು. ಈ ತೀರ್ಮಾನಕ್ಕೆ ಒಪ್ಪದೆ, ರತ್ನಾಬಾಯಿ ಮತ್ತು ಅವರ ಕಡೆಯವರು ಸಭಾ ತ್ಯಾಗ ಮಾಡಿದರು. ಹೆಚ್ಚು ಚಿಂತೆ ಮಾಡದೆ ಸಭೆಯನ್ನು ಪೂರೈಸಿದರು.

ಒಂದು ತಿಂಗಳಾದ ಮೇಲೆ ಮತ್ತೊಂದು ಸಭೆ ಕರೆದು ನಿಯಮಾವಳಿಯನ್ನು ಸಾರ್ವಜನಿಕ ಸಭೆಯಲ್ಲಿ ಅಂಗೀಕರಿಸಲಾಯಿತು. ಸಭೆಗೆ ಹೆಚ್ಚುಜನ ಬಂದಿದ್ದರಿಂದ ಬೇರೆಯವರು ಯಾರೂ ಮಾತನಾಡಲು ಆಗಲಿಲ್ಲ. ನಾನು ಕೋಶಾಧಿಕಾರಿಯಾದೆ, ಶ್ರೀರಾಮ ಮಂದಿರದಲ್ಲಿ ಹಣ ಇರಲಿಲ್ಲ. ಸಾಲ ಇತ್ತು. ನಾಲ್ಕಾಣೆ ಸದಸ್ಯರನ್ನು ಮಾಡಬೇಕು ಎಂದು ಪಣತೊಟ್ಟೆ. ಮನೆ ಮನೆಗೆ, ಗುಡಿಸಲುಗಳಿಗೆ, ಹೋದೆ. ಸದಸ್ಯರನ್ನಾಗಿ ಮಾಡಿಸಿದೆ. ಎರಡು ತಿಂಗಳಿನಲ್ಲಿ 600 ಜನ ಸದಸ್ಯರಾದರು. ನಾನೇ ರಸೀದಿ ಬರೆದುಕೊಡುತ್ತಿದ್ದೆ. ಲೆಕ್ಕದ ಪುಸ್ತಕವನ್ನು ಮನೆಯಲ್ಲಿ ನನ್ನ ಹೆಂಡತಿ

ನೋಡಿಕೊಳ್ಳುತ್ತಿದ್ದಳು. ಶನಿವಾರ, ಭಾನುವಾರ, ಬಂದರೆ ಹಣ ವಸೂಲಿ ಕೆಲಸ. ಇದನ್ನು ನೋಡಿ ಕೆಲವರಿಗೆ ಧೈರ್ಯಬಂತು. ಬ್ಯಾಂಕಿನಲ್ಲಿ ಒಂದು ತಃಖ್ತೆ ತೆಗೆದು ಹಣ ಇಡಲಾಯಿತು. ಖರ್ಚಿಗೆ ಚೆಕ್ಕಿನ ಮೂಲಕ ನಡೆಯುತ್ತಿತ್ತು.

ಶ್ರೀರಾಮ ಮಂದಿರದ ಪಶ್ಚಿಮಕ್ಕೆ ಬಾಗಿಲು ಇರಲಿಲ್ಲ. ಅದಕ್ಕೆ ಹಣ ಸಂಗ್ರಹಿಸಲು ಪ್ರಾರಂಭಿಸಿದೆವು. ನಾನೇ ಒಂದು ಗಾಂಧಿಪಟವನ್ನು ರಾಮಮಂದಿರಕ್ಕೆ ಕೊಟ್ಟು ಆಗ ಹಣಕಾಸು ಮಂತ್ರಿಯಾಗಿದ್ದ ಎಚ್. ಸಿ. ದಾಸಪ್ಪನವರ ಕೈಯಲ್ಲಿ ಅನಾವರಣ ಮಾಡಿಸಿದೆ. ಮಂತ್ರಿಗಳು ಬಂದಿದ್ದರಿಂದ ಪತ್ರಿಕೆಗಳಲ್ಲಿ ಪ್ರಚಾರ ಸಿಕ್ಕಿತು. ಹಣ ಸಂಗ್ರಹಣೆಗೆ ಹೋದಾಗ ಹಿಂದೆ ರಾಮಮಂದಿರದ ಬಗ್ಗೆ ಅಸಮಾಧಾನ ಪಟ್ಟರೂ ಈಗ ನಡೆಯುತ್ತಿದ್ದ ಕೆಲಸ ನೋಡಿ ಎಷ್ಟೋ ಜನ ಹಣ ಕೊಟ್ಟರು. ಆಗ ಕಂದಾಯ ಮಂತ್ರಿಗಳಾಗಿದ್ದ ಕಡಿದಾಳ್ ಮಂಜಪ್ಪನವರನ್ನು ಕರೆಸಿ ಪಶ್ಚಿಮದ ಕಡೆಯ ಬಾಗಿಲನ್ನು ಪ್ರವೇಶೋತ್ಸವ ಮಾಡಿಸಿದೆವು. ಸಂಜೆ ಹರಿಕಥೆ, ಪುರಾಣ, ಕಾರ್ಯಕ್ರಮಗಳನ್ನು ಪ್ರಾರಂಭಿಸಲಾಯಿತು. ಪ್ರತಿವರ್ಷ ಸದಸ್ಯರ ಸಭೆ ಕರೆದು, ನಾಲ್ಕಾಣೆ ಚಂದಾ ಕೊಟ್ಟವರ ಹೆಸರನ್ನು ಪ್ರಕಟಿಸಿ ಸಭೆಯಲ್ಲಿ ವರ್ಷದ ಆದಾಯ ವ್ಯಯವನ್ನು ವಿವರಿಸಲು ಪ್ರಾರಂಭಿಸಿದೆವು.

ಹೊನ್ನಪ್ಪ ಕಟ್ಟಿಸಿದ ರಾಮಮಂದಿರ ಅದರ ಉದ್ಧಾರಕ್ಕೆ ಅವನ ಮಗನೇ ನಿಂತಿದ್ದಾನೆ. ನಾವೆಲ್ಲ ಸೇರಿ ಬೆಳೆಸೋಣ ಎಂದು ಶೆಟ್ಟಿ ಗಿರಿಯಪ್ಪ ಹೇಳಿದ ಮಾತನ್ನು ಇಲ್ಲಿ ಸ್ಮರಿಸಬಹುದು.

ಪ್ರತಿವರ್ಷ ರಾಮೋತ್ಸವ ಸಂದರ್ಭದಲ್ಲಿ ಹಣ ವಸೂಲಿ ಪ್ರಾರಂಭಿಸಿದೆವು. ಮೊದಲನೆ ವರ್ಷ ಸ್ವಲ್ಪ ಕಷ್ಟವಾದರೂ ನಂತರ ತೊಂದರೆಯಾಗಲಿಲ್ಲ. ಗಾಂಧೀ ಸಾಹಿತ್ಯ ಸಂಘಕ್ಕಾಗಿ ಹಣ ವಸೂಲಿ ಮಾಡಿದ ಅನುಭವ ಇಲ್ಲಿ ನೆರವಾಯಿತು. ವರ್ಷಾ ವರ್ಷಾ ರಾಮೋತ್ಸವ ಚೆನ್ನಾಗಿ ನಡೆಯಲು ಪ್ರಾರಂಭ. ಅದರಲ್ಲೂ ಗುರುರಾಜುಲು ನಾಯ್ಡು ಅವರ ಹರಿಕಥೆ ಪ್ರಾರಂಭವಾದ ಮೇಲೆ ರಾಮೋತ್ಸವಕ್ಕಾಗಿ ಹಾಕಿದ ಚಪ್ಪರ ಸಾಲದೆ ಹೋಗಿ ಸುತ್ತಲೂ ರಸ್ತೆಗಳೆಲ್ಲ ಭರ್ತಿಯಾಗುತ್ತಿದ್ದವು. ಹರಿಕಥೆ ರಾಮಮಂದಿರ ಎನ್ನುವ ಹೆಸರು ಬಂತು. ಏಕೆಂದರೆ ಸಂಗೀತದ ಕಾರ್ಯಕ್ರಮಕ್ಕೆ ಅಲ್ಲಿರುತ್ತಿದ್ದವರು ಕಡಿಮೆ. ಒಳ್ಳೆ ಸಂಗೀತ ವಿದ್ವಾಂಸರನ್ನು ಕರೆಸಲು ನಮ್ಮಲ್ಲಿ ಹಣವಿರಲಿಲ್ಲ. ರಾಮೋತ್ಸವ ಹಣದಲ್ಲಿ ಉಳಿತಾಯ ಮಾಡಿ ಕಟ್ಟಡ ಕಟ್ಟಬೇಕು ಅನ್ನೋ ಯೋಚನೆ ಬೇರೆ ಇತ್ತು. ಒಂದು ನಕಾಶೆಯನ್ನು ರಚಿಸಿದೆವು, ಅದನ್ನು ಎಲ್ಲರಿಗೂ ತೋರಿಸಿ ಕಟ್ಟಡ ನಿಧಿ ಎಂದು ಹಣ ಸಂಗ್ರಹಿಸಲು ಪ್ರಾರಂಭಿಸಿದೆವು.

ಆಗ ಬೆಂಗಳೂರು ಮುನಿಸಿಪಲ್ ಅಧ್ಯಕ್ಷರಾಗಿದ್ದ ಅನಂತರಾಮನ್ ಅವರನ್ನು ಕರೆಸಿದೆವು. ರಾಮಮಂದಿರದ ಎದುರಿಗಿರುವ ಸ್ಥಳವನ್ನು ರಾಮಮಂದಿರಕ್ಕೆ ಕೊಡಬೇಕೆಂದೂ ಕೇಳಿಕೊಂಡೆವು. ಡಾ|| ಪಾರ್ಥಸಾರಥಿಯವರು ಆಗ ಮಲ್ಲೇಶ್ವರದ ಪ್ರತಿನಿಧಿಗಳು. ಶ್ರೀ ಜಿ. ರಾಮೇಗೌಡರು ಪಾರ್ಥಸಾರಥಿಯವರ ಸ್ನೇಹಿತರು.

ರೈಲ್ವೆ ಕಂಟ್ರಾಕ್ಟರ್ ರಾಮಮಂದಿರಕ್ಕೆ ಆಗಾಗ ಬರುತ್ತಿದ್ದರು. ಸ್ವಂತಕ್ಕಾಗಿ ಆಗಲೇ ಆ ಸೈಟಿಗಾಗಿ ಪ್ರಯತ್ನ ಪಟ್ಟಿದ್ದರು. ವಿ. ಎಸ್. ಕೃಷ್ಣಯ್ಯರ್ ಅವರನ್ನು ಒಂದು ದಿನ ಭಜನೆಗೆ ಕರೆದುಕೊಂಡು ಬಂದೆವು. ಶನಿವಾರದ ದಿನ ಭಾರಿ ಭಜನೆ. ಗಾಂಧೀ ಸಾಹಿತ್ಯ ಸಂಘದ ಕಿಟ್ಟಿ, ವೆಂಕಟಾಚಲಂ, ಎಲ್ಲರೂ ಬರುತ್ತಿದ್ದರು. ಕೃಷ್ಣಯ್ಯರ್ ಆಗ ಮುನಿಸಿಪಲ್ ಸದಸ್ಯರು. ಜೆ. ಲಿಂಗಯ್ಯನವರನ್ನು ಕರೆದುಕೊಂಡು ಬನ್ನಿ. ಅವರಿಂದ ಕೆಲಸ ಆಗುತ್ತದೆ ಎಂದರು. ಕಾಂಗ್ರೆಸ್ ಕಛೇರಿ ಮೂಲಕ ಅವರ ಪರಿಚಯ ಚೆನ್ನಾಗಿತ್ತು. ಆಗ ಟೌನಾಪ್ಲಾನ್ ಕಮಿಟಿ ಅಧ್ಯಕ್ಷರಾಗಿದ್ದರು. ಅವರನ್ನು ಭಜನೆಗೆ ಕರೆದುಕೊಂಡು ಬಂದೆವು. ರಾಮಮಂದಿರದ ಮುಂದಿನ ಜಾಗದ ವಿಚಾರ ತಿಳಿಸಿದೆವು. ಆಗಲಿ ಒಂದು ಅರ್ಜಿ ತಯಾರು ಮಾಡಿಕೊಡಿ ಎಂದರು. ಅವರು ಹೇಳಿದ ರೀತಿಯಲ್ಲಿ ಅರ್ಜಿ ತಂದುಕೊಟ್ಟೆವು. 30×40 ಅಡಿ ಸೈಟನ್ನು ಕೇವಲ 300-350 ರೂಗಳಿಗೆ ಕೊಡಿಸಿದರು. ಆ ಸೈಟಿನಲ್ಲಿ ರಾಮಮಂದಿರಕ್ಕೆ ಆದಾಯ ಬರುವ ಯೋಜನೆ ಯೋಚಿಸುತ್ತಿದ್ದರು. ಅಷ್ಟರಲ್ಲಿ ಶ್ರೀ ಜಿ. ರಾಮೇಗೌಡರು ಅಂಗಡಿಗಳನ್ನು ಹಾಕಿ ಆದಾಯ ಬರುತ್ತದೆ ಎಂದರು. ಆಗ ನಮ್ಮಲ್ಲಿ 3 ರಿಂದ 4 ಸಾವಿರ ರೂಪಾಯಿ ಮಾತ್ರ ಇತ್ತು ಅಷ್ಟೆ. ಆದರೂ ಪೂರ್ತಿ ಕಟ್ಟಿಸಿಕೊಟ್ಟರು.

1953ರಲ್ಲಿ ಶ್ರೀರಾಮ ಕೋ-ಆಪರೇಟಿವ್ ಬ್ಯಾಂಕ್ ಪ್ರಾರಂಭವಾಯಿತು (ಇದು ಆರಂಭಗೊಂಡ ಬಗೆಯನ್ನು ಮುಂದೆ ಹೇಳಿದ್ದೇನೆ). ಬ್ಯಾಂಕಿಗೆ ಸ್ಥಳ ಶ್ರೀರಾಮ ಮಂದಿರದಲ್ಲಿ ಸಾಲದಾಯಿತು. ಆಗ ಬ್ಯಾಂಕಿನ ಕಾರ್ಯದರ್ಶಿ ನಾನೇ ಆಗಿದ್ದೆ. ಬ್ಯಾಂಕಿನಿಂದ ನಾಲ್ಕು ಸಾವಿರ ರೂಪಾಯಿ ಬಾಡಿಗೆ ಮುಂಗಡ ತೆಗೆದು ಕೊಂಡೆ. ಶ್ರೀರಾಮ ಮಂದಿರದಲ್ಲಿದ್ದ ಹಣದಿಂದ ಶ್ರೀರಾಮ ಕೋ-ಆಪರೇಟೀವ್ ಬ್ಯಾಂಕ್ ಇರುವ ಕಟ್ಟಡವನ್ನು ಕಟ್ಟಲಾಯಿತು. ಕೇವಲ ಐವತ್ತು ರೂಪಾಯಿ ತಿಂಗಳ ಬಾಡಿಗೆ. ಬ್ಯಾಂಕ್ ಇರುವ ಕಟ್ಟಡ, ಅಂಗಡಿ ಮತ್ತು ಕೊಠಡಿಗಳು ಇವು ಗಳಿಂದ ಬರುವ ಬಾಡಿಗೆ, ರಾಮೋತ್ಸವದಿಂದ ಬರುವ ಹಣ ಇವುಗಳೇ ರಾಮ ಮಂದಿರದ ಆದಾಯ. ಚಂದಾವಸೂಲಿ ನಿಂತಿತು.

ಶ್ರೀರಾಮಮಂದಿರದ ಪಕ್ಕದಲ್ಲಿ ಕೋಡಿ ಆಂಜನೇಯಸ್ವಾಮಿ ದೇವಸ್ಥಾನಕ್ಕೆ ಸೇರಿದ ಒಂದು ಕಾಲು ಎಕರೆ ಜಮೀನಿತ್ತು. ಶ್ರೀರಾಮ ಮಂದಿರಕ್ಕೆ ಈ ಜಮೀನನ್ನು ಏಕೆ ತೆಗೆದುಕೊಳ್ಳಬಾರದು ಎಂದು ಮುಜರಾಯಿ ಕಮಿಷನರ್‌ಗೆ ಅರ್ಜಿ ಹಾಕಿದೆವು. ವಿಪರೀತ ಹಣ ಕೇಳಿದರು. ಕೊಡಲಾಗದೆ ಸುಮ್ಮನಾದೆವು.

ಶ್ರೀ ಕಡಿದಾಳ್ ಮಂಜಪ್ಪನವರು ಕಂದಾಯ ಮಂತ್ರಿಗಳಾಗಿದ್ದಾಗ ಶ್ರೀ ಶ್ರೀ ಹುಚ್ಚಮಾಸ್ತಿಗೌಡರು ಒಂದು ಅರ್ಜಿ ಬರೆಯಿಸಿ ಅರಮನೆಗೆ ಕರೆದುಕೊಂಡು ಹೋದರು. ಆದರೆ ಆ ಅರ್ಜಿ ಮೂಲೆ ಸೇರಿತು. ಹುಚ್ಚಮಾಸ್ತಿಗೌಡರೇ ಮಂತ್ರಿ ಗಳಾದ ಮೇಲೆ ಈ ಪ್ರಸ್ತಾಪ ಬಂದಾಗ ಆಶ್ವಾಸನೆ ನೀಡಿದರು. 100×170 ಅಡಿ ನಿವೇಶನವನ್ನು ನೂರು ರೂಪಾಯಿ ಬಾಡಿಗೆ ಮೇಲೆ 99 ವರುಷ ಲೀಸ್‌ಗೆ ಕೊಟ್ಟರು.

ಕಲ್ಯಾಣ ಮಂಟಪಕ್ಕೆ ಆಗಲೇ ಅಸ್ತಿಭಾರ ಹಾಕಲಾಯಿತು. ಈಗ ಕಟ್ಟಡದ ಕೆಲಸ ಮುಗಿದಿದೆ. ಕಟ್ಟಡ ನಿರ್ಮಾಣದ ಬಗೆಗೆ ಮುಂದೆ ಉದ್ಯಮ ವಿದ್ಯಾಭ್ಯಾಸ ಶಾಲೆ (Employment Education) ತೆರೆಯುವ ಯೋಚನೆ ಇದೆ. ಹಳ್ಳಿಗಳಿಂದ ಕೆಲಸ ಹುಡುಕಿ ಬರುವ ಅನೇಕರಿಗೆ ಇದರಿಂದ ನೆರವಾಗುತ್ತದೆ. ಹೆಚ್ಚು ಓದಿರುವುದಿಲ್ಲ ಹಳ್ಳಿಗರು. ಅಂಥವರಿಗೆ ಗಾರೆ ಕೆಲಸದಿಂದ ಹಿಡಿದು ಎಲ್ಲ ನೌಕರಿಗಳಲ್ಲೂ ತರಪೇತಿ ಕೊಡುವುದರಿಂದ ಅವರು ಮುಂದೆ ಉತ್ತಮ ಜೀವನ ಮಾಡುವುದಕ್ಕೆ ಅವಕಾಶ ಕಲ್ಪಿಸಿದಂತಾಗುವುದು.

## ದೇವಸ್ಥಾನಗಳ ಧರ್ಮದರ್ಶಿಯಾಗಿ ಸೇವೆ ಮಾಡಲು ಅವಕಾಶ

ಶೇಷಾದ್ರಿಪುರದ ಕೋಡಿ ಶ್ರೀ ಆಂಜನೇಯಸ್ವಾಮಿ ದೇವಸ್ಥಾನ ಬಹು ಪುರಾತನ ವಾದದ್ದು. ಈ ದೇವಸ್ಥಾನದ ಪಕ್ಕದಲ್ಲಿ ಹರಿಯುವ ಹಳ್ಳ ಆಗಿನ ಕಾಲದ ಕೆರೆ, ಕೋಡಿಹಳ್ಳ. ಅದಕ್ಕಾಗಿ ಕೋಡಿ ಆಂಜನೇಯಸ್ವಾಮಿ ಎಂಬ ಹೆಸರು ಬಂದಿರ ಬೇಕು. ದೇವಸ್ಥಾನ ಆಗಲೋ ಈಗಲೋ ಬೀಳುವಂತಿತ್ತು. ಸುತ್ತಲೂ ಗಲೀಜು. ಹಿಂಭಾಗದಲ್ಲಿ ಗುಡಿಸಲುಗಳು. ದೇನಸ್ಥಾನದ ಮೇಲೆಲ್ಲಾ ಹೊಲಸು. ನನ್ನನ್ನು ದೇವಸ್ಥಾನದ ಕನ್ವೀನರನ್ನಾಗಿ ಮಾಡಿದರು. ಯಾರೂ ಹಿಂದೆ ಸಭೆ ಕರೆದಿರಲಿಲ್ಲ ವೆಂದು ತೋರಿತು. ಹಿಂದಿನ ಕಾಗದ ಪತ್ರಗಳು ಒಂದೂ ಸಿಕ್ಕಲಿಲ್ಲ. ಮೊದಲನೆ ಸಭೆಯನ್ನು ದೇವಸ್ಥಾನದಲ್ಲೇ ಕರೆದೆ. ಸದಸ್ಯರು ಸೇರಿದರು. ದೇವಸ್ಥಾನದ ಅಭಿ ವೃದ್ಧಿ ವಿಷಯದಲ್ಲಿ ಚರ್ಚೆ ನಡೆಯಿತು. ಆಸ್ತಿ ವಿವರ ಕೇಳಿದೆ. ಶ್ರೀರಾಮ ಮಂದಿರದ ಪಕ್ಕದ ಜಮೀನು ಆಂಜನೇಯ ದೇವಸ್ಥಾನದ್ದು ಎಂದು ತಿಳಿಯಿತು. ಆಂಜನೇಯ ಸ್ವಾಮಿ ದೇವಸ್ಥಾನದ ಆಸ್ತಿಯೆಲ್ಲ ಪರಭಾರೆಯಾಗಿ ಹೋಗಿತ್ತು. ಮುಜರಾಯಿ ಕಛೇರಿಯಲ್ಲಿ ವಿವರ ತಿಳಿದು, ಶ್ರೀರಾಮ ಮಂದಿರದ ಪಕ್ಕದ ಜಮೀನು ದೇವಸ್ಥಾನದ ವಶಕ್ಕೆ ಪಡೆಯಲು ಯತ್ನಿಸಿದೆ, ಆಗಲಿಲ್ಲ. ಕಡೆಗೆ ರಾಮಮಂದಿರದ ಮೂಲಕ ಜಮೀನನ್ನು ದೇವಸ್ಥಾನದ ವಶಕ್ಕೆ ತೆಗೆದುಕೊಂಡು ಶ್ರೀರಾಮ ಮಂದಿರಕ್ಕೆ 99 ವರ್ಷ ಲೀಸ್ ಮೇಲೆ ಸರ್ಕಾರದವರು ಕೊಟ್ಟರು. ದೇವಸ್ಥಾನದ ಸುತ್ತಲೂ ಗೋಡೆ ಕಟ್ಟಲು ಆಗ ಟೌನ್ ಪ್ಲಾನಿಂಗ್ ಕಮಿಟಿಯ ಅಧ್ಯಕ್ಷರಾಗಿದ ಶ್ರೀ ಜೆ. ಲಿಂಗಯ್ಯ ನವರು ಸಹಾಯಮಾಡಿದರು. ದೇವಸ್ಥಾನದ ಜೀರ್ಣೋದ್ಧಾರಕ್ಕೆ ಹತ್ತು ಸಾವಿರ ರೂಪಾಯಿಯನ್ನು ಸರ್ಕಾರದಿಂದ ಧನ ಸಹಾಯ ಪಡೆದೆವು. ನಾನು ಆರು ವರ್ಷ ಕನ್ವೀನರಾಗಿ ಸೇವೆ ಸಲ್ಲಿಸಿದೆ.

ಆಗಲೇ ಮುಜರಾಯಿ ತಹಶೀಲ್ದಾರಾಗಿದ್ದ ಶ್ರೀ ನಾಗರಾಜ್ ಅವರ ಸಂಗಡ ಅನೇಕ ದೇವಸ್ಥಾನಗಳಿಗೆ ಭೇಟಿ ಕೊಡುವ ಅವಕಾಶ ದೊರೆಯಿತು. ಲಾಲ್‌ದಾಸ್ ವೆಂಕಟರಮಣಸ್ವಾಮಿ ದೇವಸ್ಥಾನದ ಕನ್ವೀನರ್ ಟ್ರಸ್ಟಿ ಆಗಿ ನೇಮಕ ಮಾಡಿದರು. ಬಹಳ ಹಳೆಯ ದೇವಸ್ಥಾನ ಅದು. ಅನೇಕ ಕಾರ್ಯಕ್ರಮಗಳನ್ನೇರ್ಪಡಿಸಿ ಭಕ್ತಾದಿ

ಗಳಿಂದ ಸೇವಾ ಕಾರ್ಯಕ್ಕೆ ಅಣಿಗೊಳಿಸಲಾಯಿತು. ಆದರೆ ನಾಸಿದ್ದ ಸ್ಥಳದಿಂದ ಅದು ದೂರದಲ್ಲಿದ್ದುದರಿಂದ ಹೆಚ್ಚು ಕೆಲಸ ಮಾಡಲಾಗದೆ ಬರಿ ಧರ್ಮದರ್ಶಿ ಯಾಗಿಯೇ ಉಳಿದೆ.

ಬೆಂಗಳೂರಿಗೆ ಯಾರೇ ಪ್ರಮುಖರು ಬರಲಿ ಮೈಸೂರು ಬ್ಯಾಂಕ್ ಸರ್ಕಲ್ ನಲ್ಲಿರುವ ಶ್ರೀ ಆಂಜನೇಯಸ್ವಾಮಿ ದೇವರ ದರ್ಶನ ಪಡೆಯದೆ ಹೋಗುವ ಹಾಗಿಲ್ಲ. ಹಿಂದೆ ಅದೇ ಬೆಂಗಳೂರು ಪೇಟೆ ಬಾಗಿಲು. ಅಲ್ಲಿಂದಲೇ ಯಾವ ಮೆರವಣಿಗೆಯಾಗಲಿ ಆರಂಭ. ಈಗಲೂ ಅದು ಕೆಲಮಟ್ಟಿಗೆ ನಡೆದುಕೊಂಡು ಬರುತ್ತಿದೆ. ಈಗ ಅದು ಸ್ವಲ್ಪ ಬೇರೆ ರೂಪಕ್ಕೆ ತಿರುಗಿದೆ ಕೂಡ, ವಿದ್ಯಾರ್ಥಿಗಳು, ಚಳುವಳಿಗಾರರು ಮುಷ್ಕರ ಹೂಡಬೇಕಾದರೆ ಅಲ್ಲಿಂದಲೇ ಆರಂಭಿಸುತ್ತಾರೆ. ಕಾಲ ಸ್ಥಿತಿಯಲ್ಲಾದ ಬದಲಾವಣೆ ಇದು ! ಆಂಜನೇಯಸ್ವಾಮಿ ದೇವಸ್ಥಾನವನ್ನು ಯಲಹಂಕ ಬಾಗಿಲು ಎಂದೂ ಹೇಳುತ್ತಾರೆ. ಅನೇಕ ಹಿರಿಯರು ಈ ದೇವಸ್ಥಾನದ ಅಭಿವೃದ್ಧಿಗಾಗಿ ದುಡಿದಿದ್ದಾರೆ. ಮುಜರಾಯಿ ತಹಶೀಲ್ದಾರ್ ಶ್ರೀ ನಾಗರಾಜುರವರು ಈ ದೇವಸ್ಥಾನಕ್ಕೆ ಟ್ರಸ್ಟಿ ಆಗುವುದಕ್ಕೆ ಹೇಳಿದರು. ನಾನು ಒಪ್ಪಿಗೆ ಕೊಟ್ಟ ಹದಿನೈದು ದಿನಗಳಲ್ಲಿ ಡೆಪ್ಯೂಟಿ ಕಮಿಶನರ ಒಪ್ಪಿಗೆ ಪತ್ರ ತಂದುಕೊಟ್ಟರು. ಐದಾರು ವರ್ಷಗಳಿಂದ ಕೈಲಾದ ಸಹಾಯ ಮಾಡುತ್ತಿದ್ದೇನೆ. ಇದೇ ರೀತಿ ಮಲ್ಲೇಶ್ವರದ ಕಾಡು ಮಲ್ಲೇಶ್ವರಗುಡಿ, ಶ್ರೀಕೃಷ್ಣದೇವರ ಗುಡಿಗಳಲ್ಲಿ ಧರ್ಮದರ್ಶಿಯಾಗಿ ಕೆಲಸ ಮಾಡುವ ಅವಕಾಶವೂ ಸಿಕ್ಕಿತು.

ಆದಿ ಚುಂಚನಗಿರಿ ಮಠದ ಸ್ವಾಮಿಗಳಾದ ಶ್ರೀ ಬಾಲಗಂಗಾಧರನಾಥ ಸ್ವಾಮಿ ಗಳು ಬೆಂಗಳೂರಿನಲ್ಲಿ ಎರಡು ತಿಂಗಳು ಬಿಡಾರ ಮಾಡಿದ್ದರು. ಆಗ ಮಲ್ಲೇಶ್ವರಕ್ಕೂ ಕರೆಯಿಸುವ ಅವಕಾಶ ಸಿಕ್ಕಿತು. ಶ್ರೀರಾಮ ಮಂದಿರದಲ್ಲಿ ಭಾರಿ ಸಭೆಯ ಏರ್ಪಾಟು ಮಾಡಲಾಗಿತ್ತು. ಶ್ರೀಮಠದ ಬೆಂಗಳೂರು ಶಾಖೆಯ ಸಮಿತಿಯ ಸದಸ್ಯನಾಗುವ ಭಾಗ್ಯ ನನ್ನದಾಯಿತು. ಆದಿ ಚುಂಚನಗಿರಿ ವಿದ್ಯಾಕ್ಷೇತ್ರವೂ ಹೌದು. ಅಲ್ಲಿನ ಒಬ್ಬ ವಿದ್ಯಾರ್ಥಿಗೆ ಸರ್ವವಿಧದ ಸಹಾಯ ಮಾಡಲು ವೇತನ ನೀಡುವ ಕೆಲಸವನ್ನು ನಮ್ಮದೇ ಆದ ಜಯಶ್ರೀ ಟ್ರಸ್ಟಿನ (ಈ ಲೇಖನದ ಕೊನೆಯಲ್ಲಿ ಟ್ರಸ್ಟಿನ ಬಗ್ಗೆ ಹೇಳಿ ದ್ದೇನೆ) ಮೂಲಕ ಮಾಡಲಾಯಿತು.

## ಶ್ರೀರಾಮ ಕೋ–ಆಪರೇಟೀವ್ ಬ್ಯಾಂಕ್‌ನ ಸ್ಥಾಪನೆ

ಶ್ರೀರಾಮ ಕೋ ಆಪರೇಟಿವ್ ಬ್ಯಾಂಕ್ ಸ್ಥಾಪಿತವಾದದ್ದು ಗಣೇಶ ಚೌತಿ ಯಂದು. ಎಲ್ಲಾ ಸಹಕಾರ ಸಂಸ್ಥೆಗಳಂತೆ ಇದು ಹುಟ್ಟಿದ್ದಲ್ಲ. ಆಗಿನ ಕಾಲದಲ್ಲಿ ಸಾಮಾನ್ಯ ಜನರಿಗೆ, ಅದರಲ್ಲೂ ಬಡಜನರಿಗೆ ಸಹಕಾರ ಸಂಸ್ಥೆ ಬೇಕಾಗಿಯೂ ಇರ ಲಿಲ್ಲ. ಅವರಿಗೆ ಗೊತ್ತಿರಲಿಲ್ಲ. ಆಗ ಬ್ಯಾಂಕು ಎಂದರೆ ಭಯವೇ ಆಗುತ್ತಿತ್ತು. ತೆಂಗಿನ ಮರದ ರಸ್ತೆಯ ಶ್ರೀರಾಮ ಮಂದಿರದ ಬೆಳವಣಿಗೆಗಾಗಿ ಸದಸ್ಯತನಕ್ಕಾಗಿ,

ಮನೆ-ಮನೆ, ಗುಡಿಸಲು-ಗುಡಿಸಲುಗಳೂ ಹಗಲು ರಾತ್ರಿ ಗುಂಪಾಗಿ, ಶ್ರೀಯುತರುಗಳಾದ ಹನುಮಂತಪ್ಪ, ಕಾಳರಸಯ್ಯನವರು, ಲಿಂಗಯ್ಯನವರು, ಬೆಳ್ಳಿಗೆರೆ ಕೆಂಪಯ್ಯನವರು, ಎಂ. ಕೆ. ತಿಮ್ಮಯ್ಯ, ಚಿಕ್ಕಚೆನ್ನಯ್ಯ, ಪುಟ್ಟಯ್ಯ, ಎಸ್. ಸಂಜಪ್ಪ, ಎಚ್. ವೆಂಕಟೇಶಯ್ಯನವರು (ಈಚೆಗೆ ದಿವಂಗತರಾದರು) ಹಣ ಸಂಗ್ರಹಕ್ಕಾಗಿ ಅಲೆಯುತ್ತಿದ್ದೆವು. ಶ್ರೀರಾಮ ಮಂದಿರ 1928-29ರಲ್ಲಿ ಪ್ರಾರಂಭವಾದರೂ ಮುಂದುವರಿದಿರಲಿಲ್ಲ. ಮನಸ್ಸಿನ ಶಾಂತಿಗಾಗಿ, ಹಬ್ಬದ ದಿನಗಳಲ್ಲಿ ಒಂದೆಡೆ ಸೇರುವುದಕ್ಕಾಗಿ, ಭಜನೆಗಾಗಿ, ದೇವರನಾಮ ಸ್ಮರಣೆ ಮಾಡುವುದಕ್ಕಾಗಿ, ಹರಿಕಥೆ ಮತ್ತು ಕೀರ್ತನೆಗಳನ್ನು ಕೇಳಲು ಆಗಿನ ಬಡಜನರ ನಾಯಕರಂತಿದ್ದ ನಮ್ಮ ತಂದೆ ಶ್ರೀ ಹೊನ್ನಪ್ಪನವರು 1928ರಲ್ಲಿ ಶ್ರೀರಾಮ ಮಂದಿರ ಪ್ರಾರಂಭಿಸಿದ್ದರು.

ಇದರ ಅಭಿವೃದ್ಧಿಗೆ ಹಣ ಸಂಗ್ರಹಣೆ ಮಾಡುತ್ತಿದ್ದರು. ಕೆಲವರು ಈ ದಿವಸ ಚೀಟಿ ದಿನ, ಸಂಜೆ ಬೇಗನೆ ಮನೆಗೆ ಹೋಗಬೇಕು ಎಂದು ಏನಾದರೊಂದು ನೆಪ ಹೇಳಿ ಹೊರಟು ಹೋಗುತ್ತಿದ್ದರು. ಆಗ ತಿಳಿಯಿತು. ಈ ಜನಗಳಲ್ಲಿ ಸಹಕಾರ ಸಂಘ ಬ್ಯಾಂಕುಗಳು ಇಲ್ಲದೆ ಇರುವುದರಿಂದ ಅಲ್ಲಲ್ಲೇ ಚಿಟ್‌ಫಂಡ್ ನಡೆಸಿಕೊಂಡು ಬರುತ್ತಿದ್ದಾರೆ. ಹೆಚ್ಚು ಬಡ್ಡಿ ಕೊಟ್ಟು ಸಾಲವನ್ನು ಪಡೆಯುತ್ತಿದ್ದಾರೆ. ಜೊತೆಗೆ ತಾಪತ್ರಯಗಳಿಗಾಗಿ ಖಾಸಗಿ ಲೇವಾದೇವಿಗಾರರ ಬಳಿ ಸಾಲಮಾಡಿ ಶೇಕಡ 20-25 ರಂತೆ ಬಡ್ಡಿತೆತ್ತು ತಾಪತ್ರಯ ಕಳೆದುಕೊಳ್ಳುವುದರೊಳಗಾಗಿ ಆಸ್ತಿಪಾಸ್ತಿಯನ್ನೇ ಕಳೆದುಕೊಳ್ಳಬೇಕಿತ್ತು. ಅನೇಕರು ಅನಕ್ಷರಸ್ಥರು. ಸಹಕಾರಿ ಬ್ಯಾಂಕುಗಳಲ್ಲಿ ಸೇರುತ್ತಿದ್ದವರು ಅತಿ ವಿರಳ. ಇಂತಹ ಜನಗಳಿಗಾಗಿ ಸಹಕಾರ ಬ್ಯಾಂಕನ್ನು ಶ್ರೀರಾಮ ಮಂದಿರದಲ್ಲಿ ಪ್ರಾರಂಭಿಸಲು ಯೋಚಿಸಿ ಅನೇಕ ಹಿರಿಯರ ಸಲಹೆ ಪಡೆಯಲಾಯಿತು. ಎಲ್ಲರೂ ಒಮ್ಮತದಿಂದ ಮಾಡಬೇಕೆಂದು ಒಪ್ಪಿಕೊಂಡರು.

ಅಂದು ಸಿದ್ಧವನಹಳ್ಳಿ ಕೃಷ್ಣಶರ್ಮರನ್ನು ಭೇಟಿಯಾದೆ. ಅವರ ಸಲಹೆ ಕೇಳಿದೆ. ಬಡಜನರಿಗಾಗಿ ಸಹಕಾರ ಸಂಸ್ಥೆ ಪ್ರಾರಂಭಿಸಬೇಕೆಂದು ಕೇಳಿದ ಕೂಡಲೇ ಅವರಲ್ಲಿದ್ದ ಟೈಪ್‌ರೈಟರ್ ತಂದು ಒಂದೇ ಬೆರಳಿನಲ್ಲಿ ಟೈಪ್‌ಮಾಡಿ ರಿಜಿಸ್ಟ್ರಾರ್‌ರವರಿಗೆ ಅರ್ಜಿ ತಯಾರಿಸಿ ನನ್ನನ್ನು ರುಜು ಮಾಡು ಎಂದು ಹೇಳಿ ಅರ್ಜಿ ಕೈಗೆ ಕೊಟ್ಟರು. ಆಗ ಶ್ರೀ ಮರುದೇವೇಗೌಡರು ರಿಜಿಸ್ಟ್ರಾರ್ ಆಫ್ ಕೋ ಆಪರೇಟೀವ್ ಸೊಸೈಟಿ ಆಗಿದ್ದರು. ಅರ್ಜಿಯನ್ನು ಖುದ್ದಾಗಿ ಕೊಟ್ಟಾಗ "ಏನಪ್ಪಾ, ನೀವು ಬ್ಯಾಂಕನ್ನು ನಡೆಸುವಿರಾ ? ಈಗಾಗಲೇ ಮಲ್ಲೇಶ್ವರಂ, ಶೇಷಾದ್ರಿಪುರಂನಲ್ಲಿ ಎರಡು ಸಹಕಾರಿ ಸಂಸ್ಥೆಗಳನ್ನು ಮುಚ್ಚಲಾಗಿದೆ. ಇಂತಹ ಸಂಸ್ಥೆಗಳನ್ನು ನಡೆಸುವುದು ಕಷ್ಟ. ಈಗ ನಡೆಸುತ್ತಿರುವ ಸಂಸ್ಥೆಗಳನ್ನೆಲ್ಲ ಚೆನ್ನಾಗಿ ನಡೆಸಿಕೊಂಡು ಬನ್ನಿ" ಎಂದು ಹೇಳಿ ವಾಪಸ್ಸು ಕಳಿಸಿದರು. ಶರ್ಮಾಜಿಯವರಲ್ಲಿ ಬಂದು ಹೇಳಿದೆ. ಅವರೇ ಮರುದೇವೇಗೌಡರನ್ನು ಭೇಟಿ ಮಾಡಿ "ನಾನು ಈ ಶ್ರೀರಾಮ ಮಂದಿರದವರು ಪ್ರಾರಂಭಿಸುವ ಬ್ಯಾಂಕಿಗೆ ಬೆಂಬಲವಾಗಿ ನಿಂತಿದ್ದೇನೆ. ಸಂಸ್ಥೆಯನ್ನು ರಿಜಿಸ್ಟರ್ ಮಾಡಿಸಿ ಕೊಡಿ"

ಎಂದು ಹೇಳಿ ಒಪ್ಪಿದರು. ಧಾರ್ಮಿಕ ಸಂಸ್ಥೆಯಾದ ಶ್ರೀರಾಮ ಮಂದಿರದಲ್ಲಿ ಸಹಕಾರಿ ಬ್ಯಾಂಕನ್ನು ಪ್ರಾರಂಭಿಸಬಾರದು. ಸಾರ್ವಜನಿಕರೂ, ಎಲ್ಲಾ ಮತೀಯರೂ ಬರುವಂತಹ ಸ್ಥಳದಲ್ಲಿ ಬ್ಯಾಂಕ್ ಪ್ರಾರಂಭಿಸಬೇಕೆಂದೂ ಸಹಕಾರಿ ಇನ್ಸ್ ಪೆಕ್ಟರ್‌ರವರಿಂದ ಕಾಗದ ಬಂತು. ಶ್ರೀರಾಮಮಂದಿರ ಸಾರ್ವಜನಿಕ ಸಂಸ್ಥೆ. ಯಾವ ಮತೀಯರಾದರೂ ಬರಬಹುದು. ಎಲ್ಲ ಮತೀಯರನ್ನು ಸಹಕಾರಿ ಸಂಘಕ್ಕೆ ಸದಸ್ಯರನ್ನಾಗಿ ತೆಗೆದುಕೊಳ್ಳುತ್ತೇವೆಂದು ಹೇಳಿದಮೇಲೆ, ರಿಜಿಸ್ಟ್ರಾರ್‌ರವರು ಪ್ರಾರಂಭಿಸಲು ಒಪ್ಪಿಗೆ ನೀಡಿದರು. ಕಡೆಯ ಪಕ್ಷ 500 ಜನ ಸದಸ್ಯರಾಗುವವರ ವಿಳಾಸ, ಸಹಿ, ಇರುವ ಅರ್ಜಿ ಕೇಳಿದರು. ಶ್ರೀರಾಮ ಮಂದಿರಕ್ಕೆ ಚಂದಾ ಕೊಡುತ್ತಿದ್ದುದರಿಂದ ಸಹಕಾರ ಸಂಸ್ಥೆ ಬೇಕು ಎನ್ನುವ ಅರ್ಜಿಗೆ ಸಹಿ ಹಾಕಿಸಲು ಪ್ರಯತ್ನಪಟ್ಟೆವು. ಅನೇಕರು ಸಹಿಹಾಕಲು ಹಿಂಜರಿದರು. ಕಾರಣ ತಮ್ಮಲ್ಲಿ ಹಣವಿಲ್ಲವೆಂದೂ ಬಡವರೆಂದೂ, ಹಣವಿಲ್ಲದ ನಮಗೆ ಬ್ಯಾಂಕು ಏಕೆ ? ಎಂದು ನಿರಾಕರಿಸಿದರು. ಅಂತೂ ಹೇಗೋ ಕಾಡಿ, ಬೇಡಿ, 500 ಸಹಿಗಳನ್ನು ಶೇಖರಿಸಿ ತಾ|| 1-6-1953 ರಂದು ಸಂಸ್ಥೆ ರಿಜಿಸ್ಟರ್ ಮಾಡಿಸಿದೆವು. ಅದೇ ವರುಷ ಗಣೇಶ ಚೌತಿಯ ದಿವಸ ಮೊದಲನೆ ಸಭೆಯನ್ನು ಕರೆದು ಬ್ಯಾಂಕನ್ನು ಪ್ರಾರಂಭಿಸಲಾಯಿತು.

ಪ್ರಾರಂಭದಲ್ಲಿ 25ರೂನ ನಾಲ್ಕುಸಾವಿರ ಷೇರುಗಳಂತೆ ಸುಮಾರು 1 ಲಕ್ಷ ರೂ. ಬಂಡವಾಳ ಹೂಡಿಕೆ. ಮೊದಲನೆ ವರ್ಷವೇ 13,000 ರೂಗಳು ವಸೂಲಾಯಿತು. ಅನೇಕರಿಗೆ ಒಂದು ರೀತಿಯ ಸಂತೋಷ. ಇನ್ನು ಕೆಲವರಿಗೆ ಹಣ ಏನಾಗುತ್ತೋ ಎಂಬ ಅನುಮಾನ. ಹೆಬ್ಬೆಟ್ಟಿನ ಗುರ್ತಿನವರೇ ಜಾಸ್ತಿ. ರುಜು ಹಾಕುವವನೇ ವಿದ್ಯಾವಂತ. ಸಹಕಾರವೂ ತಿಳಿಯದು. ಬ್ಯಾಂಕು ಎಂದರೆ ಮೊದಲೇ ಗೊತ್ತಿಲ್ಲ. ಇಂತಹ ಸದಸ್ಯರಿಂದೊಡಗೂಡಿ ಪ್ರಾರಂಭವಾಯಿತು, ಶ್ರೀರಾಮ ಕೋ ಆಪರೇಟಿವ್ ಬ್ಯಾಂಕ್.

ಸ್ಥಳ ಶ್ರೀರಾಮ ಮಂದಿರ. ಶ್ರೀರಾಮ ಮಂದಿರದ ಒಂದು ಮೂಲೆಯೇ ಬ್ಯಾಂಕಿನ ಕಛೇರಿ. ರಾಮಮಂದಿರದ ಅಲ್ಮೇರಾ, ಬ್ಯಾಂಕಿನ ನೆಲದ ಮೇಲೆ ಹಾಕಿದ ಜಮಖಾನವೇ ಕುರ್ಚಿ, ಬೆಂಚು. ಬೆಳಿಗ್ಗೆ, ಸಂಜೆ ವೇಳೆ ಎಲ್ಲರೂ ಸ್ವಯಂ ಸೇವಕರಾಗಿ ಕೆಲಸ ಮಾಡಲು ಒಪ್ಪಿದರು. ಶ್ರೀಯುತರಾದ ಸಿದ್ದವನಹಳ್ಳಿ ಕೃಷ್ಣಶರ್ಮ, ಹೊ. ಶ್ರೀನಿವಾಸಯ್ಯ, ಚಿಕ್ಕಚನ್ನಯ್ಯ, ಹನುಮಂತಪ್ಪ, ಕಾಳರಸಯ್ಯ, ಕೆ. ಸಿ. ಚನ್ನಪ್ಪಲಿಂಗ, ಪಿ. ಪುಟ್ಟಯ್ಯ, ಎಚ್. ವೆಂಕಟೇಶಯ್ಯ, ಕೆ. ಕೆಂಪಯ್ಯ, ಲಿಂಗಯ್ಯ, ಎನ್. ನಂಜಪ್ಪ, ಎಂ. ದೇವಣ್ಣ, ಕೆ. ಗಿರಿಯಪ್ಪ ಮತ್ತು ಬಿ. ಆರ್. ಕೃಷ್ಣಮೂರ್ತಿ ಈ ಹದಿನೈದು ಜನರ ಸಹಿಯೊಡನೆ ರಿಜಿಸ್ಟರ್ ಆಗಿ ಅಂಗೀಕೃತವಾಯಿತು. ಮೊದಲನೇ ವರ್ಷವೇ 294 ಸದಸ್ಯರುಗಳಿಂದ ಪ್ರಾರಂಭವಾಯಿತು. 25 ವರ್ಷಗಳಲ್ಲಿ 1383 ಸದಸ್ಯರಿಂದ ಕೂಡಿದೆ. ಪ್ರಾರಂಭದಲ್ಲಿ ಸದಸ್ಯತನಕ್ಕೆ ಹೆಚ್ಚು ಬೇಡಿಕೆ ಇಲ್ಲದಿದ್ದರೂ ಈಗ ಸದಸ್ಯತ್ವ ಸಿಗುವುದೇ ಕಷ್ಟವಾಗಿದೆ.

ಸದಸ್ಯರು ಎಲ್ಲಾ ವರ್ಗಕ್ಕೆ ಸೇರಿದವರಾಗಿದ್ದಾರೆ. ಹೆಚ್ಚಾಗಿ ಬಡವರು. ಕಾರ್ಖಾನೆಯಲ್ಲಿ, ಕಛೇರಿಯಲ್ಲಿ, ಅಂಗಡಿಯಲ್ಲಿ ಕೆಲಸಮಾಡುವವರು ಅನೇಕರು. ಹಾಲು ಮಾರುವವರು, ಕೂಲಿಗಾರರೂ ಇದ್ದಾರೆ. ಇವರ ಜೊತೆಗೆ ಸಂಸ್ಥೆಯ ಅಭಿಮಾನಿಗಳಾಗಿ ಇಂಜಿನಿಯರ್, ದೊಡ್ಡ ಅಧಿಕಾರಿಗಳು ಕೆಲವರು. ಸದಸ್ಯತನದಲ್ಲಿ ಯಾವ ಭೇದಭಾವವೂ ಇಲ್ಲದೆ ಎಲ್ಲರೂ ಒಂದೇ ಎಂಬ ಸದುದ್ದೇಶದಿಂದ ನಡೆದು ಬರುತ್ತಿದೆ.

"ಒಂದು ಸಹಕಾರಿ ಸಂಸ್ಥೆಯಲ್ಲಿ ಒಂದು ಸಾವಿರಕ್ಕೂ ಹೆಚ್ಚು ಜನ ಇರಬಾರದು. ಹಾಗೇನಾದರೂ ಹೆಚ್ಚು ಒತ್ತಡ ಬಂದರೆ ಬೇರೊಂದು ಸಂಸ್ಥೆಯನ್ನು ಕಟ್ಟಬೇಕು." ಎನ್ನುತ್ತಿದ್ದರು ಶ್ರೀ ಶರ್ಮಾಜಿಯವರು. ರಿಜಿಸ್ಟ್ರಾರ್ ಆಗಿದ್ದ ದಿವಂಗತ ಭರಣಯ್ಯನವರು ನಮ್ಮ ಬ್ಯಾಂಕಿನ ವ್ಯವಹಾರ ಮೆಚ್ಚಿದರು. ಇಂತಹ ಸಹಕಾರ ಸಂಸ್ಥೆಗಳನ್ನು ಎಲ್ಲಾ ಮೊಹಲ್ಲಾದಲ್ಲೂ ಪ್ರಾರಂಭಿಸಿ ಎಂದು ಕಾಗದ ಬರೆದರು. ಇಲ್ಲಿ ಸದಸ್ಯರಾಗಿ, ಸಮಿತಿಯ ಸದಸ್ಯರಾಗಿ, ಅಧಿಕಾರ ವರ್ಗದವರಾಗಿ, ಕಛೇರಿಯ ಕೆಲಸಗಾರರಾಗಿ, ಸಹಕಾರಿ ಸಂಸ್ಥೆಗಳಲ್ಲಿ ಕೆಲಸಮಾಡಲು ಅನುಭವವನ್ನು ಪಡೆದವರು, ಅನೇಕ ಸಂಸ್ಥೆಗಳನ್ನು ಪ್ರಾರಂಭಿಸಿದ್ದಾರೆ.

ಬ್ಯಾಂಕಿನ ಕಾರ್ಯ ನಿರ್ವಾಹಕ ಸಮಿತಿ ನಡೆಯುತ್ತಿದ್ದುದೇ ಒಂದು ವಿಚಿತ್ರ. ಸಮಿತಿಯ ಅರ್ಧಜನ ಸದಸ್ಯರಿಗೆ ಸಹಿ ಹಾಕುವುದನ್ನು ಬಿಟ್ಟರೆ, ಬೇರೆ ಏನನ್ನೂ ಓದುವುದೇ ಕಷ್ಟ. ಆದರೆ ವ್ಯವಹಾರದಲ್ಲಿ ಬಲು ಬುದ್ಧಿವಂತರು. ಶ್ರೀ ಶರ್ಮಾಜಿಯವರು ಅಧ್ಯಕ್ಷರಾಗಿ, ಯಾವುದಾದರೂ ತೀರ್ಮಾನ ತೆಗೆದುಕೊಳ್ಳಬೇಕು ಎಂದರೆ ವ್ಯವಹಾರ ವಿದ್ಯಾವಂತರಿಗೆ ಪ್ರಾಧಾನ್ಯ ಜಾಸ್ತಿ. ಅವರು ಹೇಳುತ್ತಿದ್ದ ಹಾಗೆ ಈ ಹೆಬ್ಬೆಟ್ಟಿನ ಗುರುತು ಯಾವಾಗಲೂ ಸ್ಥಿಮಿತವಾಗಿರುವಂತೆ ಅವರ ಬುದ್ಧಿಯೂ ಸ್ಥಿಮಿತ. ಅಕ್ಷರಸ್ಥರ ಸಹಿ ಕಾಲ ಕಳೆದಂತೆ ಬದಲಾವಣೆ ಆಗುವಂತೆ ಅವರ ಬುದ್ಧಿಯೂ ಬದಲಾವಣೆ ಆಗುತ್ತದೆ. ಇದು ಸತ್ಯ ಅನ್ನಿಸಿತು. ಅದಕ್ಕೆ ಅನೇಕ ಉದಾಹರಣೆಗಳಿವೆ. ಸಮಿತಿಯಲ್ಲಿ ಎಲ್ಲರ ಮಾತಿಗೆ ಒಂದೇ ಬೆಲೆ. ಎಲ್ಲರೂ ಚರ್ಚೆಯಲ್ಲಿ ಭಾಗ ವಹಿಸಬಹುದು. ಅಭಿಪ್ರಾಯ ಕೊಡಬಹುದು. ಇದು ಶರ್ಮಾಜಿಯವರ ಸಭೆ ನಡೆಸುತ್ತಿದ್ದ ರೀತಿ.

ಮೊದಲನೇ ಸಭೆಯಲ್ಲಿ ನನ್ನ ಮಿತ್ರರು ಕಾಫಿ ತರಿಸೋಣವೆಂದು ಅಧ್ಯಕ್ಷರನ್ನು ಕೇಳಿದರು. ಶರ್ಮಾಜಿ ಆಗಬಹುದೆಂದು ಹೇಳಿ ಐದು ರೂಪಾಯಿಗಳನ್ನು ಕೊಟ್ಟರು. ಎಲ್ಲರಿಗೂ ಆಶ್ಚರ್ಯ. ಇದೇನು ಶರ್ಮಾಜಿ ಸ್ವಂತ ಹಣ ಕೊಟ್ಟರಲ್ಲಾ ಎಂದು. ಆದರೂ ಕೇಳಲು ಅಂಜಿಕೆ. ಅದನ್ನು ತಿಳಿದ ಶರ್ಮಾಜಿಯವರು "ಇಲ್ಲಿ ನಾವು ಕುಳಿತಿರುವುದು ಧರ್ಮದರ್ಶಿಗಳಾಗಿ, ಸದಸ್ಯರು ಕಷ್ಟಪಟ್ಟು ಕಣ್ಣೀರಿನಿಂದ ಬಡ್ಡಿಯನ್ನು ತಂದು ಕೊಡುತ್ತಾರೆ. ಈ ಹಣದಿಂದ ನಾವು ಕಾಫಿ ಕುಡಿಯಬೇಕೆ? ಚಪಲವಿದ್ದರೆ ನಮ್ಮ ಸ್ವಂತ ಹಣದಿಂದ ಕುಡಿಯೋಣ. ಸಭೆಯನ್ನು ಎಲ್ಲರಿಗೂ ಅನುಕೂಲವಾಗುವಂತೆ ರಾತ್ರಿ ಎಂಟು ಗಂಟೆಯ ಮೇಲೆ ಕರೆಯೋಣ. ಎಲ್ಲರೂ ಊಟಮಾಡಿ

ಮುಗಿಸಿರುತ್ತಾರೆ. ಆಗ ಕಾಫಿ ಬೇಕೆನಿಸುವುದಿಲ್ಲ ಎಂದರು. ಇದು ಈಗಲೂ ನಡೆದು ಕೊಂಡು ಬರುತ್ತಿದೆ.

ಭಾನುವಾರ ಎಲ್ಲರಿಗೂ ರಜ. ಆದರೆ ಎಲ್ಲಾ ಆಫೀಸುಗಳಿಗೆ ರಜ. ಇದರಿಂದ ವ್ಯವಹಾರ ಹೇಗೆ ನಡೆಸುವುದು. ಶನಿವಾರ ರಾಮಮಂದಿರದಲ್ಲಿ ಭಜನೆ. ಬ್ಯಾಂಕು ನಡೆಸಲು ಆಗುವುದಿಲ್ಲ. ಆದ್ದರಿಂದ ಶನಿವಾರ ಬ್ಯಾಂಕಿಗೆ ರಜಾಕೊಟ್ಟು ಭಾನುವಾರ ಕೆಲಸದ ದಿನವನ್ನಾಗಿ ಮಾಡಲಾಯಿತು. ಬ್ಯಾಂಕಿನ ಸದಸ್ಯರಿಗೆ ಸರಿಯಾಗಿ ಕನ್ನಡವೇ ಓದಲು ಬರೆಯಲು ಬಾರದೆ ಇರುವಾಗ ಇನ್ನು ಇಂಗ್ಲೀಷಿನಲ್ಲಿ ವ್ಯವಹಾರವಾದರೂ ಏಕೆ ? ಬ್ಯಾಂಕಿನ ಎಲ್ಲಾ ವ್ಯವಹಾರವನ್ನು ಕನ್ನಡ ಮಾಧ್ಯಮದಲ್ಲೇ ಪ್ರಾರಂಭಮಾಡ ಲಾಯಿತು. ಒಂದುಸಾರಿ ರಿಸರ್ವ್ ಬ್ಯಾಂಕಿನವರು ಇಂಗ್ಲೀಷಿನಲ್ಲೇ ವ್ಯವಹರಿಸ ಬೇಕು ಎಂದು ಹೇಳಿದಾಗ ಅದಕ್ಕೆ ಶರ್ಮಾಜಿಯವರು "ಕನ್ನಡದಲ್ಲೇ ಮಾಡೋದು" ಎಂದು ಘರ್ಜಿಸಲು ಸುಮ್ಮನಾದರು.

ನಮ್ಮ ಬ್ಯಾಂಕಿನ ಸಮಿತಿಯ ಸದಸ್ಯರು ಚುನಾವಣೆ ಆಗಿರುವುದಕ್ಕಿಂತ ಆರಿಸಿ ಕೊಂಡವರೇ ಜಾಸ್ತಿ. ಅಂದರೆ ಸದಸ್ಯರಿರುವ ಒಂದೊಂದು ಪ್ರದೇಶದಿಂದ ಒಬ್ಬೊಬ್ಬ ಸದಸ್ಯನನ್ನು ತೆಗೆದುಕೊಂಡು ವರ್ಷವರ್ಷವೂ ಹೊಸ ಸದಸ್ಯರನ್ನು ಆರಿಸಿಕೊಳ್ಳು ತ್ತಿದ್ದುದರಿಂದ ಅನೇಕ ವರ್ಷ ಚುನಾವಣೆಯೇ ನಡೆಯಲಿಲ್ಲ. ಒಬ್ಬ ಬಡ ಜವಾನ ಅಥವಾ ಹಾಲುಮಾರುವವನು ಒಂದು ಸಂಸ್ಥೆಯಲ್ಲಿ ಒಬ್ಬ ಡೈರೆಕ್ಟರ್ ಅನ್ನಿಸಿಕೊಳ್ಳು ವುದು ಎಲ್ಲಿ ಸಾಧ್ಯ? ಈ ಯಜಮಾನಿಕೆ ನಿಜವಾಗಿಯೂ ಅವನಿಗೆ ಎಲ್ಲಿ ಸಿಕ್ಕುವುದು. ಇಂತಹ ಹೆಮ್ಮೆಪಡುವ ಸಂಸ್ಥೆಯಲ್ಲಿ ಪದವಿ ಪಡೆಯಲು ಗೌರವಸ್ಥಾನ ಪಡೆಯಲು ಎಲ್ಲರಿಗೂ ಸಮಾನ ಅವಕಾಶ ಕೊಟ್ಟಿದ್ದು ಎಂದರೆ ಈ ಬ್ಯಾಂಕು.

ಹೆಬ್ಬೆಟ್ಟು ಒತ್ತುವ ಸದಸ್ಯರಿಗೂ ಸೇವಿಂಗ್ಸ್ ಬ್ಯಾಂಕ್ ವ್ಯವಹಾರ ನಡೆಸುವ ಅವಕಾಶವಿದೆ. ಈ ಬ್ಯಾಂಕು ಪ್ರಾರಂಭವಾದ ವರ್ಷದಿಂದಲೂ ನಷ್ಟವನ್ನೇ ಕಾಣದೆ, ಮೊದಲನೇ ವರ್ಷವೇ 817 ರೂ. ಲಾಭ ಪಡೆಯಿತು. ಸರ್ಕಾರದಿಂದ ಸಹಾಯ ಅಥವಾ ಸಾಲ ಪಡೆದಿಲ್ಲ. ತನ್ನ ಕಾಲಮೇಲೆ ತಾನೇ ನಿಂತಿದೆ.

ಮೊದಲನೇ ವರ್ಷ ಒಂದು ಪರ್‌ಸೆಂಟ್ ಡಿವಿಡೆಂಡ್ ಕೊಡಲಾಗಿತ್ತು. ಈ ವರ್ಷ ಶೇ. 9 ರಂತೆ ಡಿವಿಡೆಂಡ್ ಕೊಡಲಾಗಿದೆ. ಈ ಬ್ಯಾಂಕನ್ನು ಯಾವಾಗಲೂ ಆಡಿಟ್ ವರದಿಯಲ್ಲಿ 'ಎ' ತರಗತಿ ಎಂದು ಪರಿಗಣಿಸಲಾಗಿದೆ.

ಸಾಲವನ್ನು ಕೊಡುವಾಗ ಅವರ ಬ್ಯಾಂಕಿನ ವ್ಯವಹಾರವೇ ಪ್ರಧಾನವಾಗಿತ್ತು. ಅವರ ಸಂಬಳ, ಸಾರಿಗೆ, ಆಸ್ತಿ ಅಲ್ಲ. ಒಂದು ಸಾರಿ ಒಬ್ಬ ಸದಸ್ಯ, ಸೌದೆ ಒಡೆದು ಸಂಪಾದನೆ ಮಾಡುತ್ತಿದ್ದ. ವ್ಯವಹಾರ ಬಹಳ ಚೆನ್ನಾಗಿತ್ತು. ಆತನಿಗೆ ಸಂಬಳ ವಿಲ್ಲವೆಂದು ಸಾಲಕ್ಕೆ ಜಾಮೀನುದಾರನನ್ನು ಕೇಳಿದರು. ಆತ "ನಾನು ಕೊಡಲಿ ಯನ್ನು ನನ್ನ ಭುಜದಮೇಲೆ ಹಾಕಿಕೊಂಡು ಬೆಳಿಗ್ಗೆ ಹೊರಟರೆ, ಸಾಯಂಕಾಲದೊಳಗೆ 20-30 ರೂ. ಸಂಪಾದಿಸುತ್ತೇನೆ. ಆಫೀಸಿನಲ್ಲಿ ಕೆಲಸಮಾಡುವ ಜವಾನ ತಿಂಗಳಿಗೆ

20-30 ರೂ ಸಂಪಾದಿಸುವುದಿಲ್ಲ. ನೀವು ಕೊಡುವ ಸಾಲವನ್ನು ನಾನು ಒಂದು ತಿಂಗಳಲ್ಲಿ ತೀರಿಸಿದರೆ ನಿಮ್ಮ ಸಂಬಳಗಾರ ಅದನ್ನು ವರ್ಷಗಟ್ಟಲೆ ತೀರಿಸುತ್ತಾನೆ. ನಮ್ಮ ಹಾಗೆ ವ್ಯವಹಾರ ಮಾಡುವ ಬಡಜನರಿಗೋ ಅಥವಾ ಆಫೀಸಿನಲ್ಲಿರೋ ಆಫೀಸರ್‌ಗಳಿಗೋ ಈ ಬ್ಯಾಂಕು? ಎಂದು ಕೇಳಿದ. ಆ ದಿನವೇ ಶರ್ಮಾಜಿ ಬ್ಯಾಂಕಿನ ವ್ಯವಹಾರ ಸುಸ್ತಿ ಇಲ್ಲದೆ ನಡೆಸಿಕೊಂಡು ಬಂದವರಿಗೆ ಜಾಮೀನನ್ನು ಕೇಳ ಬಾರದು ಎಂದು ಸಮಿತಿಯಲ್ಲಿ ತೀರ್ಮಾನ ತೆಗೆದುಕೊಂಡರು.

ಸಣ್ಣ ಉಳಿತಾಯ ಮಾಡಲು ಪ್ರಾವಿಡೆಂಟ್ ಫಂಡ್ 3 ವರ್ಷ, 5 ವರ್ಷ, 7 ವರ್ಷಗಳ ಸರ್ಟಿಫಿಕೇಟ್‌ಗಳೊಡನೆ 3,831 ರೂ ಗಳಿಂದ ಪ್ರಾರಂಭವಾಯಿತು.

ಬಡ ಜನಗಳೇ ಹೆಚ್ಚು ಸದಸ್ಯರಾಗಿರುವುದರಿಂದ ಖಾಯಂ ಠೇವಣಿ ಹೆಚ್ಚಿಗೆ ಕಾಣುವುದಿಲ್ಲ. ಆದರೂ ಮೊದಲನೆ ವರ್ಷವೇ 400ರೂ ನಿಂದ ಪ್ರಾರಂಭವಾಯಿತು. ಈ ಬ್ಯಾಂಕಿನ ಅನೇಕ ಸದಸ್ಯರು ಅವರವರ ಮನೆಗಳ ಸುತ್ತಲೂ ಇರುವ ಜನ ಗಳೊಡನೆ ಚೀಟಿ ಎಂಬ ಹೆಸರಿನಲ್ಲಿ ಒಟ್ಟಿಗೆ ಸೇರಿ ಒಬ್ಬರಿಂದೊಬ್ಬರಿಗೆ ಸಹಾಯ ವಾಗುವಂತೆ ಲೇವಾದೇವಿ ನಡೆಸುವ ಅಭ್ಯಾಸವಿದೆ. ಹಣ ಸಿಗುವುದಾದರೂ ಬಹಳ ಹೆಚ್ಚು ಸೋಡಿ ಬಿಡುತ್ತಾರೆ. ಈ ಚಿಟ್ ಫಂಡನ್ನು ಸಹಕಾರ ರೀತಿಯಲ್ಲಿ ಏಕೆ ನಡೆಸಬಾರದು ಎಂದು ಯೋಚಿಸಿ 1956ರಲ್ಲಿ ಪ್ರಾರಂಭಿಸಲಾಯಿತು. ಆ ವರ್ಷ 13 ಸಾವಿರ ರೂ. ನಿಂದ ಪ್ರಾರಂಭವಾಯಿತು. ಕರ್ಣಾಟಕದಲ್ಲಿ, ಸಹಕಾರ ಸಂಸ್ಥೆ ಗಳಲ್ಲಿ ಚಿಟ್‌ಫಂಡ್ ನಡೆಸುವುದರಲ್ಲಿ ಈ ಬ್ಯಾಂಕ್ ಮೊದಲನೆಯದು ಎಂದರೆ ತಪ್ಪಾಗದು.

ಸದಸ್ಯರು ಸತ್ತರೆ ಆ ಕುಟುಂಬದವರಿಗೆ ಬ್ಯಾಂಕಿನಿಂದ, ಬ್ಯಾಂಕಿನ ಸದಸ್ಯರಿಂದ ಸಹಾಯವಾಗುವಂತೆ ಒಂದು ಯೋಜನೆ ಹಾಕಿದೆವು. "ಮರಣೋತ್ತರ ಸಹಾಯ ನಿಧಿ" 1962ರಲ್ಲಿ ಪ್ರಾರಂಭವಾಯಿತು. ವಾರ್ಷಿಕ ಚಂದಾ ಒಂದು ರೂಪಾಯಿ ಯಂತೆ ಕೊಟ್ಟು ಲಾಭದಿಂದಲೂ ಸ್ವಲ್ಪ ಹಣಹಾಕಿ ಮರಣ ಹೊಂದಿದ ಕುಟುಂಬ ವರ್ಗದವರಿಗೆ ಮರಣ ಹೊಂದಿದ ದಿನವೇ 50 ರೂ. ನೀಡಿ ಹತ್ತು ದಿನಗಳೊಳಗಾಗಿ 150 ರೂ. ಕೊಡುವ ವ್ಯವಸ್ಥೆ ಮಾಡಿದೆವು. ಹೀಗೆ 200 ರೂಪಾಯಿ ಸಹಾಯ ಧನ ಪ್ರಾರಂಭವಾಗಿ ಇಂದು ಒಂದುಸಾವಿರ ರೂಪಾಯಿಗಳಷ್ಟು ಸಹಾಯ ಧನವನ್ನು ಕೊಡಲಾಗುತ್ತಿದೆ. ಇಂತಹ ನಿಧಿಯನ್ನು ಪ್ರಾರಂಭಮಾಡಿದ್ದು ಸಹಕಾರಿ ಸಂಸ್ಥೆ ಗಳಲ್ಲಿ ಇದೇ ಮೊದಲನೆಯದು ಎಂದು ತಿಳಿಸಲು ಸಂತೋಷವಾಗುತ್ತದೆ. ಪ್ರಾರಂಭ ದಲ್ಲಿ ಅನೇಕ ವಿದ್ಯಾವಂತರು ವಿರೋಧಿಸಿದರೂ ಈ ಯೋಜನೆಗೆ ಪ್ರೋತ್ಸಾಹ ನೀಡಿದವರು ಬಡಜನರು ಅನಕ್ಷರಸ್ಥರು. ಮನೆಯನ್ನು ಆಧಾರವಾಗಿಟ್ಟುಕೊಂಡು ಮದುವೆ ಖರ್ಚು, ಸಾಲ ತೀರಿಸಲು, ಆಧಾರ ಭೋಗ್ಯಗಳಿಂದ ಮನೆ ಬಿಡಿಸಿಕೊಳ್ಳಲು ಮನೆಯನ್ನು ರಿಪೇರಿ ಮಾಡಿಸಿ ಚೆನ್ನಾಗಿ ಇಟ್ಟುಕೊಳ್ಳಲು ಸಾಲ ಕೊಡುತ್ತದೆ.

ಸಂಸ್ಥೆ ಪ್ರಾರಂಭವಾದಾಗ ಅನೇಕ ಸದಸ್ಯರು, ಕಾರ್ಯನಿರ್ವಾಹಕ ಸಮಿತಿ ಸದಸ್ಯರುಗಳು ಉಚಿತವಾಗಿ ಸೇವೆ ಸಲ್ಲಿಸಿದರು. ಹಗಲು ರಾತ್ರಿ ಸಂಸ್ಥೆಗಾಗಿ ದುಡಿದಿದ್ದಾರೆ. ಮೊದಲನೆ ವರ್ಷ ಕೇವಲ 300ರೂ ಮಾತ್ರ ಸಿಬ್ಬಂದಿಗೆ ಖರ್ಚು ಮಾಡಲಾಗಿತ್ತು.

ಕರ್ನಾಟಕ ಸರ್ಕಾರದವರು ಬರಿಯ ಬಂಡವಾಳವನ್ನು ನೋಡದೆ, ಬ್ಯಾಂಕಿನ ಸಾರ್ವಜನಿಕ ಸೇವೆಯನ್ನು ನೋಡಿ ಪ್ರಶಸ್ತಿ ಫಲಕ ಮತ್ತು ಪ್ರಶಸ್ತಿ ಪತ್ರವನ್ನು ಕೊಟ್ಟಿರುತ್ತಾರೆ.

ಶ್ರೀರಾಮ ಮಂದಿರದಲ್ಲಿ ಪ್ರಾರಂಭವಾದ ಈ ಬ್ಯಾಂಕು ಸ್ಥಳ ಸಾಲದೆ ಒಂದು ವಿಶಾಲವಾದ ಕಟ್ಟಡ ಬೇಕಾದುದರಿಂದ ಶ್ರೀರಾಮ ಮಂದಿರದೊಡನೆ ಸಹಕರಿಸಿ 4001ರೂ. ಮುಂಗಡ ಹಣಕೊಟ್ಟು ಈಗಿರುವ ಕಟ್ಟಡವನ್ನು ಪಡೆದರು. ಇದರ ಪ್ರಾರಂಭೋತ್ಸವವನ್ನು ಆಗಿನ ಸಹಕಾರಿ ಮಂತ್ರಿಗಳಾದ ಶ್ರೀ ಮಾಲಿಮರಿಯಪ್ಪನವರು ನೆರವೇರಿಸಿದರು. ಈ ಕಟ್ಟಡಕ್ಕೆ ಬಂದಮೇಲೆ ಕುರ್ಚಿಗಳು, ಬೆಂಚುಗಳು ಬಂದಿದ್ದು. ಈಗ ಬ್ಯಾಂಕನ್ನು ನೋಡಿದರೆ ಇದು ಬಡವರ ಬ್ಯಾಂಕೇ? ಜಮಖಾನದ ಮೇಲೆ ಕುಳಿತುಕೊಳ್ಳುತ್ತಿದ್ದ ಶ್ರೀರಾಮ ಕೋ ಆಪರೇಟಿವ್ ಬ್ಯಾಂಕ್ ಇದೇಯೆ? ಎಂಬ ಅನುಮಾನ ಬರುವಂತೆ ಬೃಹದಾಕಾರವಾಗಿ ಈಗಿನ ಕಾಲಕ್ಕೆ ತಕ್ಕಂತೆ ಅಂದಚೆಂದದೊಡನೆ ಬೆಳೆಸಲಾಗಿದೆ. ನೋಡಲು ಹರ್ಷವಾಗುತ್ತದೆ.

ಮನೆ ಮೇಲೆ ಸಾಲ ಕೊಡಬೇಕಾದರೆ, ಮನೆಗೆ ಬೆಲೆಯನ್ನು ನಿಗದಿಮಾಡುವ ಸಮಿತಿ, ಇಂಜಿನಿಯರ್ ಜೊತೆಯಲ್ಲಿ ಪ್ರತಿ ಭಾನುವಾರ ಮನೆಗಳಿಗೆ ಹೋಗಿ ಬೆಲೆ ಕಟ್ಟುತ್ತಿದ್ದವು. ಮನೆಗಳಿಗೆ ಹೋದಾಗ ಸದಸ್ಯರಿಗೆ ತಿಂಡಿ, ಕಾಫಿ ಕೊಡುವ ರೂಢಿ. ಆದರೆ ನಮ್ಮ ಸಮಿತಿ ಸದಸ್ಯರು ನೀರೂ ಕೂಡ ತೆಗೆದುಕೊಳ್ಳುತ್ತಿರಲಿಲ್ಲ. ಆದರೆ ತಿಂಡಿ ಕಾಫಿ ಇಲ್ಲದೆ ಇರುತ್ತಿರಲಿಲ್ಲ. ಯಾವ ಸಮಿತಿ ಸದಸ್ಯ ತಡವಾಗಿ ಬರುತ್ತಾರೋ ಆತನು ಕೊಡಿಸಬೇಕು. ಹೊತ್ತಾಗಿ ಬಂದವರಿಗೆ ಇದು ಫೈನು? ಮನೆ ನೋಡಲು ನಡದೇ ಹೋಗುತ್ತಿದ್ದೇವು.

ಶ್ರೀರಾಮ ಕೋ ಆಪರೇಟಿವ್ ಬ್ಯಾಂಕಿನ ಸದಸ್ಯರು ಬಡವರಾದರೂ, ಬರಿಯ ಹಣದ ವ್ಯವಹಾರ ಮಾತ್ರವಲ್ಲದೆ, ಸಮಾಜ ಸೇವೆಗಾಗಿ, ಸಮಾಜ ಕಲ್ಯಾಣಕ್ಕಾಗಿ ಸಹಾಯ, ಸಹಕಾರ ನೀಡುವುದರಲ್ಲಿ ಯಾವ ಸಂಸ್ಥೆಯ ಸದಸ್ಯರಿಗೂ ಕಡಿಮೆ ಇಲ್ಲ. ಮುಂದಾಳುಗಳೆಂದೇ ಹೇಳಬೇಕು. ಸದಸ್ಯರು ಹಣ ಸಂಪಾದಿಸುವ ಅಥವಾ ಲಾಭ ಹಂಚಿಕೊಳ್ಳುವ ಒಂದೇ ಯೋಚನೆಯನ್ನು ಇಟ್ಟುಕೊಳ್ಳದೆ ಸಮಾಜಸೇವಾ ಕಾರ್ಯಗಳಿಗೆ ತಮ್ಮ ಲಾಭ ಪೂರ್ತಿ ಕೊಟ್ಟಿದ್ದಾರೆ. 1962ನೇ ಇಸವಿಯಲ್ಲಿ ಸದಸ್ಯರು ಪೂರ್ತಿ ಡಿವಿಡೆಂಡ್ ಹಣವಾದ 4001 ರೂ. ಗಳನ್ನು ರಕ್ಷಣಾನಿಧಿಗಾಗಿ ಮಾಜಿ ಮಂತ್ರಿಗಳಾದ ಎಂ. ವಿ. ಕೃಷ್ಣಪ್ಪನವರ ಮೂಲಕ, ಮಾಜಿ ಮೇಯರ್ ವಿ. ಎಸ್. ಕೃಷ್ಣಯ್ಯರ್ ಅವರಿಗೆ ನಿಧಿಯನ್ನು ಅರ್ಪಿಸಲಾಯಿತು. ಶ್ರೀರಾಮಮಂದಿರ

ಕಲ್ಯಾಣಮಂಟಪ ಮತ್ತು ವಿದ್ಯಾರ್ಥಿನಿಲಯ ಕಟ್ಟುವ ಯೋಜನೆಯನ್ನು ಬ್ಯಾಂಕಿನ ಸದಸ್ಯರ ಮುಂದೆ ಇಟ್ಟಾಗ, ಸರ್ವ ಸದಸ್ಯರ ಸಭೆಯಲ್ಲಿ ತಮ್ಮ ಡಿವಿಡೆಂಟ್ ಪ್ರಾಫಿಟ್ ಹಣವಾದ ರೂ 25 ಸಾವಿರವನ್ನು ಒಮ್ಮತದಿಂದ ಕಾಣಿಕೆಯಾಗಿ ಕೊಡಲು ಒಪ್ಪಿದರು. ಪುನಃ 1977ರಲ್ಲಿಯೂ ಸಹ ರೂ 30 ಸಾವಿರವನ್ನು ಕೊಟ್ಟಿರುತ್ತಾರೆ. ಇಂತಹ ತ್ಯಾಗ ಮನೋಭಾವನೆ ಯಾರಿಗೆ ಸಾಧ್ಯ? ಇದೇ ನಿಜವಾದ ಸಹಕಾರ.

ಬ್ಯಾಂಕಿನ ಅನೇಕ ಮಹನೀಯರು ಭೇಟಿಕೊಟ್ಟು, ಬ್ಯಾಂಕಿನ ಕೆಲಸ ಕಾರ್ಯಗಳನ್ನು ನೋಡಿ ಮೆಚ್ಚಿ ಕೆಲಸಗಾರರಿಗೆ ಹುರಿದುಂಬಿಸಿದ್ದಾರೆ. ಮಾಜಿ ಸಹಕಾರ ಮಂತ್ರಿಗಳಾದ ಶ್ರೀ ಮಾಲಿಮರಿಯಪ್ಪನವರು, ಶ್ರೀ ಕೆ. ಆರ್. ಮರುದೇವೇಗೌಡರು, ಎಂ. ತಮ್ಮಯ್ಯ, ವಿ. ಎಸ್. ಕೃಷ್ಣಯ್ಯರ್, ಆರ್. ಭರಣಯ್ಯ, ಎಂ. ವಿ. ಕೃಷ್ಣಪ್ಪ, ಎಸ್. ನಿಜಲಿಂಗಪ್ಪ, ರಾಮಕೃಷ್ಣಹೆಗ್ಗಡೆ, ಶ್ರೀ ಕೆ. ಸಿ. ಡೇ, ಶ್ರೀ ಎಚ್. ಸಿ. ಶ್ರೀಕಂಠಯ್ಯ, ಜಿ. ರಾಮೇಗೌಡ, ಹುಚ್ಚಮಾಸ್ತಿಗೌಡರು, ಶ್ರೀ ಮುನಿಯಪ್ಪನವರು, ಎಚ್. ಟಿ. ಕೃಷ್ಣಪ್ಪ, ಜಿ. ತಮ್ಮಣ್ಣ ಮುಂತಾದ ಗಣ್ಯರು ಬಂದು ನಮ್ಮ ಸಂಸ್ಥೆಯ ಪ್ರಗತಿಯನ್ನು ನೋಡಿ ಸಂತೋಷ ವ್ಯಕ್ತಪಡಿಸಿ ಆಶೀರ್ವದಿಸಿದ್ದಾರೆ.

ಜೀವನಾಂಶಕ್ಕೆ ಅನುಕೂಲವಾಗುವಂತೆ ಪ್ರತಿ ತಿಂಗಳೂ ಹಣ ಸಿಗುವಂತೆ "ಜೀವನಾಂಶ ಠೇವಣಿ" ಇಟ್ಟು ಅನೇಕರಿಗೆ ಅನುಕೂಲಮಾಡಲಾಗಿದೆ. ಸಣ್ಣ ವ್ಯಾಪಾರಸ್ಥರಿಗೆ ಪ್ರತಿದಿನವೂ ಹಣದ ಖರ್ಚು ಮತ್ತು ಆದಾಯ ಇದ್ದೇ ಇರುತ್ತದೆ. ಆದರೆ ಅದನ್ನು ಕೂಡಿಡುವುದು ಕಷ್ಟ. ಇಂತಹವರ ಅನುಕೂಲಕ್ಕಾಗಿ "ಪಿಗ್ಮಿ ಡಿಪಾಜಿಟ್" ಪ್ರಾರಂಭಿಸಿದೆವು.

ಸರ್ಕಾರದ ಕಾನೂನಿನ ಮೇರೆಗೆ ಒಡವೆಗಳನಿಟ್ಟು ಸಾಲಗಳನ್ನು ಕೊಡುವ ಗಿರವಿ ಅಂಗಡಿಗಳು ಮುಚ್ಚಿದಮೇಲೆ ನಮ್ಮ ಬ್ಯಾಂಕಿನಲ್ಲಿ ಅಂತವರಿಗೆ ಅನುಕೂಲವಾಗುವಂತೆ ಒಡವೆಗಳ ಮೇಲೆ ಸಾಲವನ್ನು ಕೊಡಲಾಗುವುದು.

ದಿವಂಗತ ಶ್ರೀ ತಮ್ಮಯ್ಯನವರು ರಿಜಿಸ್ಟ್ರಾರ್ ಆಗಿದ್ದಾಗ ಪರಿಶೀಲನಾರ್ಥವಾಗಿ ಬಂದಾಗ ಮೊದಲು ಕೇಳುತ್ತಿದ್ದುದು ಸುಸ್ತಿಪಟ್ಟಿ, ಸಾಲ ಎಷ್ಟು ಕೊಟ್ಟಿರುವುದು ಮುಖ್ಯವಲ್ಲ. ಸುಸ್ತಿ ಇಲ್ಲದಿರುವುದು ಮುಖ್ಯ ಎಂದು. ಇದು ಸಹಕಾರಿ ಬ್ಯಾಂಕಿನ ಬೆಳವಣಿಗೆಗೆ ಸಹಾಯವಾಗುತ್ತದೆ. ಈ ಬ್ಯಾಂಕಿನಲ್ಲಿ ಬೋರಪ್ಪ, ತಿಮ್ಮಯ್ಯ ಎನ್ನುವ ಹೆಸರುಗಳನ್ನು ನೋಡದೆ, ಅವರ ಬ್ಯಾಂಕಿನ ನಂಬರ್ ನೋಡುವುದು ಮುಖ್ಯ. ಯಾರಾದರೇನು ? ಎಲ್ಲರೂ ಒಂದೇ. ಸುಸ್ತಿ ಇದ್ದವರಿಗೆಲ್ಲಾ ನೋಟೀಸ್. ಬಡವನಾದವನು, ಕೆಳದರ್ಜೆ ಕೆಲಸ ಮಾಡುವವನು ನೋಟೀಸ್ ಕಂಡ ಕೂಡಲೆ ಸಾಲ ತೀರಿಸಲು ಓಡಿ ಬರುತ್ತಾನೆ. ಅವನಿಗೆ ಸಮಾಜದ ಹೆದರಿಕೆ, ಅವಮಾನ. ಬ್ಯಾಂಕಿನ ವ್ಯವಹಾರ ಎಲ್ಲಿ ತಪ್ಪುತ್ತದೋ ಎಂಬ ಹೆದರಿಕೆ. ಅದೇ ಅಧಿಕಾರ ವರ್ಗದ ಸದಸ್ಯರಿಗೆ, ವಿದ್ಯಾವಂತರಿಗೆ, ಈ ಸುಸ್ತಿ ನೋಟೀಸ್ ಆಫೀಸಿಗೆ ಬರುವ ಎಲ್ಲಾ ಕಾಗದಗಳ ಜೊತೆಗೆ ಅದೂ ಒಂದು ಕಾಗದ. ಸಂಬಳ ಹಿಡಿಯಲು ಬರೆದರೂ ಚಿಂತೆ ಕಡಿಮೆ.

ಒಂದುಸಾರಿ ಕೋ ಆಪರೇಟಿವ್ ಡಿಪಾರ್ಟ್‌ಮೆಂಟಿಗೆ ಸೇರಿದ ಒಬ್ಬ ಸದಸ್ಯರಿಗೆ ನೋಟೀಸ್ ಹೋದಾಗ ಅತಿ ಕೋಪಬಂದು, ಸುಮ್ಮನೆ ಜೇಕೂ ಎಂದು ನೋಟೀಸ್ ಜಾರಿ ಮಾಡಿದ್ದಾನೆಂದು, ಬ್ಯಾಂಕಿನಲ್ಲಿ ಗಲಾಟೆಮಾಡಿದರು. ಆ ವರ್ಷ ಅವರೇ ಆಡಿಟರ್ ಆಗಿ ಬಂದು ಎಲ್ಲರಿಗೂ ಇದೇ ರೀತಿ ನೋಟೀಸ್ ಕೊಟ್ಟಿದ್ದಾರೆಯೇ, ಇಲ್ಲವೇ, ಎಂದು ತನಿಖೆ ನಡೆಸಿದರು. ಕೊನೆಯಲ್ಲಿ ಒಂದು ಒಳ್ಳೆಯ ವರದಿಯನ್ನು ಕೊಟ್ಟು ದೊಡ್ಡವರು, ಚಿಕ್ಕವರು, ಯಜಮಾನ, ಆಳು, ಎಂಬ ಭೇದ ಭಾವವಿಲ್ಲದೆ, ಬ್ಯಾಂಕಿನ ವ್ಯವಹಾರವನ್ನೇ ಮುಖ್ಯವಾಗಿಟ್ಟುಕೊಂಡು ಬ್ಯಾಂಕನ್ನು ನಡೆಸುತ್ತಿರುವುದಕ್ಕಾಗಿ, ಒಳ್ಳೆಯ ಪ್ರಶಸ್ತಿ ಪತ್ರ ನೀಡಿ ಹೋದರು.

ಅನೇಕ ಹಿರಿಯರ ಮತ್ತು ಎಲ್ಲರಿಗೂ ಗುರು ಸಮಾನರಾದ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರ ಮಾರ್ಗದರ್ಶನದಿಂದ 25 ವರ್ಷಗಳ ಹಿಂದೆ ಗಣೇಶಚೌತಿಯ ದಿವಸ ಜನ್ಮವೆತ್ತಿದ ಈ ಸಂಸ್ಥೆ, ಬೆಳ್ಳಿಹಬ್ಬದ ವರ್ಷವನ್ನು ಆಚರಿಸಿ ಅನೇಕ ನೂತನ ಯೋಜನೆಗಳನ್ನು ಕಾರ್ಯರೂಪಕ್ಕೆ ತಂದಿದೆ. ದಲಿತರ, ಬಡವರ, ಕೆಳದರ್ಜೆಯ ಮತ್ತು ಮಧ್ಯಮ ವರ್ಗದ ಜನಗಳ ಏಳಿಗೆಗಾಗಿ ದುಡಿಯುವುದರಲ್ಲಿ ಎಲೆಮರೆಯ ಕಾಯಿಯಂತೆ ಪ್ರಚಾರವಿಲ್ಲದೆ ಗಂಭೀರವಾಗಿ ಸೇವೆಸಲ್ಲಿಸುತ್ತಿದೆ.

ಎಲ್ಲಾ ಪ್ರದೇಶದ ಜನಗಳಿಗೂ ವ್ಯವಹರಿಸಲು ಅವಕಾಶಕೊಡುವುದಕ್ಕಾಗಿ ಒಂದೊಂದು ಪ್ರದೇಶದಲ್ಲೂ ಒಂದೊಂದು ಸಹಕಾರ ಸಂಸ್ಥೆ ಮಾಡಬೇಕಲ್ಲವೆ? ಸಹಕಾರ ಸಂಸ್ಥೆಯಲ್ಲಿರುವ ಸದಸ್ಯರಿಗೆ ಒಬ್ಬರೊಬ್ಬರ ಪರಿಚಯಬೇಕು. ಸುಖ ದುಃಖಗಳಲ್ಲಿ ಭಾಗಿಯಾಗಬೇಕು. ಹೀಗೆ ಪ್ರಾರಂಭಗೊಂಡ ಶ್ರೀರಾಮ ಕೋ ಆಪರೇಟಿವ್ ಬ್ಯಾಂಕ್ ಸ್ಥಾಪನೆಯಾಯಿತು. ಅಲ್ಲಿಯ ಅನೇಕ ಸದಸ್ಯರ ಒತ್ತಾಯದ ಮೇರೆಗೆ ಶ್ರೀರಾಮ ಕೋ-ಆಪರೇಟೀವ್ ಬ್ಯಾಂಕಿನ ಒಂದು ಶಾಖೆ ತೆರೆಯಬೇಕೆಂದಿದ್ದೆವು. ಆದರೆ ಎಲ್ಲವೂ ಸ್ವತಂತ್ರ ಸಂಸ್ಥೆಯಾಗಿ ಒಬ್ಬರೊಬ್ಬರಲ್ಲಿ ಸಹಕಾರ ಬೆಳೆಯಬೇಕು ಎನ್ನುವ ದೃಷ್ಟಿಯಿಂದ ಶ್ರೀ ಆಂಜನೇಯ ಕೋ-ಆಪರೇಟಿವ್ ಬ್ಯಾಂಕನ್ನು ಪ್ರಾರಂಭಿಸಿದೆವು. ಮೊದಲ ಅಧ್ಯಕ್ಷ ನಾನೇ ಆದೆ. ಶರ್ಮಾಜಿಯವರು ಶ್ರೀರಾಮ ಬ್ಯಾಂಕಿನ ಅಧ್ಯಕ್ಷರಾಗಿದ್ದುದರಿಂದ ಆಂಜನೇಯ ಕೋ-ಆಪರೇಟಿವ್ ಬ್ಯಾಂಕಿನಲ್ಲಿ ನೀನು ಕೆಲಸಮಾಡೆಂದು ನನ್ನನ್ನು ಕಳಿಸಿದರು. ಸುಮಾರು ಆರೇಳು ವರ್ಷ ಅಧ್ಯಕ್ಷನಾಗಿದ್ದೆ. ಮೂರು ನಾಲ್ಕು ವರ್ಷ ಚುನಾವಣೆಯೇ ಇಲ್ಲ. ಬ್ಯಾಂಕು ನಷ್ಟದ ಮುಖ ಕಾಣದೆ ಲಾಭದಾಯಕವಾಗಿ ನಡೆಯಿತು. ನಂತರ ಚುನಾವಣೆಗೆ ನಿಲ್ಲದೆ ಸಂಸ್ಥೆಯನ್ನು ದೂರದಿಂದ ನೋಡಿಕೊಳ್ಳುವ ಅವಕಾಶ ಮಾಡಿಕೊಂಡೆ. ಈಗ ಸಂಸ್ಥೆ ಚೆನ್ನಾಗಿ ಬೆಳೆದಿದೆ. ಸಹಕಾರ ಸಂಸ್ಥೆಯಲ್ಲಿ ಕೆಲಸ ಮಾಡುವವರು ಕೂಡ ಪ್ರಶಂಸಿಸಿದ್ದಾರೆ.

ಮಲ್ಲೇಶ್ವರದ 9 ರಿಂದ 11ನೇ ಕ್ರಾಸಿನ ಜನಗಳಿಗೆ ಬ್ಯಾಂಕಿನ ಅವಶ್ಯಕತೆ ಇದೆ ಎಂದೂ ಕೆಲವು ಮಿತ್ರರು ಸೇರಿ ಪ್ರಗತಿ ಕೋ-ಆಪರೇಟೀವ್ ಬ್ಯಾಂಕ್ ಪ್ರಾರಂಭಿ

ಸಿದರು. ನನ್ನನ್ನು ಪ್ರಥಮ ಉಪಾಧ್ಯಕ್ಷನನ್ನಾಗಿ ಆರಿಸಿದರು. ಮೊದಲನೆ ಸರ್ವ ಸದಸ್ಯರ ಸಭೆ ಪ್ರಾರಂಭವಾದಾಗಿನಿಂದ ಎರಡು, ಮೂರು ವಾರ್ಷಿಕ ಸಭೆಯಲ್ಲಿ ನಾನು ಅಧ್ಯಕ್ಷನಾಗಿ ಕೆಲಸಮಾಡಿದೆ. ಸರ್ವಸದಸ್ಯರ ಸಭೆಯಲ್ಲಿ ಮಾತನಾಡುತ್ತಿದ್ದುದು ನಾನೇ ಮೊದಲು. ಹಿಂದಿನ ವರ್ಷದ ಸಾಧನೆಗಳ ಬಗ್ಗೆ ಮಾತನಾಡಿ, ಮುಂದಿನ ವರ್ಷ ಹಾಕಿಕೊಳ್ಳುವ ಯೋಜನೆಗಳನ್ನು ತಿಳಿಸುತ್ತಿದ್ದೆ. ಇವೆಲ್ಲ ಒಂದು ಆಸಕ್ತಿಯ ವಿಷಯವಾದ್ದರಿಂದ ಹಾಗೆ ಮಾಡುತ್ತಿದ್ದೆ.

ಸಹಕಾರ ಸಂಸ್ಥೆಗಳಲ್ಲಿ ನನಗೆ ಅನುಭವವಾಗುತ್ತಿದ್ದಂತೆ ಕೆಲಸ ಮಾಡಲು ಅವಕಾಶ ಒದಗಿಸಿಕೊಟ್ಟ ಮತ್ತೊಂದು ಸಂಸ್ಥೆ ಎಂದರೆ ಬಿ. ಇ. ಎಂ. ಎಲ್. ಕಾರ್ಖಾನೆಯ ಕೋ-ಆಪರೇಟಿವ್ ಸೊಸೈಟಿ. ಪ್ರಾರಂಭಿಸುವಾಗ ಸಲಹೆಗಾಗಿ ನನ್ನಲ್ಲಿ ಬಂದರು. ಇಲ್ಲವೆನ್ನಲಾದೀತೆ ? ನನ್ನನ್ನೇ ಅಧ್ಯಕ್ಷನಾಗುವಂತೆ ಕೆಲವು ಕಾರ್ಮಿಕ ಮಿತ್ರರು ಬಲವಂತ ಮಾಡಿದರು. ಎರಡು ವರ್ಷಕಾಲ ಅಧ್ಯಕ್ಷನಾಗಿದ್ದೆ. ಕಾರ್ಮಿಕರು ಸಹಕಾರ ಸಂಸ್ಥೆ ಹೇಗೆ ನಡೆಸಬೇಕು, ನಿಯಮಾವಳಿಗಳನ್ನು ಹೇಗೆ ಪಾಲಿಸಬೇಕು ಎಂಬುದನ್ನು ತಿಳಿಸಲಾಯಿತು. ಈಗಲೂ ಕೂಡ ಸಹಕಾರ ಸಂಸ್ಥೆ ಸದಸ್ಯರು ನನ್ನನ್ನು ಸಲಹೆ ಕೇಳುವುದರ ಮೂಲಕ ಯಾವ ಹೊಸ ಕಾರ್ಯಕ್ರಮ ಹಾಕಿಕೊಂಡರೂ ನನಗೆ ತಿಳಿಸುವ ಮೂಲಕ ನನ್ನ ಸಂಪರ್ಕವಿಟ್ಟುಕೊಂಡಿದ್ದಾರೆ. ಕಾರ್ಮಿಕ ಬಂಧುಗಳ ಪ್ರೀತಿ ಈ ವಿಶ್ವಾಸ ಗಮನಾರ್ಹ.

ಶ್ರೀರಾಮ ಕೋ-ಆಪರೇಟೀವ್ ಬ್ಯಾಂಕ್ ಪ್ರಾರಂಭಿಸಿದ ಮೇಲೆ ಅನೇಕ ಜನರು ಬೇರೆ ಬೇರೆ ಬಡಾವಣೆಗಳಲ್ಲಿ ಇದರ ಶಾಖೆಯನ್ನು ಪ್ರಾರಂಭಿಸಬೇಕೆಂದು ಕೇಳಿಕೊಂಡರು. ನಾನು ಇದಕ್ಕೆ ಒಪ್ಪಲಿಲ್ಲ. ಕೆಲವರೇ ಅಧಿಕಾರ ವರ್ಗದಲ್ಲಿದ್ದು ಎಲ್ಲವೂ ತಮ್ಮ ಅಧೀನದಲ್ಲಿರಬೇಕೆಂದು ಬಯಸುವುದರಿಂದ ಸಂಸ್ಥೆ ಬೆಳೆಯುವುದಿಲ್ಲ. ಬೇಕಾದಾಗ ಸಲಹೆ ನೀಡಿ ಆಯಾ ಪ್ರದೇಶದಲ್ಲಿ ಸಹಕಾರ ಸಂಸ್ಥೆ ಸ್ಥಾಪಿಸಲು ಸಲಹೆ ಕೊಟ್ಟೆವು. ಅನೇಕ ಸಹಕಾರ ಸಂಸ್ಥೆಗಳು ಸ್ವಂತವಾಗಿ ಪ್ರಾರಂಭವಾಗಿ ಚೆನ್ನಾಗಿ ನಡೆದುಕೊಂಡು ಬಂದಿವೆ. ಇಂತಹ ಸಂಸ್ಥೆಗಳು ಹತ್ತಾರು.

ಮಲ್ಲೇಶ್ವರ ಏಳನೆ ರಸ್ತೆಯ ಕೋ-ಆಪರೇಟಿವ್ ಬ್ಯಾಂಕಿನಲ್ಲಿ ನಾನು ಸದಸ್ಯ. ನಮ್ಮ ತಂದೆಯವರು ಈ ಬ್ಯಾಂಕಿಗೆ ಸದಸ್ಯರಾಗಿದ್ದರು. ಅವರು ನಿಧನರಾದ ಮೇಲೆ ನಮ್ಮ ತಾಯಿಯವರಿಗೆ ಸದಸ್ಯತ್ವ ನೀಡಲು ನಿಧಾನವಾಯಿತು. ಆದರೂ ಶ್ರೀ ವೆಂಕಟರಮಣಯ್ಯರ್, ಶ್ರೀ ಸುಬ್ಬಯ್ಯಶೆಟ್ಟಿ ಇವರುಗಳ ನೆರವಿಂದ ಸದಸ್ಯತ್ವ ದೊರೆಯಿತು. ಈ ಬ್ಯಾಂಕು ಅನೇಕ ಬಾರಿ ಸಾಲಕೊಟ್ಟು ಸಹಾಯಮಾಡಿದೆ. ಹೊರ ದೇಶಕ್ಕೆ ಹೋಗಿದ್ದಾಗಲೂ ಬ್ಯಾಂಕು ಧನ ಸಹಾಯ ನೀಡಿತ್ತು. ಗಾಂಧೀ ಸಾಹಿತ್ಯ ಸಂಘಕ್ಕೆ ಹಣ ಸಂಗ್ರಹಿಸಲು ಮಲ್ಲೇಶ್ವರಂ ಕೋ-ಆಪರೇಟೀವ್ ಬ್ಯಾಂಕಿನ ವಾರ್ಷಿಕ ವರದಿಯನ್ನು ಮನೆಮನೆಗೆ ಹಂಚಿ ನಾಲ್ಕುಕಾಸು ಸಂಪಾದನೆ ಮಾಡಿದೆವು. ಈ ಬ್ಯಾಂಕಿಗೆ ನಾನು ಚಿರಋಣಿ. ಸಹಕಾರ ಸಂಸ್ಥೆಗಳಿರುವ

ಮಲ್ಲೇಶ್ವರದಲ್ಲಿ ಇದೇ ಮೊದಲನೆಯದು. ಸದ್ಯ ಎಲ್ಲಾ ಸಂಸ್ಥೆಯಲ್ಲೂ ಸದಸ್ಯತ್ವ ಬಿಟ್ಟು ಈ ಬ್ಯಾಂಕೊಂದರಲ್ಲಿ ಮಾತ್ರ ಸದಸ್ಯತ್ವ ಉಳಿಸಿಕೊಂಡಿದ್ದೇನೆ.

### ಸೇವಾದಳದಲ್ಲಿ

ಚಿಕ್ಕಂದಿನಿಂದಲೂ ಸ್ವಾತಂತ್ರ್ಯದ ಆಕಾಂಕ್ಷೆ. ಸ್ವದೇಶಾಭಿಮಾನದ ಜಾಗೃತಿ. ಕೆಲಕಾಲ ಸೌಟ್ಸಿನ ಗುರುತಾದ ಖಾಕಿಬಟ್ಟೆ ಹಾಕುತ್ತಿದ್ದ. ಪೋಲೀಸು, ಸೈನ್ಯ ಈ ಎರಡೂ ನನಗೆ ದೂರ. ಆದರೆ ಶಿಸ್ತು ಬೇಕು. ಸೇವಾದಳಕ್ಕೆ ಸೇರಿದೆ. 'ಸೌಟು' ಸಹ ಖಾಕಿಬಟ್ಟೆ ಹಾಕುವುದನ್ನು ಹೇಳುತ್ತಿತ್ತು. ಆದರೆ ಅದು ಪರದೇಶೀಯರ ಅನುಕರಣೆ ಎಂದು ಅದರ ಬಗ್ಗೆ ದೃಷ್ಟಿ ಕಡಿಮೆಯಾಯಿತು. ಸೇವಾದಳ ನಮ್ಮ ದೇಶದಲ್ಲಿ ಹುಟ್ಟಿ ಬೆಳೆದ ಸಂಸ್ಥೆ. ಬೆಳಿಗ್ಗೆ ಸಂಜೆ ಸೇವಾದಳ ಕವಾಯತು ಮಾಡ್ತು ತ್ತಿದ್ದ. ಶ್ರೀ ನಾ. ಸು. ಹರ್ಡೀಕರ್ ಅವರ ನೇತೃತ್ವದಲ್ಲಿ ಆರಂಭವಾದ ಸೇವಾದಳ ಅಖಿಲಭಾರತ ಮಟ್ಟದಲ್ಲಿ ನಡೆಯುತ್ತಿತ್ತು.

ಸೇವಾದಳದಲ್ಲಿ ರಾಜಾರಾವ್ ಎಂಬ ನನ್ನ ಸಹಪಾಠಿ ಇದ್ದ. ಅವನಿಗೆ ಸೇವಾ ದಳದಲ್ಲಿ ಮೊದಲಿಂದಲೂ ಶ್ರದ್ಧೆ. ಆತನೇ ಸೇವಾದಳದ ನಾಯಕ ಕೂಡ. ಶ್ರೀ ಹರ್ಡೀಕರ್ ಹಾಗೂ ಶ್ರೀ ದಿವಾಕರರು ಸಹ ಬೆಂಗಳೂರಿಗೆ ಬಂದರೆ ಈ ಯುವಕರ ಸೈನ್ಯವನ್ನು ನೋಡದೆ ಹೋಗುತ್ತಿರಲಿಲ್ಲ. ಸೇವಾದಳದ ಶಿಬಿರಗಳು, ರಚನಾತ್ಮಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದೆ. ಇದರಿಂದ ನನ್ನ ಉಡುಪು ಸರಳವಾಗಿತ್ತು. ಒಂದು ಖಾದಿ ನಿಕ್ಕರ್, ಬಿಳಿ ಷರಟು, ಗಾಂಧಿಟೋಪಿ. ಕಾಲಿಗೆ ಚಪ್ಪಲಿ ಇದ್ದರೆ ಇತ್ತು ಇಲ್ಲದಿದ್ದರೆ ಇಲ್ಲ. ಕಾಂಗ್ರೆಸ್ಸಿನ ಅಧಿವೇಶನ ಮತ್ತು ಸಮ್ಮೇಳನ ನಡೆದಾಗ ಲೆಲ್ಲ ಭಾಗವಹಿಸುತ್ತಿದ್ದೆ. 1951ರಲ್ಲಿ ಅಖಿಲಭಾರತ ಕಾಂಗ್ರೆಸ್ ಅಧಿವೇಶನ ಬೆಂಗ ಳೂರಿನಲ್ಲಿ ನಡೆದಾಗ ನಾನೂ ಒಬ್ಬ ಸೇವಾದಳ ಕಾರ್ಯಕರ್ತನಾಗಿ ಕಾಂಗ್ರೆಸ್ ಸಮಿತಿ ಸದಸ್ಯರ ಮೇಲ್ವಿಚಾರಣೆ ನೋಡಿಕೊಂಡೆ.

### ಪ್ರದರ್ಶಕ ಕಲೆಗಳು–ಪ್ರದರ್ಶನಗಳು

ಸಿನಿಮಾ, ನಾಟಕಗಳನ್ನು ನೋಡುವುದೆಂದರೆ ನನಗಿಷ್ಟ. ಹಾಗೆ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವವರೆಗಷ್ಟೆ. ಮೊದಲು ಸಿನಿಮಾ ನೋಡಿದ್ದು ಎಂದರೆ ನಮ್ಮ ಮನೆ ಎದುರಿನ ಮಾಧ್ಯಮಿಕ ಶಾಲೆಯಲ್ಲಿ. ಮೂಕಿ ಚಿತ್ರವೊಂದರ ಪ್ರದರ್ಶನ ವಾಯಿತು. ಆ ಕಾಲಕ್ಕೆ ಅದೇ ಹೆಚ್ಚು. ಮೊದಲ ಚಲನಚಿತ್ರ ನೋಡಿದ್ದು ಎಂದರೆ ಕೃಷ್ಣಲೀಲೆ. ಹೈಸ್ಕೂಲಿನಲ್ಲಿದ್ದಾಗ ಯಾವುದಾದರೂ ಸಿನಿಮಾ ನೋಡು ತ್ತಿದ್ದೆ. ಕಾಲೇಜಿಗೆ ಹೋದಮೇಲೆ ಹಿಂದಿ ಚಿತ್ರಗಳನ್ನು ನೋಡುತ್ತಿದ್ದೆ. ಕನ್ನಡ ಚಿತ್ರಗಳು ಆಗೆಲ್ಲಿ ಬರಬೇಕು? ಆಗ ಸಿನಿಮಾ ನಟರಲ್ಲಿ ಪ್ರಧಾನರಾಗಿದ್ದವರೆಂದರೆ ಅಶೋಕ್‌ಕುಮಾರ್, ಪಂಕಜಮಲ್ಲಿ, ಲೀಲಾಚಟ್ನೀಸ್, ದೇವಿಕಾರಾಣಿ ಮೊದ

ಲಾದವರು. ಇವರೇ ಆಗಿನ ನಾಯಕ ನಾಯಕಿಯರು. ಸ್ವಾತಂತ್ರ್ಯ ಹೋರಾಟಕ್ಕೆ ಇಳಿದಮೇಲೆ ಚಿತ್ರಗಳನ್ನು ನೋಡುವುದು ಕಡಮೆಯಾಗಿ, ಕಡೆಗೆ ಸ್ವಾತಂತ್ರ್ಯ ಬರುವವರೆಗೆ ಚಿತ್ರಗಳನ್ನು ನೋಡುವುದಿಲ್ಲವೆಂದು ಬಿಟ್ಟಿದ್ದೆ. ನಾಟಕಗಳನ್ನು ನೋಡುವುದದಲ್ಲಿ ಚಪಲ ಹೆಚ್ಚು. ಗುಬ್ಬಿವೀರಣ್ಣನವರ ನಾಟಕಗಳಿಗೆ ಹೋಗುತ್ತಿದ್ದೆ. ಹಿಂದೆ ನೆಲದಮೇಲೆ ಕುಳಿತು ನೋಡಲು ಎರಡಾಣೆ ಕೇಳುತ್ತಿದ್ದರು. ಅದನ್ನು ಕೊಡಲೂ ನನಗೆ ಶಕ್ತಿ ಇರಲಿಲ್ಲ.

ಬೆಂಗಳೂರಿನಲ್ಲಿ ವಸ್ತುಪ್ರದರ್ಶನಗಳು ಪ್ರಾರಂಭವಾಗಿದ್ದೆಂದರೆ ಕಾಂಗ್ರೆಸ್ ವಸ್ತುಪ್ರದರ್ಶನಗಳಿಂದ. ಈಗಿನ ಸುಭಾಷ್‌ನಗರ (ಸಿಟಿ ಬಸ್‌ಸ್ಟ್ಯಾಂಡ್) ಹಿಂದೆ ಭಾರಿ ಕೆರೆ. ನಾನು ನೋಡಿದ ಹಾಗೆ ನೀರು ತುಂಬಿರುತ್ತಿತ್ತು. ಸಣ್ಣವನಿದ್ದಾಗ ಅಲ್ಲಿ ಒಂದೆರಡು ತೆಪ್ಪೋತ್ಸವ ನಡೆದಿದ್ದು ನೋಡಿದ್ದೆ. ಕಾಂಗ್ರೆಸ್ ವಸ್ತುಪ್ರದರ್ಶನಕ್ಕೆ ಒಮ್ಮೆ ಸಿದ್ದವನಹಳ್ಳಿ ಕೃಷ್ಣಶರ್ಮರು ಪ್ರಧಾನ ಕಾರ್ಯದರ್ಶಿಯಾಗಿದ್ದುದು ನೆನಪಿದೆ. ಗಾಂಧೀಸಾಹಿತ್ಯದ ಪುಸ್ತಕಗಳನ್ನು ಇಲ್ಲಿ ಮಾರಾಟ ಮಾಡುತ್ತಿದ್ದರು. ಈ ವಸ್ತುಪ್ರದರ್ಶನಗಳಲ್ಲಿ ಹೆಚ್ಚಾಗಿ ಕಾರ್ಯದರ್ಶಿಯಾಗಿದ್ದವರು ಎಂದರೆ ಶ್ರೀ ಎ. ಎಸ್. ಕೃಷ್ಣಯ್ಯರ್. ಕಾಂಗ್ರೆಸ್ ಸಂಸ್ಥೆ ಬೆಳೆಯಲೂ ಅವಕಾಶವಾಯಿತು. ಶ್ರೀ ಕೃಷ್ಣಯ್ಯರ್ ವಿದ್ಯಾರ್ಥಿ ದೆಸೆಯಿಂದಲೇ ವಿದ್ಯಾರ್ಥಿ ಕಾಂಗ್ರೆಸ್, ಯುವಕ ಕಾಂಗ್ರೆಸ್‌ನಲ್ಲಿದ್ದು ಕಾಂಗ್ರೆಸ್ ಸಂಸ್ಥೆಗೆ ಬಂದವರು. ರಚನಾತ್ಮಕ ಕಾರ್ಯದಲ್ಲಿ ಮುಂದಾಳು. ಕಾಂಗ್ರೆಸ್ ಸಂಸ್ಥೆಯ ಕೆಲಸಗಾರರಿಗೆ ಪ್ರದರ್ಶನದಲ್ಲಿ ಓಡಾಡಲು ಒಂದು ಅವಕಾಶ. ನನಗೂ ಪಾಸ್ ಇರುತ್ತಿತ್ತು ಹೋಗಿಬರತ್ತಿದ್ದೆ.

## ಚುನಾವಣೆಗಳಲ್ಲಿ

ಮಲ್ಲೇಶ್ವರಂನಲ್ಲಿ ಬೆಂಗಳೂರು ಮುನಿಸಿಪಾಲಿಟಿ ಹಾಗೂ ವಿಧಾನಸಭಾ ಚುನಾವಣೆಗಳಲ್ಲಿ ಕಾರ್ಯಕರ್ತರ ಮಾತೆಂದರೆ ಅಪಾರ ಗೌರವ. ಈ ಬಗ್ಗೆ ಹಿಂದೆ ಪ್ರಸ್ತಾಪಿಸಿದ್ದೇನೆ. ಮನೆಮನೆಗೂ ಹೋಗಿ ಕಾಂಗ್ರೆಸ್ ಸಂಸ್ಥೆಯ ವಿಚಾರ ತಿಳಿಸಿ ಓಟುದಾರರಿಂದ ಓಟು ಕೇಳದೆ ಬರುತ್ತಿರಲಿಲ್ಲ. ಹೀಗೆ ಅನೇಕ ಚುನಾವಣೆಗಳಲ್ಲಿ ಭಾಗವಹಿಸುತ್ತಿದ್ದುದರಿಂದ ಜನಗಳ ಸಂಪರ್ಕ ಹೆಚ್ಚಾಗುತ್ತಿತ್ತು. ಎಲ್ಲ ಕೆಲಸಗಳೂ ಸಾಗುತ್ತಿದ್ದುವು. ಗಾಂಧೀ ಸಾಹಿತ್ಯ ಸಂಘಕ್ಕಾಗಿ ಜಮೀನುಕೊಳ್ಳುವ ವಿಚಾರದಲ್ಲಿ ಕಾಂಗ್ರೆಸ್ ಸಂಸ್ಥೆಯಲ್ಲಿ ಭಿನ್ನಾಭಿಪ್ರಾಯ ಬಂದಿತು. ಅಂದಿನಿಂದ ಚುನಾವಣೆಗಳಲ್ಲಿ ಕಾಂಗ್ರೆಸ್ ಸಂಸ್ಥೆಗೆ ಕೆಲಸ ಮಾಡುವುದನ್ನು ನಿಲ್ಲಿಸಿದೆ.

ಒಂದು ಸಾರಿ ಚುನಾವಣೆ ಬಂತು. ಯಾವ ಪಕ್ಷಕ್ಕೂ ಸೇರದ ರಚನಾತ್ಮಕ ಕಾರ್ಯಕರ್ತನಾಗಿ ಒಬ್ಬನನ್ನು ಚುನಾವಣೆಗೆ ನಿಲ್ಲಿಸಿ ಏಕೆ ಗೆಲ್ಲಿಸಬಾರದು ಎಂದು ಯೋಚಿಸಿದೆ. ಶ್ರೀ ಎಚ್. ವೆಂಕಟೇಶ, ಶ್ರೀ ರಾಂದೇವ್ ಮತ್ತು ನಾನು ಒಂದು ಸಲ ಮಾತನಾಡುತ್ತ ಕುಳಿತಿದ್ದಾಗ ಶ್ರೀ ಬಿ. ರಾಮದೇವರನ್ನು ಏಕೆ ಚುನಾವಣೆಗೆ

ನಿಲ್ಲಿಸಬಾರದು ಎಂದು ಪ್ರಶ್ನೆ ಹಾಕಿಕೊಂಡೆವು. ಹಾಗೆಯೇ ರಾಂದೇವ್ ಅವರನ್ನು ನಿಲ್ಲಿಸಿದೆವು. ಕಾಂಗ್ರೆಸ್‌ಗೆ ವಿರೋಧವಾಗಿ ಮಲ್ಲೇಶ್ವರದ ಜನ ಚುನಾವಣೆಯಲ್ಲಿ ಭಾಗ ವಹಿಸುತ್ತಿದ್ದುದು ಮತ್ತು ಓಟು ಮಾಡುತ್ತಿದ್ದುದು ಬಹಳ ಕಡಿಮೆ. ಕೆಲವು ಕಡೆ ಯಂತೂ ಶೇ. 30 ಮಂದಿ ಕೂಡ ಓಟು ಹಾಕುತ್ತಿರಲಿಲ್ಲ. ಎಲ್ಲ ಗುಂಪಿನ ಜನಗಳೇ. ಚುನಾವಣೆಯಲ್ಲಿ ಗೆಲ್ಲಲಿ ಬಿಡಲಿ ಎಲ್ಲರ ಕೈಯ್ಯಲ್ಲಿ ಮತ ಗಿಟ್ಟಿಸಲು ಯತ್ನಿಸಬೇಕು ಎಂದು ತೀರ್ಮಾನಿಸಿ ಓಟುದಾರರ ಪಟ್ಟಿ ಮತ್ತು ಕ್ಷೇತ್ರದ ನಕಾಶೆಯನ್ನು ತಯಾರಿಸಿದೆವು. ಅಮೆರಿಕೆಯಲ್ಲಿ ಜಾನ್ ಎಫ್. ಕೆನಡಿಯನ್ನು ಗೆಲ್ಲಿಸಲು ಅಲಾಯ್ ಸ್ಟೀವರ್ಸ್ ದುಡಿದ ಹಾಗೆ. ಪ್ರತಿಯೊಂದು ಮನೆಯ ಸಂಖ್ಯೆಯನ್ನು ಗುರುತಿಸಿ ಅಲ್ಲಿನ ಮತದಾರರ ವಿವರವನ್ನು ಪಟ್ಟಿಮಾಡಿ ಪ್ರತಿಯೊಂದು ಮತಗಟ್ಟೆಗೂ ಒಬ್ಬೊಬ್ಬ ಸ್ವಯಂಸೇವಕನನ್ನು ಗೊತ್ತುಮಾಡಿದೆ. ಪ್ರತಿ ರಸ್ತೆಗೆ ಇಬ್ಬರನ್ನು ನೇಮಿಸಿದೆ. ಒಂದು ಬೃಹತ್ ಚುನಾವಣೆ ಯೋಜನೆ ತಯಾರಾಯಿತು. ಎಲ್ಲರ ಸಹಕಾರ ದೊರೆಯಿತು. ಚುನಾವಣಾ ಪ್ರಚಾರ ಯುವಕರದೇ. ಎಲ್ಲರ ಬಾಯಲ್ಲೂ ರಾಮ್‌ದೇವ್ ಹೆಸರೇ. ಸ್ವಯಂ ಸೇವಕರು ಪ್ರತಿ ಮನೆಗೂ ಹೋಗಿ ಮತದಾರರನ್ನು ಮತಗಟ್ಟೆಗೆ ಹೋಗುವ ಹಾಗೆ ಮಾಡುವುದಾಯಿತು. ಯಾರಿಗೆ ಮತದಾನ ಎಂಬುದು ಮುಖ್ಯವಲ್ಲ. ಮತದಾನ ಮಾಡುವುದು ಮುಖ್ಯ. ಹಕ್ಕು ಚಲಾಯಿಸಬೇಕಷ್ಟೆ. ಶೇ. 70 ಜನ ಮತ ನೀಡಿದರು. ಮತದಾನದ ಸಂಜೆ ಸ್ವಯಂಸೇವಕರ ಜೊತೆ ಮಾತನಾಡಿದೆ. ಪಿ. ರಾಮದೇವ್ ಗೆದ್ದೇ ಗೆಲ್ಲುತ್ತಾರೆ. ಇದೇ ಎಲ್ಲರೂ ಹೇಳುತ್ತಿದ್ದುದು. ಮರುದಿನ ಎಣಿಕೆ. ರಾಮದೇವ್ ಗೆದ್ದರು. ನಾವೆಣಿಸಿದ್ದಷ್ಟೇ ಓಟೂ ಬಂದಿತ್ತು. ಇದು ಒಬ್ಬ ಸಮಾಜ ಸೇವಕನ ಗೆಲುವು ಕೂಡ. ರಾಮದೇವರೊಡನೆ ಎಲ್ಲರೂ ಸಹಕರಿಸಬೇಕೆಂದು ಮನವಿ ಮಾಡಿದೆವು. ಒಂದು ಯೋಜನೆಯನ್ನೇ ಹಾಕಿದೆವು. ಮುನಿಸಿಪಲ್ ಕಮಿಷನರ್ ಹತ್ತಿರ ಮಾತನಾಡಿದಾಗ ಅವರು ಈ ಯೋಜನೆ ನೋಡಿ ಸಂತೋಷಪಟ್ಟರು. ಮುಂದೆ ಶ್ರೀ ಕೆ. ದೇವಯ್ಯ ಕಾಂಗ್ರೆಸ್ ಪಕ್ಷಬಿಟ್ಟು ಎಂ. ಎಲ್. ಎ. ಪಟ್ಟಕ್ಕಾಗಿ ಸ್ವತಂತ್ರವಾಗಿ ನಿಂತಾಗಲೂ ಕೂಡ ಮಲ್ಲೇಶ್ವರದ ಯುವಕರೆಲ್ಲರೂ ಸೇರಿ ಅವರನ್ನು ಗೆಲ್ಲಿಸಿದರು.

**ಆರ್‍ಯೆಯರ್–ರಾಜಾಜಿ**

ನಮಗೆ ಮೇಲುಕೋಟೆ ಅಯ್ನೋರು ಗುರುಗಳು. ಮುದ್ರೆಹಾಕಿಸಿ ಶುದ್ಧಿ ಮಾಡಿಸಿಕೊಳ್ಳಬೇಕು ಎಂದು ನಮ್ಮ ತಾಯಿ ಹೇಳುತ್ತಿದ್ದರು. ನಮ್ಮ ಹಳ್ಳಿಗಳಿಗೆ ಗುರುಗಳು ಬಂದು ನಮಸ್ಕಾರ ಮಾಡಿಸಿಕೊಂಡು ಆಶೀರ್ವಾದ ಮಾಡಿ ಹಣವನ್ನು ಧಾನ್ಯವನ್ನು ಸಂಗ್ರಹಿಸಿಕೊಂಡು ಹೋಗುತ್ತಿದ್ದರು.

ಅಯ್ಯಂಗಾರ್‍ರೊಬ್ಬರು ಒಂದು ದಿನ ನಮ್ಮ ಮನೆಗೆ ಬಂದರು, ಹಣೆಮೇಲೆ ನಾಮ ಇತ್ತು. ನನ್ನ ತಾಯಿ "ಇವರು ನಮ್ಮ ಗುರುಗಳು ನಮಸ್ಕಾರ ಮಾಡು.

ಎಂದರು. ಅವರ ಹೆಸರು ಅಯ್ಯರ್. ಮೇಲು ಕೋಟೆಯವರು. ನಮ್ಮ ಹಳ್ಳಿಗೆ ಇವರ ತಂದೆ ಗುರುಗಳಾಗಿದ್ದರಂತೆ. ನಮ್ಮ ಹಳ್ಳಿಯ ಜನ ಯಾರ್ಯಾರು ಇದ್ದಾರೆ ಅವರನ್ನೆಲ್ಲ ಸೇರಿಸಿ ಅವರಿಗೆ ತೀರ್ಥ ಪ್ರಸಾದಕೊಟ್ಟು ಆಶೀರ್ವಾದ ಮಾಡಬೇಕೆಂದು ಹೇಳಿದರು ನನ್ನ ತಾಯಿ. ಅದಕ್ಕೆ ಬೇಕಾದ ಏರ್ಪಾಡು ಮಾಡಿದೆವು. ತೂಬಿನ ಕೆರೆಗೆ ಹೋಗಿ ಅಲ್ಲಿ ಎರಡು ಮೂರು ತಿಂಗಳು ನೆಲೆಸಿ ಪರಿಚಯ ಮಾಡಿಕೊಂಡು ಗ್ರಾಮದೇವತೆಯ ದೇವಸ್ಥಾನ ಸ್ಥಾಪಿಸಲಾಯಿತು. ಅಯ್ಯರ್ ಸಂಸ್ಕೃತ ಪಂಡಿತರು, ಕವಿಗಳು, ಗಾಂಧಿ ಮತ್ತು ವಿನೋಬಾ ವಿಚಾರದಲ್ಲಿ ಆಸಕ್ತಿ ಉಳ್ಳವರು. ನಾನು ಖಾದಿಪ್ರಿಯ ಎಂದಾಗ ಅವರಿಗೆ ಎಲ್ಲಿಲ್ಲದ ಆನಂದ. ವಿನೋಬಾರವರ ಭೂದಾನ ಕಾರ್ಯದಲ್ಲಿ ಹೆಚ್ಚು ಆಸಕ್ತಿವಹಿಸಿ ಕರ್ನಾಟಕದಲ್ಲಿ ಪಾದಯಾತ್ರೆ ಮಾಡಿದರು. ವಾರ್ಧಾಗೆ ಹೋಗಿ ನೆಲೆಸಿದ್ದರು. ಬೆಂಗಳೂರಿಗೆ ಬಂದರೆ ನಮ್ಮ ಮನೆಯಲ್ಲಿ ಇಳಿದು ಕೊಳ್ಳುತ್ತಾರೆ. ಅವರದೇ ಸ್ವಯಂ ಪಾಕ. ರೊಟ್ಟಿ ಹಾಗೂ ಸೊಪ್ಪಿನ ಪಲ್ಯ. ಇವರ ಮಕ್ಕಳೂ ಸಂಸ್ಕೃತ ಪಂಡಿತರು. ಅಯ್ಯರ್ ಗಾಂಧೀ ಸಾಹಿತ್ಯ ಸಂಘಕ್ಕೆ ಬಂದಿದ್ದರು. ನಮ್ಮ ಸಂಘದ ಮತ್ತೊಂದು ಚಟುವಟಿಕೆಯಾದ ಪ್ರಕೃತಿ ಜೀವನ ಕೇಂದ್ರಕ್ಕೆ 'ಪ್ರಕೃತಿ ಜೀವನದ ತಾತ್ವಿಕ ಆಧಾರ' ಎಂಬ ಚಿಕ್ಕ ಪುಸ್ತಕವನ್ನು ಬರೆದು ಕೊಟ್ಟಿದ್ದಾರೆ. ಇಂಥವರ ಆಶೀರ್ವಾದ ನನ್ನ ಮೇಲಿರುವುದು ನನ್ನ ಭಾಗ್ಯ ಎಂದು ಭಾವಿಸಿದ್ದೇನೆ.

1945ರಲ್ಲಿ ರಾಜಾಜಿಯವರ ದರ್ಶನವಾಯಿತು. ರಾಜಾಜಿ ಈಗ ಇಲ್ಲ. ಆಗ ಬೆಂಗಳೂರಿಗೆ ಬಂದಿದ್ದಾಗ ದಂಡಿನಲ್ಲಿ ಮಿತ್ರರ ಮನೆಯಲ್ಲಿ ಇಳಿದುಕೊಂಡಿದ್ದರು. ಗಾಂಧೀ ಸಾಹಿತ್ಯ ಸಂಘಕ್ಕೆ ಕರೆದು ಅವರಿಂದ ಭಾಷಣ ಮಾಡಿಸಬೇಕೆಂದು ಆಹ್ವಾನಿಸಲು ಹೋಗಿದ್ದೆ. "ಈಗ ಸಾಧ್ಯವಿಲ್ಲ ಮುಂದೆ ನೋಡೋಣ" ಎಂದು ಕನ್ನಡದಲ್ಲಿ ಹೇಳಿದರು. ಅವರಿಗೆ ಕನ್ನಡ ಬರುವುದು ನನಗೆ ತಿಳಿದಿರಲಿಲ್ಲ. ತಮಗೆ ಇಷ್ಟು ಚೆನ್ನಾಗಿ ಕನ್ನಡ ಮಾತನಾಡಲು ಬರುತ್ತದಲ್ಲ ಎಲ್ಲಿ ಕಲಿತಿರಿ ಎಂದೆ. ಅದಕ್ಕೆ ರಾಜಾಜಿ ನಗುತ್ತ ನಾನು ಓದಿದ್ದು ಬೆಂಗಳೂರಿನಲ್ಲೆ ಎಂದರು. "ತಾವು ಗಾಂಧೀ ಸಾಹಿತ್ಯ ಸಂಘಕ್ಕೆ ಬಂದು ಆಶೀರ್ವಾದ ಮಾಡುವುದು ಯಾವಾಗ" ಎಂದೆ. ಅದಕ್ಕೆ ಅವರು ಒಂದು ಪುಸ್ತಕ ಕೊಡು ಎಂದು ಕೇಳಿ ತೆಗೆದುಕೊಂಡು ಪುಸ್ತಕದಲ್ಲಿ ಕನ್ನಡ ದಲ್ಲಿ "ಗಾಂಧೀ ಸಾಹಿತ್ಯ ಸಂಘಕ್ಕೆ ನನ್ನ ಆಶೀರ್ವಾದಗಳು–ಚಕ್ರವರ್ತಿ ರಾಜಗೋಪಾಲ ಚಾರ್ಯ 7-10-45" ಎಂದು ಬರೆದರು. ಈಗಲೂ ಅದು ಸಂಘದಲ್ಲಿ ಅವರ ನೆನಪಾಗಿದೆ. ಸಿದ್ದವನಹಳ್ಳಿ ಕೃಷ್ಣಶರ್ಮರ ಜೊತೆ ಕೆಲವು ರಚನಾತ್ಮಕ ಕಾರ್ಯಕರ್ತರ ಸಭೆಗೆ ಹೋಗಿದ್ದಾಗ ರಾಜಾಜಿ ಅವರ ವಾಣಿಯನ್ನು ಕೇಳುವ ಅವಕಾಶ ಸಿಕ್ಕಿತು. ಹತ್ತಿರ ಕುಳಿತು ಚರ್ಚಿಸುವ ಅವಕಾಶವು ಲಭಿಸಿತ್ತು.

## ವಿವಾಹ

1949ರಲ್ಲಿ ಇಂಜಿನಿಯರಿಂಗ್ ಪಾಸು ಮಾಡಿದೆ. ದೊಡ್ಡಬಳ್ಳಾಪುರದ ಶಿಬಿರ ದಲ್ಲಿ ಗ್ರಾಮಾಭಿವೃದ್ಧಿ ಕಾರ್ಯದಲ್ಲಿ ಭಾಗವಹಿಸಿದ್ದು ಆಗಲೇ. ಹಿಂದೂಸ್ಥಾನ ವಿಮಾನ ಕಾರ್ಖಾನೆಯಲ್ಲಿ ಕೆಲಸಕ್ಕೆ ಸೇರಿದೆ. ಸ್ವಲ್ಪದಿನಗಳಲ್ಲಿ ನನ್ನ ತಾಯಿ ನನಗೆ ಮದುವೆ ಮಾಡಲು ಇಚ್ಛಿಸಿದರು. ಹುಡುಗಿ ಸಸ್ಯಾಹಾರಿಯಾಗಿರಬೇಕು. ಬಡವರ ಮನೆ ಹೆಣ್ಣಾದರೂ ಸರಿ ಎಂದು ಭಾವಿಸಿದ್ದೆ. 1950ನೇ ಇಸವಿ. ಒಂದು ದಿನ ಸಂಜೆ ಸಿದ್ದವನಹಳ್ಳಿ ಕೃಷ್ಣಶರ್ಮರು ನನ್ನನ್ನು ಕರೆದು "ನಿಮ್ಮ ಭಾವನವರ ಸ್ನೇಹಿತರು ಕಾಳೇನಹಳ್ಳಿ ತಮ್ಮಯ್ಯನವರು ಈ ದಿನ ಬಂದು ನನ್ನನ್ನು ಕಂಡಿದ್ದರು. ನಂಜನಗೂಡಿನಿಂದ ಅವರ ಸ್ನೇಹಿತರಾದ ಪುಟ್ಟಯ್ಯನವರೂ ಬಂದಿದ್ದರು. ಅವರು ಕಂಟ್ರಾಕ್ಟರಂತೆ. ಅವರ ಮಗಳು ಎಸ್. ಎಸ್. ಎಲ್. ಸಿ. ವರೆಗೆ ಓದಿದ್ದಾಳಂತೆ. ಸಸ್ಯಾಹಾರಿ. ಹೋಗಿ ನೋಡಿ ಬಾ. ಮದುವೆ ಮಾಡಿಕೊಳ್ಳುವಿಯಂತೆ" ಎಂದರು. ಅದಕ್ಕೆ ನಾನು "ನೀವೇ ನೋಡಿಕೊಂಡು ಬನ್ನಿ ಸಾರ್" ಎಂದು ಬಿಟ್ಟೆ. ಅವರೂ ನನ್ನ ಸ್ನೇಹಿತ ಗೋಪಾಲಕೃಷ್ಣರಾವ್ ಅವರು ಮೈಸೂರಿಗೆ ಹೋಗಿ ನೋಡಿ ಕೊಂಡೂ ಬಂದರು. ಅವರ ಒಪ್ಪಿಗೆಯೇ ನನ್ನ ಒಪ್ಪಿಗೆಯಾಗಿತ್ತು. 1950ರಲ್ಲಿ ನಂಜನಗೂಡಿ ನಲ್ಲಿ ಮದುವೆಯಾಯಿತು. ಸಿದ್ದವನಹಳ್ಳಿ ಕೃಷ್ಣಶರ್ಮರ ಹೆಸರಲ್ಲೇ ಲಗ್ನಪತ್ರಿಕೆ ಅಚ್ಚಾಯಿತು. ಅವರೇ ನಿಂತು ಮದುವೆ ನೆರವೇರಿಸಿದರು. ಅವರ ಪತ್ನಿ ಪ್ರಮೀಳಮ್ಮ ನವರೂ ಬಂದಿದ್ದರು. ಶ್ರೀ ವಿ. ಎಸ್. ಕೃಷ್ಣಯ್ಯರ್, ಶ್ರೀ ಎಸ್. ಜಿ. ರಾಮ ಚಂದ್ರ, ಕಶ್ಯಪ್ ಮೊದಲಾದ ಸ್ನೇಹಿತರು ಬೆಂಗಳೂರಿನಿಂದ ಬಂದಿದ್ದರು. ಶ್ರೀ ಹೆಚ್. ಸಿ. ದಾಸಪ್ಪ ಹಾಗೂ ಯಶೋಧರಮ್ಮ ದಾಸಪ್ಪನವರೂ ಬಂದು ಆಶೀರ್ವದಿ ಸಿದರು. ಮನೆಗೆ ಬಂದ ನನ್ನ ಹೆಂಡತಿ ಜಯಲಕ್ಷ್ಮಿ ಲಕ್ಷ್ಮಿಯಾಗಿ ಬಂದಳು. ನನ್ನ ತಾಯಿಯ ಮಡಿಗೆ ಹೊಂದಿಕೊಂಡಳು. ನನಗಂತೂ ಬೆಳಿಗ್ಗೆಯಿಂದ ಸಂಜೆಯವರೆಗೆ ಕೆಲಸ. ಕಾರ್ಖಾನೆ, ಗಾಂಧೀ ಸಾಹಿತ್ಯ ಸಂಘ, ಶ್ರೀರಾಮ ಮಂದಿರ ಇತ್ಯಾದಿ. ಎಲ್ಲದರಲ್ಲೂ ಆಕೆಯ ಸಹಕಾರ ಇದ್ದೇ ಇತ್ತು. ಕಷ್ಟ ಸುಖಗಳಲ್ಲಿ ಭಾಗಿಯಾದಳು.

## ನನ್ನ ತಾಯಿಯವರು ಮಾರ್ಗದರ್ಶಿಯಾಗಿದ್ದರು

ನಮ್ಮ ತಂದೆ ಸತ್ತಾಗ ನನಗೆ ಹನ್ನೆರಡು ವರ್ಷ. ಮನೆಯಲ್ಲಿ ಉಳಿದವರು ನಮ್ಮ ತಾಯಿ, ತಂಗಿ ಪದ್ಮ ಹಾಗೂ ನಾನು. ಆಗ ಮಿಡಲ್‌ಸ್ಕೂಲ್ ಓದುತ್ತಿದ್ದೆ. ನನ್ನ ಸೋದರಿ ವೆಂಕಟಲಕ್ಷ್ಮಮ್ಮ ಮದುವೆಯಾಗಿ ಗಂಡನ ಮನೆಯಲ್ಲಿದ್ದಳು. ನನ್ನ ತಾಯಿಗೆ ನಾನೊಬ್ಬನೆ ಗಂಡು ಮಗನಾಗಿದ್ದುದರಿಂದ ನನ್ನನ್ನು ಕಂಡರೆ ಬಲು ಪ್ರೀತಿ ನಮ್ಮ ತಂದೆಗೆ ನಾನು ಹೆದರುತ್ತಿದ್ದೆ. ನನ್ನ ತಾಯಿ ನನ್ನನ್ನು ಬಿಟ್ಟು ಇರುತ್ತಿರಲಿಲ್ಲ. ಹೇಗಾಗಿ ನಾನು ಶಾಲೆಗೆ ಸೇರುವುದೂ ತಡವೇ ಆಯಿತು.

ಹುಡುಗ ಚೆನ್ನಾಗಿ ಓದಲಿ. ಅಪ್ಪನ ಹಾಗೆ ಒಳ್ಳೆ ಹೆಸರು ಪಡೆಯಲಿ ಎಂಬುದು ಅವರ ಆಸೆಯಾಗಿತ್ತು. ಆಗ ನಮಗೆ ಬರುತ್ತಿದ್ದ ಬಾಡಿಗೆ ಇಪ್ಪತ್ತುನಾಲ್ಕು ರೂಪಾಯಿಗಳು. ಹೇಗೆ ಸಂಸಾರ ನಿಭಾಯಿಸಿದರೋ ತಿಳಿಯದು. ಮನೆ ಖರ್ಚಿಗಾಗಿ ಊಟದ ಎಲೆ ಹೆಣೆದು ಮಾರಿದರು. ಸಗಣಿ ತಂದು ಬೆರಣಿ ಮಾಡಿ ಅದನ್ನು ಸೌದೆಯಾಗಿ ಬಳಸಿದರು. ಮನೆಯಲ್ಲಿ ಮಡಿಕೆ ಬಿಟ್ಟರೆ ಬೇರೆ ಪಾತ್ರೆ ಇರಲಿಲ್ಲ. ಹುಟ್ಟಿದ ಮಕ್ಕಳಲ್ಲಿ ಅನೇಕರು ತೀರಿಕೊಂಡ ಮೇಲೆ ದೇವಸ್ಥಾನಕ್ಕೆ ಹೋಗಿ ಬರುವುದು ರೂಢಿಯಾಯಿತು. ಭಾರತ, ರಾಮಾಯಣ, ಪುರಾಣ ಇವುಗಳನ್ನು ಕೇಳಿ ಮನಸ್ಸಿಗೆ ನೆಮ್ಮದಿ ತಂದುಕೊಳ್ಳುತ್ತಿದ್ದರು. ಮಾಂಸಾಹಾರ ತ್ಯಜಿಸಿದ್ದರು. ಶನಿವಾರ ಒಪ್ಪತ್ತು ಆಮೇಲಾಮೇಲೆ ಸೋಮವಾರ, ಗುರುವಾರ ಕೂಡ ಒಪ್ಪತ್ತು ಮಾಡುತ್ತಿದ್ದರು. ಏಕಾದಶಿ ದಿನವಂತೂ ನಿರಾಹಾರ. ದೇವರಪೂಜೆ ಮಾಡಿ ತುಳಸಿತೀರ್ಥ ಕೊಡುತ್ತಿದ್ದೆ. ಏನಾದರೂ ಉಪಹಾರ ತೆಗೆದುಕೊಂಡರೆ ಒಂದೆರಡು ಬಾಳೆಹಣ್ಣು, ಒಂದು ಲೋಟ ಹಾಲು. ಮರುದಿನ ಬೆಳಿಗ್ಗೆ ಆರುಗಂಟೆಗೆ ಪೂಜೆಮಾಡಿ ದ್ವಾದಶಿ ತೀರ್ಥ ಕೊಡಬೇಕು. ಅನಂತರ ಊಟ. ಅಗಸೆ ಸೊಪ್ಪು ಎಲ್ಲಿದ್ದರೂ ತರಬೇಕಿತ್ತು. ಶ್ರಾವಣ ಶನಿವಾರಗಳಲ್ಲಿ ಐದು ಮನೆಗೆ ಹೋಗಿ ಗೋವಿಂದನ ಹೆಸರು ಹೇಳಿ ಭಿಕ್ಷೆ ಎತ್ತಿ ತಂದಿಡಬೇಕು. ಕೊನೆಯವಾರ ನಾಲ್ಕು ಜನಕ್ಕೆ ಊಟ; ಭಿಕ್ಷೆ ತಂದ ಅಕ್ಕಿಯಲ್ಲಿ ತಂಬಿಟ್ಟು. ಧನುರ್ಮಾಸ ಬಂದರೆ ನಾಲ್ಕು ಗಂಟೆಗೆ ಎದ್ದು ಮಲ್ಲೇಶ್ವರದ ಕೆರೆಯಲ್ಲಿ ಸ್ನಾನಮಾಡಿ ಬಂದು ದೇವರಿಗೆ ಪ್ರದಕ್ಷಿಣೆ ಹಾಕಿ ಆರು ಗಂಟೆಗೆ ಮನೆಗೆ ಬರುತ್ತಿದ್ದರು. ಸನ್ಯಾಸಿಗಳು ಮಠಾಧೀಶರು ಎಂದರೆ ಬಹಳ ಭಕ್ತಿ. ತಿರುಪತಿಗೆ ವರ್ಷಕ್ಕೊಮ್ಮೆ ಹೋಗಲೇ ಬೇಕು. ಒಂದು ವೇಳೆ ನನಗೆ ಹೋಗಲಾಗದಿದ್ದರೆ ಯಾರಾದರೂ ಜೊತೆಮಾಡಿಕೊಂಡು ಹೋಗಿ ಬರುತ್ತಿದ್ದರು.

ನನ್ನ ಬಂಧುಗಳಾದ ಶ್ರೀ ಕೆಂಪಯ್ಯನವರು ದೈವಭಕ್ತರು. ಎಂಟು ದಿನಗಳಿಗೊಮ್ಮೆಯಾದರೂ ಬಂದು ನನ್ನ ತಾಯಿಯನ್ನು ನೋಡಿಕೊಂಡು ಹೋಗುತ್ತಿದ್ದರು. ಅವರ ಜೊತೆಯಲ್ಲೆ ನನ್ನ ತಾಯಿ ಕಾಶಿ, ರಾಮೇಶ್ವರ ಯಾತ್ರೆ ಮಾಡಿ ಬಂದರು. ಬಂದಮೇಲೆ ಕಾಯಿಲೆ ಮಲಗಿದರು. ಬದುಕುವುದಿಲ್ಲ ಎಂದು ತಿಳಿದಿದ್ದೆವು. ದೈವಶಕ್ತಿಯಿಂದ ಗುಣಮುಖರಾದರು. ಕಾಯಿಲೆ ಇದ್ದಾಗಲೂ ಸ್ನಾನಮಾಡದೆ ಮಲಗುತ್ತಿರಲಿಲ್ಲ. ಹೊಟ್ಟೆಗೆ ಏನೂ ತೆಗೆದುಕೊಳ್ಳುತ್ತಿರಲಿಲ್ಲ. ತುಂಬ ಮಡಿಮಾಡುತ್ತಿದ್ದರು. ಮನೆಮುಂದೆ ಇದ್ದ ನಲ್ಲಿಯಲ್ಲಿ ನೀರು ಹಿಡಿಯಬೇಕಾದರೆ ಚೆನ್ನಾಗಿ ತೊಳೆದು ನೀರು ಹಾಕಿ ಶುದ್ಧ ಮಾಡದೆ ನೀರು ಹಿಡಿಯುತ್ತಿರಲಿಲ್ಲ. ಯಾವಾಗಲಾದರೂ ಬೆಳಿಗ್ಗೆ ಸ್ನಾನಮಾಡಿ ಮಡಿಯಲ್ಲಿದ್ದಾಗ ಏನಾದರೂ ತಗುಲಿದರೆ ಮತ್ತೆ ಸ್ನಾನಮಾಡುತ್ತಿದ್ದರು. ಒಮ್ಮೆ ನಾನೇ ಹಾಸ್ಯಮಾಡಿದ್ದೆ. "ನಲ್ಲಿ ನೀರನ್ನು ಇಷ್ಟು ಶುದ್ಧ ಮಾಡುತ್ತೀರಲ್ಲ, ನಲ್ಲಿ ಸೋರದ ಹಾಗೆ ಕೊಳಾಯಿ ಮಾರ್ಗ ಹಾಕಿದ್ದಾರಲ್ಲ ಆ ಮಾರ್ಗ ಯಾವಾಗಲೂ ಮಡಿಯಾಗಿರುತ್ತದೆಯೆ" ಎಂದು ಕೇಳಿದ್ದೆ. ಬೈದು ಕಳುಹಿಸಿದ್ದರು.

ಸಣ್ಣ ವಯಸ್ಸಿನಿಂದಲೂ ತಾಯಿ ಆಶ್ರಯದಲ್ಲಿ ಬೆಳೆದವನು ನಾನು. ಅವರನ್ನು ಕೇಳದೆ ಅವರಿಗೆ ಹೇಳದೆ ಯಾವ ಕೆಲಸವನ್ನು ಮಾಡುತ್ತಿರಲಿಲ್ಲ. ಅವರಿಗೆ ನಮಸ್ಕರಿಸಿ ಹೊರಗೆ ಹೊರಟರೆ ಎಲ್ಲ ಕೆಲಸವೂ ಫಲಿಸುತ್ತಿತ್ತು. ಶಕ್ತಿ ಇರುವವರೆಗೆ ಮನೆ ಕೆಲಸ ತೋಟದ ಕೆಲಸ ಮಾಡುತ್ತಲೇ ಇದ್ದರು. ಸುಮ್ಮನೆ ಕುಳಿತುಕೊಂಡಿರದ ಜೀವ. ಮನೆ ವ್ಯವಹಾರವನ್ನು ಅವರೇ ನೋಡಿಕೊಳ್ಳುತ್ತಿದ್ದರು. ಮಿತವ್ಯಯದ ಪಾಠ ಅವರಿಂದಲೇ ಕಲಿತೆ.

ಅವರಿಗಿದ್ದ ಒಂದೇ ಕೊರಗು ಎಂದರೆ ನನಗೆ ಮಕ್ಕಳಿಲ್ಲವೆಂಬುದು. ಎಲ್ಲ ದೇವರುಗಳ ಸೇವೆಯನ್ನು ಮಾಡಿಸಿದರು. ತೀರ್ಥಯಾತ್ರೆಯಾಯಿತು. ನಾಗರ ಪ್ರತಿಷ್ಠೆ ಸಹ ಆಯಿತು. ನನ್ನೆದುರಿಗೆ ಏನು ಹೇಳದೆ ಇದ್ದರೂ ಬೇರೆಯವರೊಡನೆ ಹೇಳಿಕೊಳ್ಳುತ್ತಿದ್ದರು. ಎರಡನೆ ಮದುವೆ ಮಾಡಿಕೊಳ್ಳುವ ಬಗ್ಗೆ ಸೂಚನೆ ಕೂಡ ಕೊಟ್ಟರು. ನಂತರ, ಗೆಳೆಯರ ಮೂಲಕ ಹೇಳಿಸಿದರು. "ಮಕ್ಕಳ ಫಲ ದೈವೇಚ್ಛೆ, ನಮ್ಮ ಹಿಂದಿನ ಜನ್ಮದ ಕರ್ಮಫಲ. ಯೂರೋಪು ದೇಶದಲ್ಲಿ ಅನೇಕರಿಗೆ ಮಕ್ಕಳಿಲ್ಲ. ಅವರೇನು ಮಾಡಿಪ್ಪಾರೆ? ಆದ್ದರಿಂದ ಅದರ ಚಿಂತೆ ನನಗಿಲ್ಲ" ಎಂದೆ. ಈಗ ನನಗೆ ಒಬ್ಬಳೇ ಮಗಳು ಶಶಿಕಲಾ.

ನನ್ನ ತಾಯಿ ಸಾಯುವುದಕ್ಕೆ ಮೊದಲು ಎಂಟು, ಹತ್ತು ವರ್ಷಗಳಿಂದ ಕಾಯಿಲೆಯಿಂದ ನರಳುತ್ತಿದ್ದರು. ಯಾರಾದರೊಬ್ಬರ ರಕ್ಷಣೆ ಬೇಕಾಗುತ್ತಿತ್ತು. ನನ್ನ ಹೆಂಡತಿಯೇ ಅವರನ್ನು ನೋಡಿಕೊಳ್ಳುತ್ತಿದ್ದಳು. ಅವರಿಗೂ ನನ್ನ ಹೆಂಡತಿಗೂ ಬಹಳ ಹೊಂದಾಣಿಕೆ ಇದ್ದುದರಿಂದ ಕುಟುಂಬದಲ್ಲಿ ನನಗೆ ಹೆಚ್ಚು ಸಂತೋಷವಾಗಿ ಕಾಲ ಕಳೆಯಲು ಸಾಧ್ಯವಾಗಿತ್ತು. ನನ್ನ ತಾಯಿ ಸಾಯುವ ಮೊದಲು ತಮ್ಮ ಕೈಯ್ಯಲ್ಲಿದ್ದ ಒಡವೆಗಳು ಹಾಗೂ ಮನೆ ಸಾಮಾನುಗಳನ್ನು ಪಟ್ಟಿಮಾಡಿದರು. ಒಡವೆಗಳನ್ನು ಹೆಣ್ಣುಮಕ್ಕಳಿಗೆ ಹಂಚುವುದು ಎಂದು ತಿಳಿಸಿದರು. ನನ್ನ ಭಾಗದ ಪ್ರಸ್ತಾಪವೂ ಬಂತು. ನನಗೆ ಇದು ಆಶ್ಚರ್ಯದ ವಿಷಯವಾಗಿತ್ತು. ಕಷ್ಟಪಟ್ಟು ಓದಿಸಿದ್ದಾರೆ. ಅದೇ ದೊಡ್ಡ ಆಸ್ತಿ ಎಂಬುದೇ ನನ್ನ ಭಾವನೆಯಾಗಿತ್ತು.

1972ರಲ್ಲಿ ನನ್ನ ತಾಯಿ ತೀರಿಕೊಂಡರು. ಅಂದು ಏಕಾದಶಿ. ನೂರಾರು ಜನ ಬಂದು ಶ್ರದ್ಧಾಂಜಲಿ ಸಲ್ಲಿಸಿದರು. ನನಗೆ ದೊಡ್ಡ ಶಕ್ತಿಯನ್ನೇ ಕಳೆದುಕೊಂಡಂತಾಯಿತು. ನನ್ನ ಹೆಂಡತಿಗೂ ಆ ದುಃಖ ತಾಳಲು ಆಗಲಿಲ್ಲ. ಆದರೆ ಜಗತ್ತಿನಲ್ಲಿ ಯಾವುದೂ ಸ್ಥಿರವಲ್ಲವಾದುದರಿಂದ ಎಲ್ಲವನ್ನು ಮರೆಯಬೇಕಾಯಿತು.

### ಸಾಹಿತ್ಯ ರಚನೆ–ಸಾಹಿತಿ ಮಿತ್ರರು

ನನಗೆ ಮೊದಲು ಪರಿಚಯವಿದ್ದ ಸಾಹಿತಿ ಎಂದರೆ ಕಾದಂಬರಿಕಾರ ಶ್ರೀ ನಿರಂಜನರು. 1940-45ರಲ್ಲಿ ಅವರು ನಮ್ಮ ಮನೆಯಲ್ಲೇ ಬಾಡಿಗೆಗಿದ್ದರು. ಅವರು

ಜ್ಞಾನಗಂಗೋತ್ರಿ ಪುಸ್ತಕ ಮಾಲೆ ಆರಂಭಿಸಿದ ಮೇಲೆ ಅವರೊಡನೆ ನಿಕಟ ಸಂಪರ್ಕ ಬೆಳೆಯಿತು.

ಶ್ರೀ ತ. ರಾ. ಸುಬ್ಬರಾವ್ (ತ. ರಾ. ಸು.) ಅವರ ಪರಿಚಯವಾಗಿದ್ದು ಸಿದ್ದವನಹಳ್ಳಿ ಕೃಷ್ಣಶರ್ಮರ ಮನೆಯಲ್ಲೆ. ಬೆಂಗಳೂರಿಗೆ ತ. ರಾ. ಸು. ಅವರು ಬೆಂಗಳೂರಿಗೆ ಬಂದಾಗ ಶ್ರೀ ಕೃಷ್ಣಶರ್ಮರ ಮನೆಯಲ್ಲೆ ಇಳಿದುಕೊಂಡಿದ್ದರು. ತ. ರಾ. ಸು. ವಿಶ್ವ ಕರ್ಣಾಟಕ ಪತ್ರಿಕೆಗೆ ಲೇಖನಗಳನ್ನು ಬರೆಯುತ್ತಿದ್ದರು.

ಶ್ರೀ ಕೃಷ್ಣಶರ್ಮರು ಕನ್ನಡ ಸಾಹಿತ್ಯ ಪರಿಷತ್ತಿನ ಖಜಾಂಚಿಗಳಾಗಿದ್ದರು. ಆಗ ನಾನು ಪರಿಷತ್ತಿನ ಸಂಪರ್ಕ ಅಷ್ಟು ಇಟ್ಟು ಕೊಂಡಿರಲಿಲ್ಲ. ಪರಿಷತ್ತಿನ ಸಂಬಂಧ ಹೆಚ್ಚಾಗಿ ಬೆಳೆದದ್ದು ಶ್ರೀ ಜಿ. ನಾರಾಯಣರು ಪರಿಷದಧ್ಯಕ್ಷರಾದಮೇಲೆ. ಪರಿಷತ್ತಿಗೆ ಆಜೀವ ಸದಸ್ಯನಾದೆ. ಆಗಾಗ ನಾರಾಯಣರನ್ನು ನೋಡಲು ಹೋಗುತ್ತಿದ್ದೆ. ಗಾಂಧೀ ಸಾಹಿತ್ಯ ಸಂಘದ ಪರವಾಗಿ ಕಾರ್ಯಕಾರಿ ಸಮಿತಿ ಸದಸ್ಯರನ್ನಾಗಿ ಆರಿಸಿ ಕೊಂಡರು. ಸಮಿತಿಯು ಭಾನುವಾರ ಹೆಚ್ಚಾಗಿ ಸಭೆ ಸೇರುತ್ತಿದುದರಿಂದ ಹೆಚ್ಚು ಕಡಿಮೆ ಎಲ್ಲಾ ಸಭೆಗಳಿಗೂ ಹೋಗುತ್ತಿದ್ದೆ. ಸಾಹಿತಿಗಳ ವಿದ್ವಾಂಸರ ಪರಿಚಯ ಹೆಚ್ಚಾಗಿ ಆದದ್ದು ಆಗಲೇ. ನಾನು ಹೇಳುತ್ತಿರುವುದು 1975-76ರ ಸಮಯದ ಚಟುವಟಿಕೆಗಳನ್ನು ಕುರಿತು. ಶ್ರೀ ನಾರಾಯಣರು ಸಭೆಯ ಅಧ್ಯಕ್ಷತೆ ವಹಿಸು ತ್ತಿದ್ದರು. ಅವರು ಸಭೆ ನಡೆಸುತ್ತಿದ್ದುದೇ ಹೊಸ ರೀತಿ. ಎಲ್ಲಾ ವಿಷಯಗಳಿಗೂ ಚರ್ಚೆಗಳಿಗೂ ಎಲ್ಲರಿಗೂ ಕಾಲಾವಕಾಶ ಉಂಟು. ಕೊನೆಯಲ್ಲಿ ತಮ್ಮ ಅಭಿಪ್ರಾಯ ಸೂಚಿಸಿ ಎಲ್ಲರ ಮನಸ್ಸನ್ನು ಒಲಿಸಿಕೊಳ್ಳುತ್ತಿದ್ದರು. ಅವರು ದೊಡ್ಡ ಯೋಜಕರು. ಎಲ್ಲ ಕೆಲಸ ಕಾರ್ಯಕ್ರಮಗಳಿಗೂ ತಮ್ಮದೇ ಆದ ಯೋಜನೆ ಸಿದ್ಧ. ಪರಿಷತ್ತು ತ್ರೈವಾರ್ಷಿಕ ಹಾಗೂ ಪಂಚವಾರ್ಷಿಕ ಯೋಜನೆಗಳ ಹೆಸರು ಕೇಳಿದ್ದೆ ಅವರ ಕಾಲದಲ್ಲಿ. ಅವರ ಜೊತೆ ಕೆಲಸ ಮಾಡಿದ್ದರಿಂದ ಅನೇಕ ವಿಷಯಗಳನ್ನು ಕಲಿತೆ. ಶಿವಮೊಗ್ಗದಲ್ಲಿ ಶ್ರೀ ಎಸ್. ವಿ. ರಂಗಣ್ಣನವರ ಅಧ್ಯಕ್ಷತೆಯಲ್ಲಿ ನಡೆದ ಸಾಹಿತ್ಯ ಸಮ್ಮೇಳನ, ದೆಹಲಿಯಲ್ಲಿ ಶ್ರೀ ಜಿ. ಪಿ. ರಾಜರತ್ನಂ ಅವರ ಅಧ್ಯಕ್ಷತೆಯಲ್ಲಿ ನಡೆದ ಸುವರ್ಣ ಸಾಹಿತ್ಯ ಸಮ್ಮೇಳನಗಳಿಗೆ ಹೋಗಿದ್ದೆ. ಅಚ್ಚುಕಟ್ಟಾದ ಕಾರ್ಯಕ್ರಮ ಗಳು. ಉತ್ತಮ ವ್ಯವಸ್ಥೆ. ಇವೆಲ್ಲ ಶ್ರೀ ನಾರಾಯಣರ ಪರಿಶ್ರಮದ ಫಲ. ಪರಿಷತ್ತಿಗೆ ಹೊಸಮಾರ್ಗ ತೋರಿಸಿದವರು ಶ್ರೀ ನಾರಾಯಣ್. ನಗರಸಭೆಯ ಮೇಯರ್ ಆಗಿದ್ದರು. ಪರಿಷತ್ತಿಗೆ ಹಲವು ವರ್ಷಗಳು ಅಧ್ಯಕ್ಷರಾಗಿದ್ದರು. ನನಗೆ ಅವರ ಪರಿಚಯವಾಗಿದ್ದು ಶ್ರೀ ವಿ. ಎಸ್. ಕೃಷ್ಣಯ್ಯರ್ ಮೂಲಕ ಪರಿಷತ್ತಿನ ಚಟುವಟಿಕೆ ಗಳಿಂದಾಗಿ ನನ್ನ ಸಾಹಿತ್ಯ ಸೇವೆಗೆ ಪ್ರೋತ್ಸಾಹ ದೊರೆಯಿತು.

ಪತ್ರಿಕೆಗಳಿಗೆ ಕನ್ನಡದಲ್ಲಿ ಲೇಖನಗಳನ್ನು ಬರೆಯಲು ಪ್ರಾರಂಭಿಸಿದ್ದು ನಾನು ಕಾರ್ಖಾನೆಯ ನಿಮಿತ್ತ ಜರ್ಮನಿಗೆ ಹೋದಾಗಲೇ. ಗಾಂಧೀ ಸಾಹಿತ್ಯ ಸಂಘದಲ್ಲಿ ನಡೆಯುತ್ತಿದ್ದ ಉಪನ್ಯಾಸಗಳ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿದ್ದೆ, ಆಗ

ಆ ವಿಷಯಗಳನ್ನು ಟಿಪ್ಪಣಿ ಮಾಡಿಕೊಳ್ಳುತ್ತಿದ್ದೆ. ಆದರೆ ಬರೆಯುವುದಕ್ಕೆ ಹಾಗೂ ಪ್ರಕಟಿಸುವುದಕ್ಕೆ ಯತ್ನಿಸಿರಲಿಲ್ಲ. ಅನೇಕ ಸಾರಿ ಶ್ರೀ ಕೃಷ್ಣಶರ್ಮರಿಗೆ ತೋರಿಸಿಯೂ ಇದ್ದೆ. ತಾಯಿನಾಡು ಪತ್ರಿಕೆಗೆ ಒಂದೆರಡು ಜರ್ಮನಿಯಲ್ಲಿನ ಅನುಭವಗಳನ್ನು ಕುರಿತು ಲೇಖನಗಳನ್ನು ಬರೆದಿದ್ದೆ. ಅಲ್ಲಿನ ಸಂಪಾದಕ ಶ್ರೀ ಶ್ರೀನಿವಾಸನ್ ಅವನ್ನು ಪ್ರಕಟಿಸಿದ್ದರು. ಜರ್ಮನಿಗೆ ಹೋಗುವಾಗ ಕೃಷ್ಣಶರ್ಮರು ನೀಡಿದ್ದ ಸಲಹೆಯಂತೆ ಜರ್ಮನಿಯಲ್ಲಿ ನಿತ್ಯವೂ ಕಂಡದ್ದನ್ನು ಡೈರಿಯಲ್ಲಿ ಬರೆದುಕೊಳ್ಳುತ್ತಿದ್ದೆ. ಜರ್ಮನಿಯಿಂದ ಬಂದಮೇಲೆ ದಿನನಿತ್ಯ ಸಂಜೆ ಕಾರ್ಖಾನೆಯಿಂದ ಬಂದತಕ್ಷಣ ಸುಮಾರು ಒಂದು ವರ್ಷಕಾಲ ಅಲ್ಲಿ ಸಂಗ್ರಹಿಸಿದ್ದ ವಿವರಗಳನ್ನು ಒಂದು ಪುಸ್ತಕ ರೂಪದಲ್ಲಿ ಬರೆದೆ. ಅದನ್ನು ಶರ್ಮಾಜಿಯವರಿಗೆ ತೋರಿಸಿದೆ. ಗೆಳೆಯ ಸೀಲತ್ತಳ್ಳಿ ಕಸ್ತೂರಿ, ಮತ್ತೂರು ಕೃಷ್ಣಮೂರ್ತಿ ಇವರುಗಳೂ ಓದಿ ಮೆಚ್ಚುಗೆ ಸೂಚಿಸಿದರು. ಶ್ರೀ ಶರ್ಮಾಜಿಯವರು ಇದನ್ನು ಗಾಂಧೀ ಸಾಹಿತ್ಯ ಸಂಘದಿಂದಲೇ ಪ್ರಕಟಿಸೋಣ ಎಂದರು. ಮುದ್ರಣವೂ ಆಯಿತು. ಅದೇ 'ನಾ ಕಂಡ ಜರ್ಮನಿ' ಗ್ರಂಥವಾಗಿ ಹೊರಬಂದಿತು. ಈ ಪುಸ್ತಕವನ್ನು ಮೈಕೊ ಕಾರ್ಖಾನೆಯ ಟೆಕ್ನಿಕಲ್ ಡೈರೆಕ್ಟರ್ ಆಗಿದ್ದ ಕೆ. ಹೆಚ್. ಮಾರ್ಟಿನ್‌ರವರ ಅಧ್ಯಕ್ಷತೆಯಲ್ಲಿ ಡಾ|| ಎಂ. ಶಿವರಾಂ ಬಿಡುಗಡೆ ಮಾಡಿದರು. ತಮ್ಮ ಭಾಷಣದಲ್ಲಿ ಶಿವರಾಂ ಅವರು ಪುಸ್ತಕವನ್ನು ವಿಮರ್ಶಿಸುತ್ತಾ, "ಶ್ರೀನಿವಾಸಯ್ಯನವರು ರಾತ್ರಿ ಕಾಲದಲ್ಲಿ ಜರ್ಮನಿ ನೋಡಲಿಲ್ಲ. ಬರೀ ಬೆಳಕನ್ನು ಮಾತ್ರ ವಿವರಿಸಿದ್ದಾರೆ. ರಾತ್ರಿಯ ಕತ್ತಲನ್ನು ಅಲ್ಲಿ ತಂದಿಲ್ಲ" ಎಂದರು.

ಕೆಲವು ವರ್ಷಗಳಲ್ಲಿ 'ನಾ ಕಂಡ ಜರ್ಮನಿ' ಎರಡನೆಯ ಮುದ್ರಣ ಕಂಡಿತು. ಮ್ಯಾಕ್ಸ್‌ಮುಲ್ಲರ್ ಭವನದ ಡೈರೆಕ್ಟರ್ ಸ್ವಾಹೆ ಅಧ್ಯಕ್ಷತೆಯಲ್ಲಿ ಖ್ಯಾತ ಸಾಹಿತಿ ಎಚ್. ಎಲ್. ನಾಗೇಗೌಡರು ಪುಸ್ತಕವನ್ನು ಬಿಡುಗಡೆ ಮಾಡಿದರು. ಮೈಸೂರಿನ ಸುರುಚಿ ಪ್ರಕಾಶನದವರು ಅದನ್ನೆ ಒಂದು ಸಣ್ಣ ಪುಸ್ತಕವಾಗಿ ಹೊರತಂದರು. ಪಿ. ಯು. ಸಿ. ವಿದ್ಯಾರ್ಥಿಗಳಿಗಾಗಿ 'ನಾ ಕಂಡ ಜರ್ಮನಿ' ಪಠ್ಯವೂ ಆಗಿತ್ತು. ರಾಜ್ಯ ಸಾಹಿತ್ಯ ಅಕಾಡೆಮಿಯೂ ಈ ಗ್ರಂಥಕ್ಕೆ ಪ್ರಥಮ ಬಹುಮಾನ ನೀಡಿತು. ಇದು ಸಂಘದ ಪ್ರಕಟಣೆ. ಅದರಿಂದ ಬಂದ ಹಣದ ಸ್ವಲ್ಪ ಭಾಗವನ್ನು ಮೈಸೂರು ವಿಶ್ವ ವಿದ್ಯಾನಿಲಯದ ಇಬ್ಬರು ಬಡ ಹುಡುಗರಿಗೆ ವಿದ್ಯಾರ್ಥಿ ವೇತನ ಹಾಗೂ ಕನ್ನಡ ವಿಭಾಗದ ಯಾವ ವಿದ್ಯಾರ್ಥಿ ಹೆಚ್ಚು ಅಂಕಗಳಿಸುತ್ತಾರೋ ಅವರಿಗೆ ಚಿನ್ನದ ಪದಕ ನೀಡಲು ನೀಡಿದೆ. ಉಳಿದ ಹಣವನ್ನು ನನ್ನ ತಾಯಿಯವರ ಹೆಸರಿನಲ್ಲಿ ಪುಸ್ತಕ ಪ್ರಕಟಣೆಗಾಗಿ ಕೊಟ್ಟೆ. ನಾ ಕಂಡ ಜರ್ಮನಿ ಎರಡನೆ ಮುದ್ರಣಕ್ಕೆ ಮುನ್ನುಡಿ ಬರೆದುಕೊಟ್ಟವರು ಶ್ರೀ ದೇ. ಜವರೇಗೌಡರು. ನಾನು ಮೈಸೂರಿಗೆ ಹೋಗಿದ್ದಾಗ ಅವರನ್ನು ಒಮ್ಮೆ ಭೇಟಿಯಾಗಿದ್ದೆ. ಆಗ ಕನ್ನಡ ವಿಶ್ವಕೋಶದ ಪ್ರಕಟಣೆ ಆರಂಭ ವಾಗಿತ್ತು. ಜವರೇಗೌಡರು ವಿಶ್ವಕೋಶದಲ್ಲಿ ತಾಂತ್ರಿಕ ಲೇಖನಗಳನ್ನು ಬರೆಯಲು ತಿಳಿಸಿದರು. ಆಗಲಿ ಎಂದೆ. ನಾನು ರಜೆ ಮುಗಿಸಿಕೊಂಡು ಬೆಂಗಳೂರಿಗೆ ಬಂದಾಗ

ಆಗಲೇ ಮೈಸೂರು ವಿಶ್ವವಿದ್ಯಾನಿಲಯದಿಂದ ಕಾಗದ ಬಂದಿತ್ತು. ಲೇಖನ ಕೋರಿ ಕಾಗದ ಬರೆದಿದ್ದರು ವಿಶ್ವಕೋಶದ ಸಂಪಾದಕ ಶ್ರೀ ಕೆ. ಟಿ. ವೀರಪ್ಪ. ಹೀಗಾಗಿ ವಿಶ್ವಕೋಶಕ್ಕೆ ಕೆಲವು ಲೇಖನಗಳನ್ನು ಬರೆದುಕೊಡುವ ಭಾಗ್ಯ ನನ್ನದಾಯಿತು. ಇದೇ ರೀತಿ ನಿರಂಜನರು ಜ್ಞಾನ ಗಂಗೋತ್ರಿಯ 'ಯಂತ್ರ ಜಗತ್ತು' ಸಂಪುಟಕ್ಕಾಗಿ ರೈಲು ಗಾಡಿಗೆ ಸಂಬಂಧಿಸಿದಂತೆ ಛಾಯಾ ಚಿತ್ರಗಳನ್ನೊದಗಿಸಲು ಕೇಳಿದರು. ಲೇಖನಗಳನ್ನು ಬರೆಯಲು ತಿಳಿಸಿದರು. ನಿರಂಜನರ ಸಂಪರ್ಕ ಒದಗಿತು. ಸಾಹಿತ್ಯ ರಚನೆಗೆ ನೆರವಾಯಿತು.

ನಮ್ಮ ಕಾರ್ಖಾನೆಯ ಮುಖ್ಯ ತಯಾರಿಕೆಯಾದ ರೈಲುಗಾಡಿಗಳ ರಫ್ತು ವಿಚಾರದಲ್ಲಿ 'ಶ್ರೀಲಂಕಾ' (ಸಿಲೋನ್)ಗೆ ಹೋಗಿ ಬಂದೆ. ಶ್ರೀಲಂಕಾ ಕುರಿತು ಒಂದು ಸಣ್ಣ ಪುಸ್ತಕವನ್ನು ನಂತರ ಬರೆದೆ. ಈ ಹೊತ್ತಿಗೆಯನ್ನು ಬೆಂಗಳೂರು ವಿಶ್ವವಿದ್ಯಾನಿಲಯದವರು ತಮ್ಮ ಪ್ರಚಾರೋಪನ್ಯಾಸ ಮಾಲೆಯಲ್ಲಿ ಪ್ರಕಟಿಸಿದ್ದಾರೆ. ನನ್ನ ಒಲವಿನ ವಿಷಯವಾದ ಪ್ರಕೃತಿ ಜೀವನ ಹಾಗೂ ಪ್ರಕೃತಿ ಚಿಕಿತ್ಸೆಗೆ ಸಂಬಂಧಿಸಿದಂತೆ ಪ್ರಕೃತಿ ಜೀವನ ಯಾಕೆ? ಹೇಗೆ? ಎಂಬ ಸಣ್ಣ ಪುಸ್ತಕವನ್ನು ಹಾಗೂ ನಿಸರ್ಗ ಚಿಕಿತ್ಸಾಚಾರ್ಯ ಕೆ. ಲಕ್ಷ್ಮಣಶರ್ಮರ ಜೀವನ ಚಿತ್ರವನ್ನು ಕೊಡುವ ಒಂದು ಪುಸ್ತಕವನ್ನು ಪ್ರಕೃತಿಜೀವನ ಕೇಂದ್ರ, ಮಲ್ಲೇಶ್ವರಂ ಇವರು ಪ್ರಕಟಿಸಿದರು. ಡಾ|| ನಾ. ಸು. ಹರ್ಡಿಕರ್ ಅವರ ಜೀವನ ಚರಿತ್ರೆ ಕುರಿತ ಪುಸ್ತಕ ಇನ್ನೂ ಪ್ರಕಟಣೆಯ ಹಂತದಲ್ಲಿದೆ. ಮಕ್ಕಳಿಗಾಗಿ ಶಶಿ ಕಂಡ ಜರ್ಮನಿ ಹಾಗೂ ಸಿಂಹಳದಲ್ಲಿ ಶಶಿ ಎಂಬ ಸಣ್ಣ ಪುಸ್ತಕಗಳನ್ನು ಬರೆದಿದ್ದೇನೆ.

**ಬೆಂಗಳೂರು ಎಜುಕೇಶನ್ ಸೊಸೈಟಿ**

ಮಲ್ಲೇಶ್ವರದಲ್ಲಿ ಬೆಂಗಳೂರು ಎಜುಕೇಶನ್ ಸೊಸೈಟಿ ಎಂಬ ಹೆಸರಿನಲ್ಲಿ ಶಾಲೆ ಇದ್ದು ಅಲ್ಲಿ ಒಂದರಿಂದ ಏಳನೆ ತರಗತಿಯವರೆಗೆ ಪಾಠಗಳನ್ನು ಹೇಳಿಕೊಡಲಾಗುತ್ತಿದೆ. ಉತ್ತಮ ಸಂಸ್ಥೆ ಎಂಬ ಹೆಸರು ಇದಕ್ಕಿದೆ. ಇದರ ಮೊದಲ ಅಧ್ಯಕ್ಷರು ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರೇ. ಅವರು ದಿವಂಗತರಾದ ಮೇಲೆ ಶ್ರೀ ಬಿ. ಟಿ. ಪಾರ್ಥಸಾರಥಿ ಅಧ್ಯಕ್ಷರಾದರು. ಶಾಸಕ ಶ್ರೀ ಪಿ. ರಾಂದೇವ್ ಕಾರ್ಯದರ್ಶಿಯಾದರು. ನಾನಾದರೂ ಶಾಲೆಗಳಲ್ಲಿ ಹೆಚ್ಚು ಕೆಲಸ ಮಾಡಿದವನಲ್ಲ. ದಿವಂಗತ ರಾಮರಾಯರು ಕಾರ್ಯದರ್ಶಿ ಆದಮೇಲೆ ನನ್ನನ್ನು ಖಜಾಂಚಿಯನ್ನಾಗಿ ಮಾಡಿದರು. ಇಂಥ ವಿಷಯಗಳಿಗೆಲ್ಲ ನನಗೆ ಶರ್ಮರದೇ ತರಪೇತಿ. ಸಂಸ್ಥೆಯ ಹಣಕಾಸಿನ ವಿಚಾರ ನನ್ನದಾಯಿತು. ಸ್ವಲ್ಪ ಕಷ್ಟದ ಕೆಲಸ. ಲೆಕ್ಕಾಚಾರ ಸರಿಯಿದ್ದರೇನೆ ಸಂಸ್ಥೆ ಚೆನ್ನಾಗಿ ನಡೆಯುವುದು. ಸುಮಾರು ಒಂದೂವರೆ ವರ್ಷ ಹಿಡಿಯಿತು ಒಂದು ಹದಕ್ಕೆ ಬರಲು. ತಿಂಗಳಿಗೊಮ್ಮೆ ಲೆಕ್ಕವನ್ನು ಸಮಿತಿಗೆ ಒಪ್ಪಿಸುತ್ತಿದ್ದೆ. ಶಾಲೆಗೆ ಕಟ್ಟಡ ಸಾಲದಾಯಿತು. ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು ಸ್ಥಾಪಿಸಿದ ಈ ಶಾಲೆಯನ್ನು ಗಾಂಧೀ ಸಾಹಿತ್ಯ

ಸಂಘದ ಆವರಣದಲ್ಲಿ ಸ್ಥಾಪಿಸಬೇಕೆಂದು ಶ್ರೀ ಪಾರ್ಥಸಾರಥಿ ಅಪೇಕ್ಷೆ ಪಟ್ಟರು. ಸುಮಾರು ಐದಾರು ಲಕ್ಷ ರೂಪಾಯಿಗಳಲ್ಲಿ ಭವ್ಯ ಕಟ್ಟಡವನ್ನು ಕಟ್ಟಿಸಲಾಯಿತು. ಶ್ರೀ ರಾಮರಾಯರು ಮರಣ ಹೊಂದಿದ ಮೇಲೆ ಕಾರ್ಯದರ್ಶಿ ಕೆಲಸವನ್ನು ನಾನೇ ವಹಿಸಿಕೊಳ್ಳಬೇಕಾಯಿತು.

## ಪ್ರಕೃತಿ ಜೀವನ ಕೇಂದ್ರ

ನಾನು ಸಣ್ಣವನಿದ್ದಾಗ ನನ್ನ ತಾಯಿ ಎಷ್ಟೇ ಉಪಚಾರ ಮಾಡಿದರೂ ಮೈ ಕೈ ತುಂಬಿಕೊಂಡು ದಪ್ಪಗಾಗಿರಲಿಲ್ಲ. ಕಾಲೇಜು ಓದಬೇಕಾದರೆ ರಾಜಕೀಯ ರಂಗಕ್ಕೆ ಇಳಿದೆ. ಓಡಾಟ ಹೆಚ್ಚಾಯಿತು. ಆದುದರಿಂದ ಎಲ್ಲಿ ಅಂದರೆ ಅಲ್ಲಿ ಕಾಫಿ ಕುಡಿಯುವುದು ಹೆಚ್ಚಾಯಿತು. ಊಟ ಸರಿ ಇಲ್ಲ. ಆಗಾಗ ರಕ್ತಭೇದಿಯಾಗುತ್ತಿತ್ತು. ವಿಶ್ರಾಂತಿಯೂ ಕಡಿಮೆ. ಜರ್ಮನಿಗೆ ಹೋಗಿ ಬಂದಮೇಲೆ ಸ್ವಲ್ಪ ದಪ್ಪಗಾದೆ. ಆದರೆ ಎದ್ದರೆ, ಕೂತರೆ ಸುಸ್ತಾಗುತ್ತಿತ್ತು. ಆಗಾಗ ಹೊಟ್ಟೆ ನೋವು ಬರುತ್ತಿತ್ತು. ಎರಡನೆ ಬಾರಿ ಜರ್ಮನಿಗೆ ಹೋಗಿ ಬಂದ ಮೇಲೆ ಹೊಟ್ಟೆನೋವು ಹೆಚ್ಚಾಯಿತು. ಕಾರ್ಖಾನೆಯಲ್ಲಿ ವೈದ್ಯಕೀಯ ಸೌಲಭ್ಯವಿದ್ದುದರಿಂದ ಔಷಧಿಗಳ ಚಿಂತೆಯಿಲ್ಲ. ಎಲ್ಲ ವೈದ್ಯರಿಗೂ ತೋರಿಸಿಯಾಯಿತು. ಎಲ್ಲರೂ ಕೊಟ್ಟಿದ್ದು ಮಾತ್ರೆಗಳನ್ನು. ಕಡೆಗೆ ಕರುಳುಬೇನೆ, ಶಸ್ತ್ರಚಿಕಿತ್ಸೆ ಅಗತ್ಯ ಎಂದರು. 1961–62 ರಲ್ಲಿ ಪ್ರಕೃತಿ ಚಿಕಿತ್ಸೆಯ ಬಗ್ಗೆ ಶ್ರೀ ಕೆ. ಲಕ್ಷ್ಮಣಶರ್ಮ ಹಾಗೂ ಶ್ರೀ ಸ್ವಾಮಿನಾಥನ ಭಾಷಣಗಳನ್ನು ಕೇಳಿದೆ. ಆದರೆ ಪ್ರಕೃತಿ ಚಿಕಿತ್ಸೆಯ ಬಗ್ಗೆ ಆಸಕ್ತಿ ಕಡಮೆ. ನಿಸರ್ಗ ಚಿಕಿತ್ಸಾ ವೈದ್ಯರಾಗಿದ್ದ ಶ್ರೀ ಎಸ್. ಎಸ್. ಶಾಸ್ತ್ರಿಯವರನ್ನು ಕಾಣಲು ಯಾರೋ ಸಲಹೆ ಮಾಡಿದರು. ಅವರು ಮಲ್ಲೇಶ್ವರದಲ್ಲಿ ಇದ್ದರು. ಅವರಲ್ಲಿಗೆ ಹೋದೆ. ಎರಡು ದಿನ ರಜಾ ತೆಗೆದುಕೊಳ್ಳಬೇಕು ಎಂದರು. ಸುಮ್ಮನಿದ್ದೆ ಹೊಟ್ಟೆ ನೋವು ಜಾಸ್ತಿಯಾಯಿತು. ರಜೆ ಹಾಕಿ ಮತ್ತೆ ಅವರಲ್ಲಿಗೆ ಹೋದೆ. ಅವರು ಒಂದಷ್ಟು ಪೊಟ್ಟಣದಲ್ಲಿ ಪುಡಿ ಔಷಧ ಕೊಟ್ಟು "ಮೂರುದಿನ ಬೆಳಿಗ್ಗೆ, ಸಂಜೆ ಹಾಗೂ ಮಧ್ಯಾಹ್ನ ತೆಗೆದುಕೊಳ್ಳಿ. ಎಳನೀರು ಮಾತ್ರ ಸೇವಿಸಿ. ಮೂರುದಿನಗಳ ನಂತರ ಬನ್ನಿ. ಎನಿಮಾ ತೆಗೆದುಕೊಳ್ಳಬೇಕು" ಎಂದರು. ಮೂರುದಿನ ಉಪವಾಸ, ನನಗೆ ಸಂದೇಹ ಬಂತು. ಆದರೂ ಮಾಡಿದೆ ಮೈ ಹಗುರಾಯಿತು. ಚೆನ್ನಾಗಿ ಓಡಾಡು ವಂತಾಯಿತು. ಅಷ್ಟರಲ್ಲಿ ನನ್ನ ಗೆಳೆಯ ಮತ್ತೂರು ಕೃಷ್ಣಮೂರ್ತಿಯವರ ಸೋದರ ಸಂಗೀತ ವಿದ್ವಾಂಸ ಶ್ರೀ ಮತ್ತೂರು ಶಂಕರಮೂರ್ತಿಯವರು ಸಿಕ್ಕಿ ಪ್ರಕೃತಿ ಜೀವನ ಕುರಿತ ಕೆಲವು ಪುಸ್ತಕಗಳನ್ನು ಕೊಟ್ಟರು. ಶ್ರೀ ಲಕ್ಷ್ಮಣಶರ್ಮರ "ಪ್ರಾಕ್ಟಿಕಲ್ ನೇಚರ್ ಕ್ಯೂರ್" ಓದಿದೆ. ಪ್ರಕೃತಿ ಚಿಕಿತ್ಸೆಯ ಫಲವಾಗಿ ನನಗೆ ಗುಣವಾಯಿತು. ಆ ಪದ್ಧತಿಯಲ್ಲಿ ಅಪಾರ ನಂಬಿಕೆ ಮೂಡಿತು. ಶ್ರೀ ಎಸ್. ಎಸ್. ಶಾಸ್ತ್ರಿ ಅವರು ಹೇಳಿದಂತೆ ಮುಂದೆ ನಡೆದುಕೊಂಡೆ. ನನ್ನನ್ನು ನೋಡಿ ಕೆಲವರು "ಇವನಿಗೆ ಹುಚ್ಚು

ತಣ್ಣೀರಿನಲ್ಲಿ ಮುಳುಗುವುದು, ಸೂರ್ಯಸ್ನಾನ ಇಂತಹವನ್ನು ಮಾಡುತ್ತಾನೆ" ಎಂದು ನಗುತ್ತಿದ್ದರು. ನನ್ನ ಮಿತ್ರ ಇಂಜಿನಿಯರ್ ಶ್ರೀ ಭೋಜರಾಜು ನನ್ನನ್ನೇ ಅನುಸರಿಸಿದರು.

1969ರಲ್ಲಿ ಗಾಂಧೀ ಶತಮಾನೋತ್ಸವವನ್ನು ಇಡೀ ನಾಡಿನಲ್ಲಿ ವೈಭವದಿಂದ ಆಚರಿಸಲಾಯಿತು. ಗಾಂಧೀ ಸ್ಮಾರಕ ನಿಧಿಯವರ ಧನ ಸಹಾಯದಿಂದ ಗಾಂಧೀ ಸಾಹಿತ್ಯ ಸಂಘದಲ್ಲಿ ಪ್ರಕೃತಿ ಚಿಕಿತ್ಸಾ ತರಗತಿಗಳನ್ನು ಆರಂಭಿಸಿದೆ. ಡಾ॥ ಶಾಮರಾವ್ ಚಿತ್ರಗಾರ್ ಪಾಠ ಹೇಳಿದರು. ಈ ಸಂದರ್ಭದಲ್ಲಿ ಪ್ರಕೃತಿ ಜೀವನ ಸೊಸೈಟಿಯೊಂದನ್ನು ಸ್ಥಾಪಿಸಲು ನಾನು ಮತ್ತು ಮಿತ್ರ ಭೋಜರಾಜ್ ನಿಶ್ಚಯಿಸಿದೆವು. ಹತ್ತು ರೂಪಾಯಿ ಚಂದಾ ವಸೂಲು ಮಾಡಿ ಒಂದಷ್ಟು ಸದಸ್ಯರನ್ನು ಮಾಡತೊಡಗಿದೆವು. ಸಿದ್ದವನಹಳ್ಳಿ ಕೃಷ್ಣಶರ್ಮರು ಸಲಹೆ ಕೊಟ್ಟರು. ಅವರ ಸಲಹೆಯಂತೆ 'ಪ್ರಕೃತಿ ಜೀವನ ಕೇಂದ್ರ' ಎಂದು ಸಂಸ್ಥೆಯನ್ನು ಆರಂಭಿಸಿದೆವು. ಇದರ ಕಛೇರಿ ಗಾಂಧೀ ಸಾಹಿತ್ಯ ಸಂಘದ ಕಟ್ಟಡದ ಮೇಲೆಯೇ. ಕೇಂದ್ರದ ಚಟುವಟಿಕೆಗಳಿಗೂ ಸಂಘದ ಮಿತ್ರರೇ ನೆರವಾದರು. ವಾರಕ್ಕೊಂದು ದಿನ ಉಚಿತ ಸಲಹೆ. ರೋಗಿಗಳ ಆರೋಗ್ಯಕ್ಕೆ ಯತ್ನಿಸುವುದು. ಕೇಂದ್ರದಲ್ಲಿ ಆರೋಗ್ಯವನ್ನು ಕುರಿತ ಪುಸ್ತಕಗಳನ್ನುಳ್ಳ ಒಂದು ಪುಸ್ತಕ ಭಂಡಾರವನ್ನು ಆರಂಭಿಸಿದೆವು. ಜನರಿಂದ ಪ್ರೋತ್ಸಾಹವು ದೊರೆಯಿತು.

ಕನ್ನಡದಲ್ಲಿ ಆರೋಗ್ಯದ ಬಗೆಗೆ ಅದರಲ್ಲೂ ಪ್ರಕೃತಿ ಜೀವನದ ಬಗೆಗೆ ಪತ್ರಿಕೆಗಳೇ ಇರಲಿಲ್ಲ. ಆಗ ಒಂದು ತ್ರೈಮಾಸಿಕ ಪತ್ರಿಕೆಯನ್ನು ಹೊರಡಿಸುವ ವಿಚಾರ ಬಂತು. ನಾನೇ ಅದರ ಪ್ರಕಾಶಕನಾದೆ. 1970ರ ಅಕ್ಟೋಬರ್ ತಿಂಗಳಲ್ಲಿ ಶ್ರೀ ದೇ. ಜವರೇಗೌಡರು ಮೊದಲ ಸಂಚಿಕೆಯನ್ನು ಬಿಡುಗಡೆ ಮಾಡಿದರು. ನಾನೂ ಪ್ರಕೃತಿ ಜೀವನ ಪತ್ರಿಕೆಗೆ ಐದಾರು ಲೇಖನಗಳನ್ನು ಬರೆದೆ.

ಅಖಿಲ ಕರ್ನಾಟಕದ ಒಂದು ಪ್ರಾತಿನಿಧಿಕ ಸಂಸ್ಥೆಯಾಗಿ ಕರ್ನಾಟಕ ಪ್ರಕೃತಿ ಚಿಕಿತ್ಸಾ ಪರಿಷತ್ತು ಆರಂಭವಾಯಿತು. ಇದು ಅಖಿಲಭಾರತ ಪ್ರಕೃತಿ ಚಿಕಿತ್ಸಾ ಫೆಡರೇಶನ್ನಿನ ಅಂಗಸಂಸ್ಥೆಯಾಯಿತು. ನಾನು ಈ ಪರಿಷತ್ತಿಗೆ ಮೊದಲು ಕಾರ್ಯದರ್ಶಿಯಾಗಿದ್ದು ನಂತರ ಉಪಾಧ್ಯಕ್ಷನಾದೆ. ಲಕ್ನೋದಲ್ಲಿ ಅ. ಭಾ. ಪ್ರಕೃತಿ ಚಿಕಿತ್ಸಾ ಸಮ್ಮೇಳನವಾದಾಗ ಪರಿಷತ್ತಿನ ಪರವಾಗಿ ಅಲ್ಲಿ ಭಾಗವಹಿಸಿದೆ. ಕೇಂದ್ರ ಸಮಿತಿಯಲ್ಲೂ ಸಹ ಎರಡು ವರ್ಷ ಕೆಲಸ ಮಾಡುವ ಅವಕಾಶ ಸಿಕ್ಕಿತು.

1971ರ ಜನವರಿಯಲ್ಲಿ ಮೊದಲಬಾರಿಗೆ ಗಾಂಧೀ ಸಾಹಿತ್ಯ ಸಂಘದ ಆವರಣದಲ್ಲೇ ದಕ್ಷಿಣ ವಲಯ ಪ್ರಕೃತಿ ಚಿಕಿತ್ಸಾ ಸಮ್ಮೇಳನವನ್ನು ನಡೆಸಿದೆವು. ಆಂಧ್ರ, ಕೇರಳ, ತಮಿಳು ನಾಡುಗಳಿಂದ ನಿಸರ್ಗ ಚಿಕಿತ್ಸಾ ಪ್ರೇಮಿಗಳು ಬಂದು ಭಾಗವಹಿಸಿದ್ದರು. ಕರ್ನಾಟಕ ದೇಶೀಯ ವೈದ್ಯ ಸಲಹಾ ಸಮಿತಿಯಲ್ಲಿ ಪ್ರಕೃತಿ ಜೀವನ ಕೇಂದ್ರದ ಪರವಾಗಿ ಸದಸ್ಯನಾಗಿದ್ದೆ. ಡಾ॥ ಮೇಲ್ಕೋಟೆ ಸಮಿತಿಯವರು ದೇಶೀಯ

ವೈದ್ಯಪದ್ಧತಿ ವಿಚಾರವಲ್ಲಿ ಒಂದು ಸಲಹಾ ಸಮಿತಿ ನೇಮಿಸಿದಾಗ ನಾನು ಸದಸ್ಯನಾಗಿ ಕೆಲಸ ಮಾಡಿದೆ. ಅಮೇರಿಕಾದ ಖ್ಯಾತ ಪ್ರಕೃತಿ ಚಿಕಿತ್ಸಾ ತಜ್ಞ ಹರ್ಬರ್ಟ್ ಷಿಲ್ಟನ್ ಅವರೊಡನೆ ನೇರ ಸಂಪರ್ಕ ಹೊಂದಿ ಅವರ 'Introduction to National Hygiene' ಪುಸ್ತಕದ ಭಾರತೀಯ ಆವೃತ್ತಿಯನ್ನು ಪ್ರಕಟಿಸಿದೆವು.

ಪ್ರಕೃತಿ ಜೀವನ ಕೇಂದ್ರ ಕಳೆದ ಹತ್ತು ವರ್ಷಗಳಲ್ಲಿ ಸಾವಿರಾರು ಜನಕ್ಕೆ ಉಚಿತ ಸಲಹೆ ನೀಡಿದೆ. ರೋಗ ಮುಕ್ತರನ್ನಾಗಿಸಿದೆ. ಈಗ ಅಲ್ಲಿ ಒಂದು ಕ್ಲಿನಿಕ್ ತೆಗೆಯಲು ಉದ್ದೇಶಿಸಲಾಗಿದೆ. ಪ್ರತಿವರುಷ ಎರಡು ಬಾರಿ ಪ್ರಕೃತಿ ಚಿಕಿತ್ಸೆ ಹಾಗೂ ಯೋಗಾಸನ ತರಗತಿಗಳನ್ನು ನಡೆಸಲಾಗುತ್ತಿದೆ. ಬೆಂಗಳೂರಿನ ರಾಜಾಜಿನಗರ ಬಡಾವಣೆ ಪ್ರಕೃತಿಜೀವನ ಸಮಿತಿಯೊಂದನ್ನು ಆಸಕ್ತ ಮಿತ್ರರು ಆರಂಭಿಸಿ ನಮ್ಮ ಕೇಂದ್ರದಿಂದ ಸಲಹೆಗಳನ್ನು ಪಡೆಯುತ್ತಿದ್ದಾರೆ. ಪ್ರತಿಯೊಂದು ಬಡಾವಣೆಯಲ್ಲೂ ಆರೋಗ್ಯಧಾಮಗಳು ಸ್ಥಾಪನೆಗೊಂಡು ಎಲ್ಲರೂ ಆರೋಗ್ಯಶಾಲಿಗಳಾಗಿ ಸುಖ ಬಾಳನ್ನು ಬಾಳಲಿ ಎಂಬುದೇ ನನ್ನ ಹಿರಿಯಾಸೆ.

## ನನ್ನ ಪ್ರವಾಸಗಳು

ಮನುಷ್ಯ ಹುಟ್ಟಿದಂದಿನಿಂದಲೇ ಅವನ ಚಟುವಟಿಕೆಗಳೂ ಆರಂಭ. ಮಗುವಾಗಿ ಮನೆಯಲ್ಲೇ. ಹುಡುಗರಾದ ಮೇಲೆ ಮನೆ ಹೊರಗಡೆ ಓಡಾಡುವುದು ಇಷ್ಟವಾಗುತ್ತದೆ. ಯುವಕರಾದ ಮೇಲೆ ಬೇರೆ ಬೇರೆ ಊರುಗಳನ್ನು ನೋಡಲು ತವಕ ಉಂಟಾಗುತ್ತದೆ. ವಯಸ್ಕರಾದ ಮೇಲೆ ಪರದೇಶಗಳನ್ನು ನೋಡುವ ಬಯಕೆ. ಇವೆಲ್ಲ ಜ್ಞಾನಾರ್ಜನೆಗೆ ದಾರಿದೀಪದಂತೆ. ನನಗಂತೂ ಪ್ರಯಾಣ ಬಲು ಇಷ್ಟದ ವಿಷಯ. ಚಿಕ್ಕಂದಿನಲ್ಲಿ ನನ್ನ ತಾಯಿ ಒಬ್ಬನನ್ನೇ ಎಲ್ಲೂ ಕಳುಹಿಸುತ್ತಿರಲಿಲ್ಲ. ಹೋಗಿದ್ದೆಲ್ಲ ಹಳ್ಳಿಗೆ, ಬೇಸಿಗೆ ರಜೆಯಲ್ಲಿ. ಬೆಂಗಳೂರು ಬಿಟ್ಟರೆ ಹೆಚ್ಚಾಗಿ ನೋಡಿದ್ದು ಮೈಸೂರು, ಮಂಡ್ಯ, ಹಾಸನಗಳನ್ನು. ರಾಜ್ಯದ ಹೊರಗಡೆ ಅಂದರೆ ಮದರಾಸು, ಬೊಂಬಾಯಿ, ಕಲ್ಕತ್ತ, ದೆಹಲಿಗಳನ್ನು ಹೆಚ್ಚು ಕಡಿಮೆ ಎಲ್ಲ ಪ್ರಯಾಣ ರೈಲು ಮತ್ತು ಬಸ್ಸುಗಳಲ್ಲಿ. ಮೊದಲ ವಿಮಾನ ಪ್ರಯಾಣವೆಂದರೆ ಡಕೋಟಾ ವಿಮಾನದಲ್ಲಿ. 1953ರಲ್ಲಿ ಅ. ಭಾ. ರೈಲ್ವೆ ಪ್ರದರ್ಶನಕ್ಕಾಗಿ ದೆಹಲಿಗೆ ಹೋದಾಗ. ಕಾರ್ಖಾನೆಯಲ್ಲಿ ಅಪ್ರೆಂಟಿಸ್‌ಗಳನ್ನು ತೆಗೆದುಕೊಳ್ಳುವ ಸಮಿತಿಯಲ್ಲಿ ಸದಸ್ಯನಾಗಿದ್ದುದರಿಂದ ಕರ್ನಾಟಕದ ಮುಖ್ಯ ಪ್ರದೇಶಗಳನ್ನು ನೋಡಿದ್ದಾಯಿತು. ಪ್ರತಿ ಊರು ನೋಡಿದಾಗಲೂ ಹೊಸ ಹೊಸ ಅನುಭವ.

ಹೊರ ದೇಶಕ್ಕೆ ಪ್ರಯಾಣ ಮಾಡಿದ್ದು ಅಂದರೆ ಜರ್ಮನಿಗೆ ಹೋಗಿದ್ದು. ಮೊದಲಬಾರಿ ಅದೂ ಹಡಗಿನಲ್ಲಿ. 1954ರಲ್ಲಿ ಹೋದ ಬಳಿಕ 1957ರಲ್ಲಿ ಮತ್ತೆ ಹೋಗಬೇಕಾಯಿತು. ಜರ್ಮನಿಯ ಅನುಭವಗಳನ್ನು ಕ್ರೋಢೀಕರಿಸಿ 'ನಾ ಕಂಡ ಜರ್ಮನಿ' ಎಂಬ ಪುಸ್ತಕವನ್ನು ಬರೆದಿದ್ದೇನೆ.

ನಮ್ಮ ಕಾರ್ಖಾನೆಯಿಂದ ಶ್ರೀಲಂಕಾ ಹಾಗೂ ಬಾಂಗ್ಲಾ ದೇಶಗಳಿಗೆ ರೈಲು ಗಾಡಿಗಳನ್ನು ರಫ್ತು ಮಾಡಬೇಕಾಗಿ ಬಂದುದರಿಂದ ಆ ಸಲುವಾಗಿ ಆ ಎರಡೂ ದೇಶಗಳನ್ನು ನೋಡಿ ಬಂದೆ. ಹೀಗೆ ಒಂದಲ್ಲ ಒಂದು ಕಾರಣದಿಂದ ಹಲವಾರು ಊರು, ದೇಶಗಳನ್ನು ಸುತ್ತಿ ಬಂದದ್ದಾಯಿತು.

## ಉದ್ಯೋಗಾರ್ಥಿಯಾಗಿ

1949ರಲ್ಲಿ ಇಂಜಿನಿಯರಿಂಗ್ ಪದವಿ ಪಡೆದ ಬಳಿಕ ಕೆಲಸ ಹುಡುಕುವ ಹವಣಿಕೆಯಲ್ಲಿದ್ದೆ. ಪತ್ರಿಕೆಗಳಲ್ಲಿ ಪ್ರಕಟಣೆ ನೋಡುವುದು, ಅರ್ಜಿ ಹಾಕುವುದು ಇವೆಲ್ಲ ಸಾಮಾನ್ಯ. ಲೋಕೋಪಯೋಗಿ ಇಲಾಖೆಯಲ್ಲಿ ಕೆಲಸಕ್ಕಾಗಿ ಪ್ರಯತ್ನಿಸಿದ್ದೆ ಆದರೆ ಸಿಗಲಿಲ್ಲ. ತಾಯಿಯನ್ನು ಬೇರೆ ಯಾವ ಊರಿಗೂ ಕರೆದುಕೊಂಡು ಹೋಗಲು ಇಷ್ಟವಿರಲಿಲ್ಲ. ಶ್ರೀ ಕೃಷ್ಣಶರ್ಮರು ಆಗಲೆ ಶ್ರೀ ಹೆಚ್. ಸಿ. ದಾಸಪ್ಪನವರನ್ನು ಪರಿಚಯ ಮಾಡಿಸಿದ್ದು. ಆಗ ಸೆಂಟ್ರಲ್ ಇಂಡಸ್ಟ್ರೀಸ್ ವರ್ಕ್‌ಶಾಪಿನಲ್ಲಿ ಉಚಿತ ತರಬೇತಿ ಪಡೆಯುತ್ತಿದ್ದೆ. ಎಷ್ಟೋ ದಿನಗಳಾದರೂ, ಕೆಲಸ ಸಿಗಲಿಲ್ಲ. ಶರ್ಮಾಜಿಯವರಿಗೆ ಹೇಳಿ ನೋಡಿದೆ. ಅವರು ದಾಸಪ್ಪನವರಿಗೆ "ಶ್ರೀನಿವಾಸಯ್ಯ ಬೆಂಗಳೂರು ಬಿಟ್ಟು ಎಲ್ಲೂ ಹೋಗುವಂತಿಲ್ಲ. ಬೆಂಗಳೂರಲ್ಲೆ ಒಂದು ಕೆಲಸ ಕೊಡಿಸಿ" ಎಂದು ಹೇಳಿದರು. ಕೊನೆಗೆ ಅವರಿಂದ ಒಂದು ಪರಿಚಯ ಪತ್ರ ಸಿಕ್ಕಿತು. ಅವರ ಸಲಹೆಯ ಮೇರೆಗೆ ಹಿಂದೂಸ್ಥಾನ ವಿಮಾನ ಕಾರ್ಖಾನೆಗೆ ಹೋಗಿ ಜನರಲ್ ಮ್ಯಾನೇಜರ್ ಸೇನ್‌ಗುಪ್ತ ಅವರನ್ನು ಕಂಡೆ. ಕಾರ್ಖಾನೆಯ ವ್ಯವಸ್ಥಾಪಕರಾಗಿದ್ದ ಚ್ಯಾಂಪಲೀನೋ ಅವರನ್ನು ಕಾಣಲು ಹೇಳಿದರು. ಅವರು ತಿಳಿಸಿದಂತೆ ಆರು ತಿಂಗಳು ವಿನ್ಯಾಸ ವಿಭಾಗ (Design)ದಲ್ಲಿ ಕೆಲಸ ಮಾಡಿದೆ. ಶ್ರೀ ಮಿತ್ರ ಎಂಬುವರನ್ನು ಕಾಣಲು ಹೇಳಿದರು. ಶ್ರೀ ಮಿತ್ರ ನಕ್ಷೆ ಮಾಡಲು ಹೇಳಿದರು. ಕಾರ್ಖಾನೆಯಲ್ಲಿದ್ದುದು ಅಮೇರಿಕಾ ದೇಶದ ನಕ್ಷೆ ಬರೆಯುವ ಯಂತ್ರಗಳು ಉಪಯೋಗಿಸಲು ಬಾರದು. ಹೇಗೋ ಅವರೇ ಹೇಳಿಕೊಟ್ಟಮೇಲೆ ನಕ್ಷೆ ಬರೆದು ಮನೆಗೆ ಬಂದೆ. ಉತ್ತರ ಬರಲಿಲ್ಲ. ಕೊನೆಗೊಮ್ಮೆ ತಿಂಗಳಿಗೆ ಎಪ್ಪತ್ತೈದು ರೂಪಾಯಿ ಸಂಬಳದ ಕೆಲಸ ದೊರೆಯಿತು. ಕಾರ್ಖಾನೆಗೆ ನಡೆದೇ ಹೋಗುತ್ತಿದ್ದೆ. ಸ್ವಲ್ಪ ದಿನಗಳಾದ ಮೇಲೆ ನನ್ನಲ್ಲಿದ್ದ ಸೈಕಲ್ ರಿಪೇರಿ ಮಾಡಿಸಿ ಸೈಕಲ್ ಏರಿ ಕಾರ್ಖಾನೆಗೆ ಹೋಗುತ್ತಿದ್ದೆ. ಸ್ವಲ್ಪದಿನ ರೈಲುಗಾಡಿಯಲ್ಲಿ ಹೋಗಿ ಬರಲು ಪ್ರಾರಂಭಿಸಿದೆ. ಕೊನೆಗೆ ಕಾರ್ಖಾನೆಯವರು ಬಸ್ ಹಾಕಿದರು. ಸುಲಭವಾಗಿ ಹೋಗಿಬರಲು ಸಾಧ್ಯವಾಯಿತು.

## ಕಾರ್ಖಾನೆಯಲ್ಲಿ

ಹೊಸದಾಗಿ ರೈಲ್ವೆ ವಿಭಾಗ ಆರಂಭವಾಗಿತ್ತು. 404ನೇ ಮಾದರಿ ರೈಲು ಗಾಡಿಗಳನ್ನು ನಿರ್ಮಿಸಲು ಪ್ರಾರಂಭಿಸಿದ್ದರು. ಕೆಲವು ಬಿಡಿಭಾಗಗಳ ವಿನ್ಯಾಸವನ್ನು

ಚಿತ್ರಗಳನ್ನು ಬರೆಯಲು ತೊಡಗಿದೆ. ವಿನ್ಯಾಸ ವಿಭಾಗದಲ್ಲಿ ಕೆಲಸ ಮಾಡಿದ್ದುದರಿಂದ ಕಲ್ಪನೆ ಮಾಡುವ ಶಕ್ತಿ ಬೆಳೆಯಿತು. 1951-52ರಲ್ಲಿ ವಿನ್ಯಾಸಕನಾಗಿ ಬಡ್ತಿ ಸಿಕ್ಕಿತು. 1953ರಲ್ಲಿ ರೈಲ್ವೆ ಶತಮಾನೋತ್ಸವದ ಸಂದರ್ಭದಲ್ಲಿ ನಡೆದ ಪ್ರದರ್ಶನಕ್ಕೆ ಹೋಗುವ ಅವಕಾಶ ಸಿಕ್ಕಿತು. ನಮ್ಮ ರೈಲುಗಾಡಿಗಳು ಅಲ್ಲಿ ಪ್ರದರ್ಶಿತವಾಗಿದ್ದವು. ಇದು ನಡೆದದ್ದು ದೆಹಲಿಯಲ್ಲಿ. ಬಹಳ ವಿಜೃಂಭಣೆಯಿಂದ ನೆರವೇರಿತು.

1953ರ ಕೊನೆಯಲ್ಲಿ ಜರ್ಮನಿಗೆ ಹೋಗಬೇಕಾಯಿತು. ಜರ್ಮನಿಗೆ ಕಳುಹಿಸಲು ಶ್ರೀ ಮಿತ್ರರವರು ಶಿಫಾರಸ್ಸು ಮಾಡಿದರು. ಅಲ್ಲಿಗೆ ಹೋಗಬೇಕಾದರೆ ಜರ್ಮನ್ ಭಾಷೆ ತಿಳಿದಿರಬೇಕೆಂದು ಕೆಲವರು ಹೇಳಿದರು. ಜರ್ಮನ್ ಕಲಿಯ ತೊಡಗಿದೆ. ಜರ್ಮನ್ ಭಾಷೆಯ ಪಾಠಗಳನ್ನು ಶ್ರೀಮತಿ ಗ್ರ್ಯಾಫೆ ಎಂಬಾಕೆ ಹೇಳಿ ಕೊಟ್ಟರು. ಡಿಸೆಂಬರ್‌ನಲ್ಲಿ ಹಡಗಿನಲ್ಲಿ ಜರ್ಮನಿಗೆ ಪ್ರಯಾಣ ಬೆಳೆಸಿದೆ. ಆಗ ನನಗುಂಟಾದ ಸಂತೋಷ ಹೇಳ ತೀರದು. ಶ್ರೀರಾಮ ಮಂದಿರ, ಬ್ಯಾಂಕು, ಗಾಂಧೀ ಸಾಹಿತ್ಯ ಸಂಘದ ಕಾರ್ಯಕರ್ತರು ಬೀಳ್ಕೊಡುಗೆ ಸಮಾರಂಭಗಳನ್ನೇರ್ಪಡಿಸಿದರು. ಊಟೋಪಚಾರಗಳೂ ನಡೆದವು. ಬ್ಯಾಂಕಿನವರು ಏರ್ಪಡಿಸಿದ್ದ ಸಮಾರಂಭಕ್ಕೆ ಆಗಿನ ಮೈಸೂರು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಶ್ರೀ ಹೆಚ್. ಕೆ. ವೀರಣ್ಣ ಗೌಡರು ಅಧ್ಯಕ್ಷತೆ ವಹಿಸಿದ್ದರು. ಪುನಹ 1956ರ ಕೊನೆಯಲ್ಲಿ ಒಂದು ವರ್ಷ ಜರ್ಮನಿಯಲ್ಲಿರಬೇಕಾಯಿತು. ಆಗ ರೈಲುಗಾಡಿಗಳ ವಿನ್ಯಾಸ ಮತ್ತು ರಚನೆಯ ವಿಚಾರದಲ್ಲಿ ಕಾರ್ಖಾನೆಯ ವಿಸ್ತರಣೆ ಮತ್ತು ಸಮಗ್ರ ರೈಲುಗಾಡಿ (Integral Coach) ಕಟ್ಟುವ ಕೊಲ್ಯಾಬೊರೇಷನ್ ವಿಚಾರದಲ್ಲಿ ಜರ್ಮನಿಗೆ ಹೋಗಬೇಕಿತ್ತು.

ವಿಮಾನ ಕಾರ್ಖಾನೆಯಲ್ಲಿ (1945 ರಿಂದ ಭಾರತ್ ಅರ್ತ್ ಮೂವರ್ಸ್ ಲಿಮಿಟೆಡ್) ಹಂತ ಹಂತವಾಗಿ ಬಡ್ತಿ ಪಡೆದೆ. 1967ರಲ್ಲಿ ಡಿಸೈನ್ ಇಂಜಿನಿಯರಾದೆ. ಕಾರ್ಖಾನೆಯಲ್ಲಿ ಗುಣಮಟ್ಟ (Standard), ಟೆಕ್ನಿಕಲ್ ಡಾಟಾ ಹಾಗೂ ಲೈಬ್ರರಿ ವಿಭಾಗವನ್ನು ಪ್ರಾರಂಭಿಸಿದ. 1974ರಲ್ಲಿ ಬಾಂಗ್ಲಾ ದೇಶಕ್ಕೆ ರೈಲು ಗಾಡಿಗಳನ್ನು ರಫ್ತು ಮಾಡುವ ವಿಚಾರದಲ್ಲಿ ಪ್ರಯಾಣ ಮಾಡಿದೆ. ಮೂರು ಬಾರಿ ಬಾಂಗ್ಲಾ ದೇಶಕ್ಕೆ ಹೋಗಿ ಬರಬೇಕಾಯಿತು. 1976-77ರಲ್ಲಿ ಕಾರ್ಖಾನೆಯ ಮ್ಯಾನೇಜರಾದೆ. ಇದೇ ಸಂದರ್ಭದಲ್ಲಿ ಸಿಲೋನಿಗೆ ಮೂರು ಬಾರಿ ಹೋಗಿ ಬಂದೆ. ಕಾರ್ಖಾನೆಯ ಮುಖ್ಯಸ್ಥನಾದ ಮೇಲೆ ಕಾರ್ಮಿಕರ ಮತ್ತು ಅಧಿಕಾರ ವರ್ಗದ ಸಂಪರ್ಕ ಹೆಚ್ಚಾಗಿ ಬೆಳೆಯಲು ಅವಕಾಶ ಸಿಕ್ಕಿತು.

1974ರಲ್ಲಿ ರೈಲು ಗಾಡಿಗಳ ಬೇಡಿಕೆ ಕಡಿಮೆಯಾಯಿತು. ಆದುದರಿಂದ ಟ್ರೈಲರ್ ಅಂದರೆ ಸೈನಿಕರನ್ನು ಕೊಂಡೊಯ್ಯುವ ಟ್ಯಾಂಕ್ ಟ್ರಾನ್ಸ್‌ಪೋರ್ಟರ್

ತಯಾರು ಮಾಡುವ ಅವಕಾಶ ಸಿಕ್ಕಿತು. ಇದನ್ನು ಆಮದು ಮಾಡಿಕೊಳ್ಳು ತ್ತಿದ್ದರು. ಭಾರತದಲ್ಲಿಯೇ ತಯಾರು ಮಾಡಿ ಆಮದು ಬದಲಿಕೆ ಮಾಡಿ ಕೊಳ್ಳ ಲಾಯಿತು. 1945ರಲ್ಲಿಯೇ ಹಿಂದೂಸ್ಥಾನ ವಿಮಾನ ಕಾರ್ಖಾನೆಯ ರೈಲು ಕೋಚ್ ವಿಭಾಗ ಭಾರತ್ ಅರ್ತ್ ಮೂವರ್ಸ್ ಆಗಿ ಬೇರೆ ಸಂಸ್ಥೆಯಾಯಿತು. ಒಂದು ವರ್ಷ ಕಾಲ ಟೆಕ್ನಿಕಲ್ ಸರ್ವಿಸ್ ವಿಭಾಗದ ಮುಖ್ಯಸ್ಥನಾಗಿದ್ದು ನಂತರ ಉತ್ಪಾದನಾ ಮುಖ್ಯಾಧಿಕಾರಿಯಾದೆ. ಈಗ ಡೆಪ್ಯುಟಿ ಜನರಲ್ ಮ್ಯಾನೇಜರಾಗಿ ಕೆಲಸ ಮಾಡುತ್ತಿದ್ದೇನೆ.

ಕನ್ನಡ ಸಂಘ, ಲಲಿತ ಕಲಾ ಸಂಘ, ಕ್ಷೇಮಾಭಿವೃದ್ಧಿ ಸಮಿತಿ, ವಿಚಾರಣಾ ಸಮಿತಿ ಮೊದಲಾದ ಸಮಿತಿಗಳಲ್ಲಿ ದುಡಿದದ್ದು ಕಾರ್ಯಕ್ಷೇತ್ರ ವಿಶಾಲವಾಗಲು ಅನುಕೂಲವಾಯಿತು. ಕಾರ್ಮಿಕನೂ ಒಬ್ಬ ಮನುಷ್ಯ. ಆತನನ್ನು ಒಬ್ಬ ಮಾನವನಂತೆ ಕಂಡರೆ ಏನು ಬೇಕಾದರೂ ಮಾಡಬಹುದು. ಕಾರ್ಮಿಕರೂ ನನ್ನೊಡನೆ ಬಹುವಾಗಿ ಸಹಕರಿಸಿದ್ದಾರೆ.

## ಶ್ರೀರಾಮ ಕಲ್ಯಾಣಮಂಟಪ

ತೆಂಗಿನ ಮರದ ರಸ್ತೆಯ ಶ್ರೀರಾಮ ಮಂದಿರ ನಿರ್ಮಾಣ ಕುರಿತು ಈಗಾಗಲೇ ಹೇಳಿದ್ದೇನೆ. ಶ್ರೀರಾಮ ಕಲ್ಯಾಣಮಂಟಪವನ್ನೊಂದನ್ನು ಕಟ್ಟಲು ಹಿಂದೆಯೇ ನಿಶ್ಚಯಿಸಲಾಗಿತ್ತು. ಇವನ್ನು ಕಟ್ಟಲು ಬೇಕಾದ ನಿವೇಶನ ತೆಗೆದುಕೊಳ್ಳಲು ಬಹಳ ಕಷ್ಟಪಡಬೇಕಾಯಿತು. ಜಮೀನು ಮುಜರಾಯಿ ಇಲಾಖೆಯ ಕೋಡಿ ಆಂಜನೇಯಸ್ವಾಮಿ ದೇವಸ್ಥಾನಕ್ಕೆ ಸೇರಿತ್ತು. ಹಿಂದೆ ಕಡಿದಾಳ್ ಮಂಜಪ್ಪನವರು ಕಂದಾಯ ಮಂತ್ರಿಗಳಾಗಿದ್ದಾಗ ಶ್ರೀ ಹುಚ್ಚಮಾಸ್ತಿಗೌಡರ ಜೊತೆ ಜಮೀನು ಬಗೆಗೆ ಕೇಳಲು ಹೋಗಿದ್ದೆ. ಶ್ರೀ ಹುಚ್ಚಮಾಸ್ತಿಗೌಡರೇ ಕಂದಾಯ ಮಂತ್ರಿಗಳಾದ ಮೇಲೆ ಅವರಲ್ಲಿ ಈ ವಿಚಾರ ಪ್ರಸ್ತಾಪಿಸಿದೆ. ಮುಜರಾಯಿ ಇಲಾಖೆ ತಹಶೀಲ್ದಾರ ರಾಗಿದ್ದ ಶ್ರೀ ಎಲ್. ನಾಗರಾಜು ಅವರ ಸಹಕಾರದಿಂದ ಕಲ್ಯಾಣ ಮಂಟಪ ಕಟ್ಟಿರುವ ಸ್ಥಳವನ್ನು ಸರ್ಕಾರದಿಂದ 99 ವರ್ಷಕಾಲ ತಿಂಗಳಿಗೆ 100 ರೂ. ಗುತ್ತಿಗೆ ಕರಾರಿನ ಮೇಲೆ ಶ್ರೀ ಎನ್. ಹುಚ್ಚಮಾಸ್ತಿಗೌಡರೇ ಕೊಡಿಸಿದರು. ಈ ಪ್ರಯತ್ನ ಗುಟ್ಟಾಗಿಯೇ ನಡೆಯಿತು. ಏಕೆಂದರೆ ಈ ಆಸ್ತಿಯನ್ನು ತಮ್ಮ ಸ್ವಂತದ್ದಾಗಿಸಿ ಕೊಳ್ಳಲು ಅನೇಕರು ಪ್ರಯತ್ನ ಪಡುತ್ತಿದ್ದರು.

ಕಲ್ಯಾಣ ಮಂಟಪದ ನಿರ್ಮಾಣದ ವಿಚಾರದಲ್ಲಿ ಆಸಕ್ತಿ ಇರುವವರನ್ನೆಲ್ಲ ಸಭೆ ಕರೆಯಿಸಿ ಯೋಜನೆ ರೂಪಿಸಿ ಶ್ರೀ ಬಾಲಗಂಗಾಧರನಾಥ ಸ್ವಾಮಿಜಿಯವರಿಂದ ಶಂಕು ಸ್ಥಾಪನೆ ಮಾಡಿಸಿದೆವು. ಪ್ರತಿ ಭಾನುವಾರ ಸಂಜೆ ಮನೆ ಮನೆಗೂ ಹೋಗಿ ಹಣ

ವಸೂಲು ಮಾಡಿದೆವು. ಇಂದು ಭವ್ಯ ಕಟ್ಟಡ ಒಂದು ರೂಪಕ್ಕೆ ಬಂದಿದೆ. ಶ್ರೀ ರಾಮ ಕೋ-ಅಪರೇಟಿವ್ ಬ್ಯಾಂಕು ಮತ್ತು ಶ್ರೀ ಚಿನ್ನಸ್ವಾಮಿ ರಾಜು ಅವರು ಮಾಡಿದ ಸಹಾಯ ಮರೆಯುವಂತಿಲ್ಲ. ಮಾನ್ಯ ಮಂತ್ರಿಗಳಾದ ಶ್ರೀ ಎಚ್. ಸಿ. ಶ್ರೀಕಂಠಯ್ಯನವರು ಅನೇಕ ಸಾರಿ ಬಂದು ಸಲಹೆ ಕೊಡುವುದರ ಜೊತೆಗೆ ಸಹಾಯ ಮಾಡಿ ಉತ್ತೇಜಿಸಿದರು. ಶ್ರೀ ಸಿ. ರಾಮಯ್ಯ ಎಂಬುವರು ಎಲೆ ಮರೆಯ ಕಾಯಂತೆ ಯಾರ ಕಣ್ಣಿಗೂ ಹೆಚ್ಚಾಗಿ ಬೀಳದೆ ಎಲ್ಲ ಕೆಲಸ ಕಾರ್ಯಗಳಲ್ಲಿ ಸಹಾಯಕರಾಗಿ ದುಡಿದಿದ್ದಾರೆ. ಮಲ್ಲೇಶ್ವರ ಲಕ್ಕಪ್ಪ ಪ್ರಾವಿಷನ್ ಸ್ಟೋರ್ಸಿನ ಶ್ರೀ ಲಕ್ಕಣ್ಣ ಅಂಗಡಿ ವ್ಯಾಪಾರ ಬಿಟ್ಟು ಶಂಕುಸ್ಥಾಪನೆ ನಡದಂದಿನಿಂದ ಕಟ್ಟಡ ಮುಗಿಯುವವರೆಗೂ ಹಗಲಿರುಳೆನ್ನದೆ ದುಡಿದರು. ಇವರನ್ನೆಲ್ಲ ನಾನು ಸ್ಮರಿಸದಿದ್ದರೆ ಅಪಚಾರವಾದೀತು.

**ಸಮಾಜದ ಋಣ**

ಆದಿಚುಂಚನಗಿರಿ ಮಠದ ಸ್ವಾಮಿಜಿಗಳಾದ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ಮೊದಲು ಬೆಂಗಳೂರಿಗೆ ಬಂದಾಗ ಮಲ್ಲೇಶ್ವರಕ್ಕೆ ಕರೆಸಿದ್ದೆವು. ನಮ್ಮ ಮನೆಯಲ್ಲಿ ಇಳಿದು ಕೊಂಡಿದ್ದರು. ಆಗಿನಿಂದಲೂ ಅಯಸ್ಕಾಂತದಂತೆ ನನ್ನನ್ನು ಆಕರ್ಷಿಸಿದ್ದು ಅವರ ಮಾತು, ವಿಶ್ವಾಸ. ಅವರ ಶಿಷ್ಯರಲ್ಲಿ ನಾನೂ ಒಬ್ಬನಾದೆ. ಅವರ ಆಶೀರ್ವಾದ ಸದಾ ನನ್ನ ಮೇಲಿದೆ ಎಂದು ಭಾವಿಸಿದ್ದೇನೆ.

'ನಾ ಕಂಡ ಜರ್ಮನಿ' ಪುಸ್ತಕಕ್ಕೆ ಸಾಹಿತ್ಯ ಅಕಾಡಮಿಯಿಂದ ಬಹುಮಾನ ಬಂದಾಗ ಹಲವಾರು ಸಂಘ ಸಂಸ್ಥೆಗಳು ನನ್ನನ್ನು ಗೌರವಿಸಿದವು. ನನ್ನ ನೆಂಟರೂ ಮಿತ್ರರೂ ಆದ ಕೋದಂಡರಾಮಪುರದ ರಂಗ ಗಂಗೋತ್ರಿಯ ಸತ್ಯ ಮುಳಕಟ್ಟೆ ಅವರು 1978ರ ಜುಲೈ ಮೂರರಂದು ಗಾಂಧೀ ಸಾಹಿತ್ಯ ಸಂಘದಲ್ಲಿ ಮಂತ್ರಿವರ್ಯ ಶ್ರೀಕಂಠಯ್ಯ ಅವರ ಅವರ ಅಧ್ಯಕ್ಷತೆಯಲ್ಲಿ ಸನ್ಮಾನಿಸಿದರು. ಆನಂತರ ನಡೆದ ಸನ್ಮಾನಗಳು ಹೀಗಿವೆ.

| | |
|---|---|
| 31—7–1978 | ಬಿ.ಇ.ಎಂ.ಎಲ್. ಲಲಿತ ಕಲಾ ಸಂಘ |
| 11—8–1978 | ಕೆಂಪೇಗೌಡ ಸಮಿತಿ, ರಾಜಾಜಿನಗರ |
| 15—8–1978 | ಕನ್ನಡ ಯುವಕರ ಸಂಘ, ಶಾಂತಿನಗರ |
| 1—11–1978 | ಮಾಲೂರು ಕನ್ನಡ ಸಂಘ, ಕೋಲಾರ ಜಿಲ್ಲೆ |
| 12–11–1978 | ಕನ್ನಡಾಭಿಮಾನಿಗಳ ಸಂಘ, ಕಾಕ್ಸ್‌ಟೌನ್ |
| 23–11–1978 | ವಿಶ್ವೇಶ್ವರಪುರ ಕಾಲೇಜು ವಿದ್ಯಾರ್ಥಿಗಳ ಸಂಘ |

ಸಮಾಜದಲ್ಲಿ ಜನಗಳ ಮಧ್ಯೆ ಇರಬೇಕಾದರೆ ಸಮಾಜಕ್ಕೂ ನಮಗೂ ಬಾಂಧವ್ಯ ಇರುತ್ತದೆ. ಮಾನವ ಒಂಟಿಯಾಗಿ ಬಾಳಲಾರ, ಆತ ಸಂಘ ಜೀವಿ. ನಮಗಾಗಿ ನಮ್ಮ ಹಿರಿಯರು ನಮ್ಮ ಸುತ್ತ ಮುತ್ತಲ ಜನರು ದುಡಿಯುತ್ತಾರೆ. ಸಮಾಜದಲ್ಲಿ ಏನೇ ಉದ್ಧಾರದ ಕೆಲಸವನ್ನು ಮಾಡಿದರೂ ಅದು ಇಂದಿನ ಪೀಳಿಗೆಯ ಏಳಿಗೆಗಾಗಿ. ನಾವು ಹುಟ್ಟಿದಾಗಿನಿಂದಲೂ ನಮ್ಮ ಸಮಾಜ ನಮಗಾಗಿ ಒದಗಿಸಿರುವ ಅನುಕೂಲಗಳನ್ನು ಬಳಸಿಕೊಂಡು ಸುಖವಾಗಿ ಬಾಳುತ್ತೇವೆ. ಈ ಸಮಾಜದ ಋಣವನ್ನು ತೀರಿಸುವುದು ಹೇಗೆ? ಈ ಪ್ರಶ್ನೆಗೆ ಉತ್ತರ ಸಮಾಜದ ಋಣವನ್ನು ತೀರಿಸುವುದಷ್ಟೆ. ಋಣ ಮುಕ್ತರಾಗಬೇಕು. ಇಲ್ಲದಿದ್ದರೆ ಮುಂದಿನ ಜನ್ಮಕ್ಕೂ ಈ ಋಣವನ್ನು ತೆಗೆದುಕೊಂಡು ಹೋಗಬೇಕಾಗುತ್ತದೆ.

## ಜಯಶ್ರೀ ಟ್ರಸ್ಟ್

ಈ ಉದ್ದೇಶ ಪೂರಯಿಸಲು ಜಯಶ್ರೀ ಟ್ರಸ್ಟಿನ ಸ್ಥಾಪನೆ ಮಾಡಿದೆ. ಸಮಾಜದ ಋಣ ತೀರಿಸುವಲ್ಲಿ ಇದೊಂದು ಪ್ರಯತ್ನವಷ್ಟೆ. ಸಮಾಜದ ಲಾಭ ಪಡೆದ ನಾನು ಅದಕ್ಕೆ ನನ್ನಿಂದಾದ ಕಾಣಿಕೆ ಕೊಡುವ ಹವಣಿಕೆ. ಎಷ್ಟೇ ಮಾಡಿದರೂ ಅದು ತೀರಿಸಲಾರದ ಋಣವೇ. 'ಜಯಶ್ರೀ ಟ್ರಸ್ಟ್'ನ್ನು 1979ರಲ್ಲಿ ಆರಂಭ ಮಾಡಿದೆವು. ನನ್ನ ಧರ್ಮಪತ್ನಿ ಶ್ರೀಮತಿ ಜಯಲಕ್ಷ್ಮಿ ಇದರ ಧರ್ಮದರ್ಶಿ. ಜಾತಿ ಮತ ಭೇದ ತೋರದೆ ಅರ್ಹತೆ ಇರುವ ವಿದ್ಯಾರ್ಥಿಗಳಿಗೆ, ದುರ್ಬಲರಿಗೆ, ಸಮಾಜ ಸೇವಾ ಸಂಸ್ಥೆಗಳಿಗೆ ಸಹಾಯ ಮಾಡುವುದು ಟ್ರಸ್ಟಿನ ಉದ್ದೇಶ. ಪುಸ್ತಕವನ್ನು ಕೊಂಡುಕೊಳ್ಳಲು, ಪರೀಕ್ಷಾ ಶುಲ್ಕ ಕಟ್ಟಲು ಇತ್ಯಾದಿ ಧರ್ಮ ಕಾರ್ಯಗಳಿಗೆ ಸಹಾಯ ಮಾಡುವುದು ಮತ್ತೊಂದು ಗುರಿ.

ಇದಕ್ಕೆ ಆದಾಯವೆಂದರೆ ಧರ್ಮವಾಗಿ ಬರುವ ಹಣವೇ. ಶಾಶ್ವತವಾಗಿ ನಡೆಯುವಂತೆ ವ್ಯವಸ್ಥೆ ಮಾಡಲಾಗುತ್ತಿದೆ. ಈ ಟ್ರಸ್ಟನ್ನು ವಿಸ್ತೃತಗೊಳಿಸುವ ಯೋಜನೆಯೂ ಇದೆ. ಒಂದು ವೇಳೆ ಈ ಸಂಸ್ಥೆಯನ್ನು ಮುಂದೆ ಸರಿಯಾಗಿ ನಡೆಸಲಾಗದಿದ್ದರೆ ಉದ್ದೇಶವನ್ನು ಪೂರಯಿಸಲು ಶ್ರೀ ಆದಿಚುಂಚನಗಿರಿ ಕ್ಷೇತ್ರಕ್ಕೆ ಈ ಟ್ರಸ್ಟನ್ನು ವಹಿಸಿ ಟ್ರಸ್ಟಿನ ಕಾರ್ಯಗಳನ್ನು ಮುಂದುವರಿಸಲು ಏರ್ಪಾಡು ಮಾಡಲಾಗಿದೆ.

ಟ್ರಸ್ಟಿನ ಉದ್ದೇಶಗಳಲ್ಲಿ ಪುಸ್ತಕ ಪ್ರಕಟಣೆಯೂ ಒಂದು. ನಮ್ಮ ನಾಡಿನ ಶ್ರೇಷ್ಠ ಸಾಹಿತಿಗಳೂ ರಾಷ್ಟ್ರ ಕವಿಗಳೂ ಆದ ಸನ್ಮಾನ್ಯ ಕುವೆಂಪುರವರನ್ನು ಕುರಿತು 'ರಾಷ್ಟ್ರಕವಿ' ಎಂಬ ಪುಸ್ತಕವನ್ನು ಪ್ರಕಟಿಸಿದ್ದೇವೆ.

## ನನ್ನ ದಿನಚರಿ

ಮೊದಲಿಂದಲೂ ನನಗೆ ಸರಳ ಜೀವನದಲ್ಲಿ ತೃಪ್ತಿ, ಬೆಳಗಿನ ಜಾವ ನಾಲ್ಕೂವರೆಯಿಂದ ಐದು ಗಂಟೆ ಒಳಗೆ ಎದ್ದು ಶೌಚ ಕಾರ್ಯಗಳನ್ನು ಮುಗಿಸಿ ದಂಪತಿಗಳು ನಾವು ವಾಯು ಸೇವನೆಗೆ ಹೊರಗಡೆ ಹೋಗಿ ಬರುವುದು ರೂಢಿ. ಬರುವಾಗಲೇ ತರಕಾರಿ ತರುವುದು ; ನಂತರ ಪತ್ರಿಕೆ ಓದುವುದು. ಇದಾದನಂತರ ಮೂವತ್ತು ನಿಮಿಷಗಳು ಯೋಗಾಭ್ಯಾಸ. ಯೋಗನಿದ್ರೆಯೊಡನೆ ಮುಕ್ತಾಯ. ಹತ್ತು ನಿಮಿಷದ ಯೋಗ ನಿದ್ರೆ ಹತ್ತು ಗಂಟೆಗಳು ವಿಶ್ರಾಂತಿಯಿಲ್ಲದೆ ಕೆಲಸ ಮಾಡುವಷ್ಟು ಶಕ್ತಿಯನ್ನು ನೀಡುತ್ತದೆ. ಅನಂತರ ಸ್ನಾನ ಮಾಡಿ ದೇವರ ಪೂಜೆ ಮಾಡಿ ಒಂದು ಲೋಟ ಹಣ್ಣಿನ ರಸ ಸೇವಿಸುತ್ತೇನೆ. ಕಾರ್ಖಾನೆಯ ವಾಹನ ಬರುತ್ತದೆ. ಮೂರು ನಾಲ್ಕು ಮಂದಿ ಸಂದರ್ಶಕರು ಇದ್ದೇ ಇರುತ್ತಾರೆ. ಅವರನ್ನು ವಿಚಾರಿಸಿ ಕೊಳ್ಳುತ್ತೇನೆ. ಕಾರ್ಖಾನೆಯಿಂದ ಸಂಜೆ ಆರೂವರೆಗೆ ಬಂದರೆ ಸ್ನಾನ ದೇವರ ಧ್ಯಾನಗಳೊಂದಿಗೆ ಕಾರ್ಯಾರಂಭ. ಅನಂತರ ಎಲ್ಲರ ಒಟ್ಟಿಗೆ ಊಟ, ಏಳು ಗಂಟೆ ಹೊತ್ತಿಗೆ ಹೊರಗೆ ಹೊರಡುತ್ತೇನೆ. ಗಾಂಧೀ ಸಾಹಿತ್ಯ ಸಂಘ, ಪ್ರಕೃತಿ ಜೀವನ ಕೇಂದ್ರ, ಬ್ಯಾಂಕುಗಳು, ಹಲವಾರು ಸಮಿತಿಗಳು, ಸಭೆಗಳು ಇತ್ಯಾದಿ ಕಾರ್ಯಗಳಿರುತ್ತವೆ. ರಾತ್ರಿ ಒಂಬತ್ತರಿಂದ ಹನ್ನೊಂದರವರೆಗೆ ಏನಾದರೂ ಓದುವುದು, ಸಾಹಿತ್ಯ ರಚನೆ ಮಾಡುವುದು ಸಾಗುತ್ತದೆ. ಇತ್ತೀಚೆಗೆ ಉಪಾಧ್ಯಾಯ, ಮಿತ್ರ ಶ್ರೀ ನಾಗರಾಜ್‌ರವರ ಸಹಾಯ ದೊರೆತಿದೆ. ಹನ್ನೊಂದಕ್ಕೆ ಮಲಗಿದರೆ ನಾಲ್ಕೂವರೆ ಐದಕ್ಕೆ ಎಚ್ಚರ. ಗಡಿಯಾರದ ಅಲಾರಂ ಕೊಟ್ಟ ಹಾಗೆ, ಯೋಗಾಸನದ ಬಲವೋ ಪ್ರಕೃತಿ ಜೀವನದ ನಿಯಮವೋ ನನಗೆ ತಿಳಿಯದು. ಎಲ್ಲಾ ಸಮಯಕ್ಕನುಗುಣವಾಗಿ ನಡೆಯುತ್ತದೆ.

## ಇನ್ನೂ ದುಡಿಯುವ ಆಸೆ

ಈ ಕ್ಷೇತ್ರಗಳಲ್ಲೆಲ್ಲ ದುಡಿಯಬೇಕಾದರೆ, ಸಮಾಜ ಸೇವೆ ಮಾಡ ಬೇಕಾದರೆ ನನ್ನ ಸಹಧರ್ಮಿಣಿಯ ಸಹಾಯ, ಸಹಕಾರ, ಉತ್ತೇಜನ ಇವುಗಳೇ ಕಾರಣ. Behind everyman there is one woman ಎಂಬ ಉಕ್ತಿಯಂತೆ ಬೇಸರವಿಲ್ಲದೆ ಎಲ್ಲಾ ಕಾರ್ಯಗಳಲ್ಲೂ ಸಹಕಾರ ನೀಡುವುದರ ಜೊತೆಗೆ ತಾನೂ ದುಡಿಯುವುದು ಆಕೆಯ ಸ್ವಭಾವಕ್ಕೆ ಅಂಟಿ ಬಂದಿದೆ. ಇದು ನನ್ನ ಅದೃಷ್ಟವೆಂದು ಭಾವಿಸಿದ್ದೇನೆ.

ನನ್ನ ಮಗಳಾದ ಕುಮಾರಿ ಶಶಿಕಲಾಳಿಗೆ ನನ್ನ ಎಲ್ಲ ಕಾರ್ಯಗಳಲ್ಲೂ ಆಸಕ್ತಿ. ಬರೆಯುವ ಚಪಲವೂ ಇದೆ. ತಾನೂ ದುಡಿಯಬೇಕೆಂಬ ಆಸಕ್ತಿ ಇದೆ. ಇದಕ್ಕೆ ನಮ್ಮ ಮನೆಯ ವಾತಾರಣವೇ ಮುಖ್ಯ ಕಾರಣ.

ಕಾರ್ಖಾನೆಯ ಕೆಲಸಗಾರರು ಬರೆದ ಉತ್ತಮ ಲೇಖನವೊಂದಕ್ಕೆ ಬಹುಮಾನ ಕೊಡುವ ಏರ್ಪಾಟನ್ನು ಹಾಗೂ ಆದಿಚುಂಚನಗಿರಿ ಮಠದಲ್ಲಿ ನಡೆಯುವ ಚರ್ಚಾ ಸ್ಪರ್ಧೆಗೆ ಒಂದು ಪಾರಿತೋಷಕ ಕೊಡುವ ವ್ಯವಸ್ಥೆಯನ್ನು ಜಯಶ್ರೀ ಟ್ರಸ್ಟಿನ ಮೂಲಕ ಮಾಡಲಾಗಿದೆ.

ಈ ನನ್ನ ಜೀವನ ಸುಖ ದುಃಖಗಳನ್ನು ಕಂಡು ಸಮರಸವಾಗಿ ನಡೆದುಕೊಂಡು ಬಂದಿದೆ. ಶ್ರೀ ದೇವರು ಹೀಗೆಯೇ ಸಮಾಜ ಸೇವೆ ಮಾಡಲು ಶಕ್ತಿ ಕೊಟ್ಟು ಜೀವನವನ್ನು ಸಮರಸವಾಗಿ ನಡೆಸಿಕೊಂಡು ಬರಬೇಕೆಂಬುದೇ ನನ್ನ ಹಿರಿದಾಸೆ.



# ಶುಭ ಹಾರೈಕೆ

ಜಿ. ವೆಂಕಟಸುಬ್ಬಯ್ಯ

ಶ್ರೀ ಹೊ. ಶ್ರೀನಿವಾಸಯ್ಯನವರಿಗೆ ಈಗ 57 ವರ್ಷಗಳಾಗಿರುವುದು ಹರ್ಷದ ಸಂಗತಿ. ಅವರು ಸಾರ್ಥಕವಾದ ಬದುಕನ್ನು ಬಾಳಿದ್ದಾರೆ. ಅವರ ಬಾಳಿನ ಬಗ್ಗೆ ಒಂದು ವಿಸ್ಮಯವೆಂದರೆ ಅವರು ತಾಂತ್ರಿಕ ವಿಜ್ಞಾನದ ಹಾದಿ ತುಳಿದು ಉದ್ಯೋಗ ನಡೆಸುತ್ತಿದ್ದರೂ ಮಾನವ ಜೀವನದ ಉತ್ತಮ ಮೌಲ್ಯಗಳ ಕಡೆಗೆ ತಮ್ಮ ಗಮನವನ್ನು ಹರಿಸುತ್ತಿರುವುದು. ಅವರು ಅಚ್ಚ ಗಾಂಧೀವಾದಿಗಳು, ಭಾರತೀಯ ಸಂಸ್ಕೃತಿ ಪರಂಪರೆಯಲ್ಲಿ ಗಾಢ ವಿಶ್ವಾಸವುಳ್ಳವರು. ಮಾತೃಭಾಷೆಯಾದ ಕನ್ನಡದ ಕಟ್ಟಭಿಮಾನಿಗಳು. ಅವರು ವೃತ್ತಿಯಲ್ಲಿ ಎಂಜಿನೀಯರ್. ಆದರೆ ಅವರ ಪ್ರವೃತ್ತಿ ಬರವಣಿಗೆ. ನಿರಾಡಂಬರ ಜೀವಿಯಾದ ಹೊ. ಶ್ರೀ. ಯವರು ಎಂದೂ ತಮ್ಮ ಕೆಲಸಕಾರ್ಯ ಸಾಧನೆಗಳ ಬಗ್ಗೆ ಪ್ರಚಾರ ಬಯಸಿದವರಲ್ಲ. ಎಲೆಮರೆಯ ಹೂವಾಗಿ ದುಡಿಯುತ್ತಲೇ ಬಂದಿದ್ದಾರೆ. ಅದರ ಪರಿಮಳದಂತೆ ಅವರ ದುಡಿಮೆಯ ಪ್ರಭಾವವು ಮಾತ್ರ ಎಲ್ಲ ಕ್ಷೇತ್ರಗಳಲ್ಲಿಯೂ ಪಸರಿಸಿದೆ.

ಅವರು ಬೆಂಗಳೂರಿನ ಭಾರತ್ ಅರ್ತ್ ಮೂವರ್ಸ್‌ನಲ್ಲಿ ಉತ್ಪಾದನಾ ಶಾಖೆಯ ಮುಖ್ಯಸ್ಥರಾಗಿರುತ್ತಾರೆ. ರೈಲುಗಾಡಿಗಳ ನಿರ್ಮಾಣದಲ್ಲಿ ಮತ್ತು ಅದರ ಯೋಜನೆಯಲ್ಲಿ ನೈಪುಣ್ಯ ಗಳಿಸಿಕೊಂಡು ಭಾರತ ಮತ್ತು ವಿದೇಶಗಳಲ್ಲಿ ಖ್ಯಾತಿ ಪಡೆದಿದ್ದಾರೆ. ಸಿಂಹಳ ಮತ್ತು ಬಾಂಗ್ಲಾ ದೇಶಗಳಿಗೆ ರೈಲುಗಾಡಿಗಳನ್ನು ತಯಾರಿಸಿ ಕೊಡುವುದರಲ್ಲಿ ಆ ದೇಶಗಳೊಂದಿಗೆ ವ್ಯವಹರಿಸಿ, ಆ ದೇಶಗಳನ್ನು ಸಂದರ್ಶಿಸಿ ತಮ್ಮ ಕ್ರಿಯಾಶಕ್ತಿಯನ್ನು ತೋರಿಸಿರುತ್ತಾರೆ. ಈ ದಿಸೆಯಲ್ಲಿ ಜರ್ಮನಿಯಲ್ಲಿ ಉನ್ನತ ಶಿಕ್ಷಣ ಪಡೆದು ತಮ್ಮ ಸಂಪರ್ಕ ಪಡೆದವರಿಂದ ತಮ್ಮ ಮತ್ತು ಭಾರತದ ಬಗ್ಗೆ ಪ್ರಶಂಸೆ ಪಡೆದಿದ್ದಾರೆ. ಅವರು ಜರ್ಮನಿಯಲ್ಲಿ ಉನ್ನತ ಶಿಕ್ಷಣ ಪಡೆಯಲು ಹೋಗಿದ್ದ ಕಾಲದಲ್ಲಿ ತಮಗಾದ ಅನುಭವ, ತಾವು ಕಂಡ ವಿಶೇಷ ಅಂಶಗಳ ಪ್ರತಿ ಫಲವೇ ಅವರು ಬರೆದಿರುವ ಉತ್ತಮ ಪ್ರವಾಸ ಕಥನ ''ನಾ ಕಂಡ ಜರ್ಮನಿ''. ಇದು ಪ್ರಿ-ಯೂನಿವರ್ಸಿಟಿ ತರಗತಿಗೆ ಪಠ್ಯಪುಸ್ತಕವಾಗಿದ್ದಿತಲ್ಲದೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನೂ ಗಳಿಸಿಕೊಂಡಿದೆ. ಸಿಂಹಳ ಮತ್ತು ಬಾಂಗ್ಲಾ

ದೇಶಗಳ ಭೇಟಿಯುನ್ನು ಕುರಿತು ಮತ್ತೆರಡು ಪ್ರವಾಸ ಕಥನಗಳು ಬರಲಿವೆಯೆಂದು ಹೇಳಲಾಗಿದೆ. ಅದು ಬೇಗನೆ ಬರಲೆಂದು ಕನ್ನಡಿಗರು ಹಾರೈಸುತ್ತಾರೆ.

ಹೊ. ಶ್ರೀ. ಅವರು ತಾಂತ್ರಿಕ ನಿಪುಣರಾಗಿರುವಂತೆಯೇ ಉತ್ತಮ ಸಮಾಜ ಸೇವಕರೂ ಆಗಿದ್ದಾರೆ. ಬೆಂಗಳೂರಿನಲ್ಲಿ ಸಾಮಾನ್ಯ ಜನರೊಂದಿಗೆ ಮಿಳಿತರಾಗಿ ಅನೇಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಸೇವಾ ಸಂಸ್ಥೆಗಳನ್ನು ನಡೆಸುತ್ತಿದ್ದಾರೆ. ಶ್ರೀ ರಾಮ ಮಂದಿರ, ಶ್ರೀ ರಾಮ ಸಹಕಾರ ಬ್ಯಾಂಕು, ಶ್ರೀ ಆಂಜನೇಯ ಸಹಕಾರ ಬ್ಯಾಂಕು, ಶ್ರೀ ರಾಮ ಕಲ್ಯಾಣ ಮಂಟಪ, ಜಯಶ್ರೀ ಟ್ರಸ್ಟ್, ಚೌದರಿ ಕೊಪ್ಪಲು ಸಂಘ ಮುಂತಾದುವು ಶ್ರೀಯವರ ದುಡಿಮೆಯ ಫಲಗಳು. ಜಯಶ್ರೀ ಟ್ರಸ್ಟ್ ಎಂಬುದು ಸಾಂಸ್ಕೃತಿಕ ಮತ್ತು ಸಾಹಿತ್ಯದ ಚಟುವಟಿಕೆಗಳಿಗೆ ಮೀಸಲಾಗಿದೆ. ಚೌದರಿ ಕೊಪ್ಪಲು ಸಂಘವು ಹೊ. ಶ್ರೀ. ಯವರು ಹುಟ್ಟಿದ ಹಳ್ಳಿಗೆ ಅವರಿಂದ ಸೇವೆಯನ್ನು ಕೈಕೊಳ್ಳಲು ಶ್ರಮಿಸುತ್ತಿದೆ.

ತನ್ನ ಮಾನವೀಯ ಸದ್ಗುಣಗಳು, ಕಾರ್ಯ ತತ್ಪರತೆ, ಸೇವಾಮನೋಭಾವ ಸರಳ ಜೀವನ, ರಾಷ್ಟ್ರ ಪ್ರೇಮ, ಕನ್ನಡ ಭಾಷೆಯ ಮೇಲಿನ ಅಪಾರ ಮಮತೆ ಮುಂತಾದುವುಗಳಿಗಾಗಿ ಶ್ರೀಯುತರು ಎಲ್ಲರ ಪ್ರೀತಿ ವಿಶ್ವಾಸ ಮತ್ತು ಗೌರವಗಳನ್ನು ಸಂಪಾದಿಸಿಕೊಂಡಿರುವುದು ಏನೂ ಆಶ್ಚರ್ಯವಲ್ಲ. ಅವರ ಆದರ್ಶ ಜೀವನ ಕನ್ನಡಿಗರಿಗೆ ಅನೇಕ ವಿಧದಲ್ಲಿ ಮಾರ್ಗದರ್ಶಿಯಾಗಿದೆ. ಶ್ರೀ ಹೊ. ಶ್ರೀಯವರಿಗೆ 57 ವರ್ಷಗಳು ತುಂಬುವ ಸಂತೋಷ ಸಮಯದಲ್ಲಿ ಕನ್ನಡಿಗರು ಅವರು ನೂರುಕಾಲ ಬಾಳಿ ಬೆಳಗಲೆಂದು ಹಾರೈಸುವುದು ಸಂತೋಷದ ಕರ್ತವ್ಯವಾಗಿದೆ. ಭಗವಂತನು ಈ ಹಾರೈಕೆಯನ್ನು ನಡೆಸಿಕೊಡಲಿ, ಕನ್ನಡದ ಬೊಕ್ಕಸವನ್ನು ತುಂಬುವುದರಲ್ಲಿ ಶ್ರೀಯುತರ ಸೇವೆ ಅವಿರತವಾಗಿ ನಡೆಯುತ್ತಿರಲಿ.



# ಸ್ವಾರ್ಥರಹಿತ ಸೇವೆ

---

ಡಿ. ಎಂ. ಚಂದ್ರಶೇಖರ್

ನನ್ನ ಮಾನ್ಯ ಮಿತ್ರರಾದ ಶ್ರೀ. ಹೊ. ಶ್ರೀನಿವಾಸಯ್ಯನವರ 57ನೇ ಜನ್ಮ ದಿನೋತ್ಸವದ ಸಂದರ್ಭದಲ್ಲಿ ಅವರಿಗೆ ಅಭಿನಂದನಾ ಗ್ರಂಥವನ್ನು ಅರ್ಪಿಸಿ ಗೌರವಿಸಲು ಏರ್ಪಾಡು ನಡೆದಿದೆ ಎಂದು ಕೇಳಿ ನನಗೆ ತುಂಬಾ ಸಂತೋಷವಾಯಿತು.

ಶ್ರೀ ಶ್ರೀನಿವಾಸಯ್ಯನವರು ನನಗೆ ಪರಿಚಯವಾಗಿ ಸುಮಾರು 10 ವರ್ಷ ಗಳಾದವು. ಅವರ ಬಹು ಮುಖ ಪ್ರತಿಭೆ ಸಾರ್ವಜನಿಕ ಸೇವೆಗಳನ್ನು ಸ್ವಲ್ಪ ಮಟ್ಟಿಗೆ ಹತ್ತಿರದಿಂದ ನೋಡುವ ಅವಕಾಶ ನನಗೆ ದೊರೆಯಿತು. ಅವರು ಬರೆದ "ನಾ ಕಂಡ ಜರ್ಮನಿ" ಎಂಬ ಪುಸ್ತಕದಿಂದ ಅವರ ವಿಚಾರ ನನಗೆ ಹೆಚ್ಚು ತಿಳಿಯಿತು.

ಬಡ ಕುಟುಂಬದಲ್ಲಿ ಜನಿಸಿ ಸ್ವಯಂ ಪ್ರತಿಭೆ ಸಾಹಸಗಳಿಂದ ಉಚ್ಚ ವ್ಯಾಸಂಗ ಮಾಡಿ ಒಂದು ದೊಡ್ಡ ಕೈಗಾರಿಕಾ ಸಂಸ್ಥೆಯಲ್ಲಿ ಮುಖ್ಯ ಸ್ಥಾನದಲ್ಲಿರುವುದು ಶ್ರೀ ಶ್ರೀನಿವಾಸಯ್ಯನವರ ಒಂದು ಸಾಧನೆಯಾದರೆ, ಅದಕ್ಕಿಂತ ಹೆಚ್ಚಿನ ಸಾಧನೆ ಯೆಂದರೆ, ಅವರ ನಿರಂತರ ಸ್ವಾರ್ಥರಹಿತ ಸಾರ್ವಜನಿಕ ಸೇವೆ.

ಒಂದು ಗಣ್ಯ ಸ್ಥಾನದಲ್ಲಿದ್ದರೂ ಶ್ರೀ ಶ್ರೀನಿವಾಸಯ್ಯನವರ ಸರಳತೆ, ಸೌಜನ್ಯ, ನಿರಾಡಂಬರ, ಪರಿಶುದ್ಧ ಜೀವನ, ಆದರ್ಶವಾದಿತ್ವ ಮತ್ತು ಸೇವಾಮನೋಭಾವಗಳು ಅವರ ಸಂಗಡ ಕೆಲಸ ಮಾಡುವ ಯಾರಿಗಾದರೂ ಸ್ಫೂರ್ತಿಯನ್ನು ಕೊಡದಿರಲಾರವು.

ಭಗವಂತನು ಶ್ರೀ ಶ್ರೀನಿವಾಸಯ್ಯನವರಿಗೆ ಆಯುರಾರೋಗ್ಯಗಳನ್ನು ದಯ ಪಾಲಿಸಿ ಅವರಿಂದ ನಮ್ಮ ದೇಶಕ್ಕೂ ಜನಸಾಮಾನ್ಯರಿಗೂ ಹೆಚ್ಚು ಸೇವೆ ಮಾಡಲು ಅವಕಾಶವನ್ನುಂಟುಮಾಡಲಿ ಎಂದು ಹಾರೈಸುತ್ತೇನೆ.



# ಚಿರಾಯುವಾಗಿ ಬಾಳಲಿ

---

ಡಾ|| ಗೊರೂರು ರಾಮಸ್ವಾಮಯ್ಯಂಗಾರ್

ಶ್ರೀಮಾನ್ ಹೊ. ಶ್ರೀನಿವಾಸಯ್ಯ ಅವರದು ಅಪೂರ್ವವಾದ ವ್ಯಕ್ತಿತ್ವ. ಉತ್ತಮವಾದ ಜೀವನಾದರ್ಶ, ಸಮದೃಷ್ಟಿ, ಸಮಾಜ ಕಲ್ಯಾಣ ದೃಷ್ಟಿ, ಐಹಿಕ ಪಾರಲೌಕಿಕಗಳ ಮಧುರ ಮಿಲನ. ಕರ್ಮ ಜ್ಞಾನ ಭಕ್ತಿ ಸೇವಾ-ಪೂಜೆ ಇವುಗಳ ಸಮೀಕರಣದಿಂದ ಲಭ್ಯವಾದ ಒಂದು ಪೂರ್ಣದೃಷ್ಟಿ. ಐವತ್ತೈದು ವಯಸ್ಸಿಗೆ ಅವರು ಅನೇಕ ವಿಕ್ರಮಗಳನ್ನು ಸಾಧಿಸಿದ್ದಾರೆ. ದೇಹ, ಆತ್ಮ ಭಾವನೆಗಳು, ಸೇವಾ ತತ್ಪರತೆ, ಮಾನವೀಯತೆ ಎಲ್ಲವನ್ನೂ ಒಳ್ಳೆ ಹದದಲ್ಲಿ ವೈಣಿಕ ತನ್ನ ವೀಣೆಯ ತಂತಿಗಳನ್ನು ನುಡಿಸಲು ಸಿದ್ಧಮಾಡಿಟ್ಟಿರುವಂತೆ ಇಟ್ಟಿದ್ದಾರೆ. ಈವರೆವಿಗೆ ಅವರು ಪ್ರತಿಯೊಂದು ಕಾರ್ಯವನ್ನೂ ಸದಾಚಟುವಟಿಕೆಯಿಂದ, ಕಾಯಕವೇ ಪೂಜೆ ಎಂಬ ಎಂಬ ದೃಷ್ಟಿಯಿಂದ ಮಾಡಿದ್ದಾರೆ.ಮುಂದೆಯೂ ಹೀಗೆಯೇ ಮಾಡುತ್ತಾರೆಂಬುದರಲ್ಲಿ ಸಂದೇಹವಿಲ್ಲ. ಜನತಾ ಸೇವೆ ಅವರ ರಕ್ತದಲ್ಲಿಯೇ ಬೆರೆತು ಬಂದಿದೆ.

ಇವರ ಒಂದೊಂದು ಸಾಧನೆಯೇ, ಒಬ್ಬ ಮನುಷ್ಯನಿಗೆ ಜೀವಿತದ ಪೂರ್ತಿಯ ಗುರಿ ಆಗಬಹುದು. ಉನ್ನತ ದರ್ಜೆಯಲ್ಲಿ ತಾಂತ್ರಿಕ ಶಿಕ್ಷಣವನ್ನು ಪಡೆದು, ರೈಲ್ವೆ ಕೋಚ್ ಡಿವಿಜನ್ ನಿರ್ವಾಹಕರಾಗಿ ನಿಯಮಿತರಾದರು. ದಕ್ಷ ಆಡಳಿತಗಾರರಾದುದರಿಂದ ಕಾರ್ಖಾನೆಗೆ ಆ ವಿಭಾಗವನ್ನು ಉನ್ನತಿಗೇರಿಸಿದುದಲ್ಲದೆ, ತಮ್ಮ ವ್ಯಕ್ತಿತ್ವ ಮತ್ತು ದಕ್ಷತೆಯಿಂದ ವಿಭಾಗದ ಅತ್ಯುಚ್ಚ ಪದವಿಗೆ ಏರಿದರು. ತನ್ನ ಪಾಲಿಗೆ ಬಂದ ಕರ್ತವ್ಯವನ್ನು, ಪ್ರಾಮಾಣಿಕವಾಗಿ ನೆರವೇರಿಸಿದರೆ ಮನುಷ್ಯನಿಗೆ ಕೃತಕೃತ್ಯತಾಭಾವ, ಸ್ವಾಭಾವಿಕವಾಗಿ ಉಂಟಾಗುತ್ತದೆ. ಯಾಕೆಂದರೆ ಅಂಥವರೂ ಸಹ ವಿರಳವಾಗಿರುತ್ತಾರೆ. ಆದುದರಿಂದ ಹೊ. ಶ್ರೀನಿವಾಸಯ್ಯ ಅವರು ಅಧಿಕಾರ ಸ್ಥಾನದಿಂದ ಪ್ರಾಮಾಣಿಕವಾಗಿ ಕೆಲಸ ಮಾಡಿಕೊಂಡು ತೃಪ್ತರಾಗಿ ಸುಖವಾಗಿರಬಹುದಿತ್ತು. ರೈಲ್ವೆ ಕೋಚ್‌ನ ತಯಾರಿಕೆ, ನಮೂನೆ-ಅದರಲ್ಲಿ ಸೌಕರ್ಯಗಳು, ಬಾಳಿಕೆ-ಎಲ್ಲ ಇವರ ಅಧಿಕಾರಾವಧಿಯಲ್ಲಿ ಶ್ರೇಷ್ಠ ಶ್ರೇಣಿಗೆ ಏರಿ, ಇಲ್ಲಿಯ ಕೋಚ್‌ಗಳಿಗೆ ಪರರಾಷ್ಟ್ರಗಳಿಂದ ಸಹ, ಬೇಡಿಕೆ ಬರತೊಡಗಿದೆ.

ಹೊ. ಶ್ರೀನಿವಾಸಯ್ಯನವರು ಜರ್ಮನಿ ಮುಂತಾದ ಕೈಗಾರಿಕಾ ಪ್ರಧಾನ ದೇಶಗಳಿಗೆ ಭೇಟಿ ನೀಡಿ ಪರಿಣತಿಯನ್ನು ಪಡೆದುದಲ್ಲದೆ, ಬಾಂಗ್ಲಾ ದೇಶಕ್ಕೆ ರೈಲ್ವೆ

ಕೋಚ್ ರಫ್ತು ಮಾಡುವುದರ ಬಗ್ಗೆ ಭಾರತ ಸರ್ಕಾರದ ಪರದಾಗಿ ಬಾಂಗ್ಲಾಕ್ಕೆ ಭೇಟಿ ಇತ್ತಿದ್ದರು. ಅಧಿಕಾರ ನಿಮಿತ್ತದ ಈ ಸಾಧನೆಯಿಂದ ತೃಪ್ತಿ ಪಟ್ಟುಕೊಂಡು ಶ್ರೀನಿವಾಸಯ್ಯನವರು ನೆಮ್ಮದಿಯಿಂದಿರಬಹುದಾಗಿತ್ತು. ಆದರೆ ಅಂಥ ಸ್ವಕೇಂದ್ರೀಕೃತ ಜೀವನ, ಅವರ ಸ್ವಭಾವಕ್ಕೆ ಒಗ್ಗುವುದಿಲ್ಲ. ಅವರ ಬುದ್ಧಿಯ ಸ್ವಚ್ಛತೆ ಮತ್ತು ಚುರುಕು, ಆ ಬಗೆಯ ಸ್ವಸುಖಾಭಿಲಾಷಿ ತಾಮಸಕ್ಕೆ ಎಡೆಗೊಡಲಿಲ್ಲ. ಅವರ ಹೃದಯದಲ್ಲಿ ಜನತಾ ಸೇವೆಯ ಕಿಡಿ ಸದಾ ಜಾಗೃತವಾಗಿದೆ. "ಬುದ್ಧಿವಂತರು ಒಳ್ಳೆಯವರಲ್ಲ. ಒಳ್ಳೆಯವರು ಬುದ್ಧಿವಂತರಲ್ಲ" ಎಂಬ ಒಂದು ನುಡಿಯುಂಟು. ಶ್ರೀನಿವಾಸಯ್ಯನವರು ಬುದ್ಧಿವಂತರೂ ಹೌದು ಒಳ್ಳೆಯವರೂ ಹೌದು. ಅವರು ತಮ್ಮ ಜೀವನದಲ್ಲಿ ಜನರಿಗೆ ತಮ್ಮ ಶಕ್ತಿ ಮೀರಿ ಸಹಾಯ ಮಾಡುವ ಬುದ್ಧಿಯಿಂದ ಹಣದಿಂದ ದೈಹಿಕ ಶ್ರಮದಿಂದ ನಿರ್ಣಯ ಮಾಡಿದ್ದು ನಮ್ಮ ನಾಡಿನ ಜನತೆಗೆ ಸುದಿನ.

ಈ ಸೇವಾ ಕಾರ್ಯದಿಂದ ಶ್ರೀನಿವಾಸಯ್ಯನವರು ತಮ್ಮ ಬಾಳಿಗೆ ಹೊಸ ಗುರಿಯನ್ನೂ ತಂದುಕೊಂಡಿದ್ದಾರೆ. ಸೇವೆಯ ಸೌಖ್ಯವೆಂಬುದನ್ನು ಅವರು ಆಚರಿಸಿ ಚಿರಯವ್ವನದ ರಹಸ್ಯವನ್ನು ಕಂಡು ಕೊಂಡಿದ್ದಾರೆ. ಅವರ ಕುತೂಹಲಕ್ಕೂ ಕಾರ್ಯಚಟುವಟಿಕೆ ವೈವಿಧ್ಯಗಳಿಗೂ ಮಿತಿಯೇ ಇಲ್ಲ. ಅವರು ಸದಾ ಯಾವುದಾದರೂ ಒಂದು ಉಪಯುಕ್ತ ಕಾರ್ಯದಲ್ಲಿ ತೊಡಗಿರುತ್ತಾರೆ. ಅವರು ಉತ್ಸಾಹಸಂಪನ್ನರು, ಕರ್ಮಯೋಗದ ಮಹತ್ವವನ್ನರಿತವರು; ವ್ಯಸನಗಳಲ್ಲಿ ಆಸಕ್ತರಲ್ಲ. ಧೃಡಚಿತ್ತರು. ಜನತೆಗೆ ಒಳ್ಳೆಯದಾಗುವ ಯಾವ ಕಾರ್ಯವೂ ಅವರ ಸ್ವಭಾವಕ್ಕೂ ಶಕ್ತಿಗೂ ಹೊರತಾದುದಲ್ಲ. ಅವರ ಕಾರ್ಯ ವೈವಿಧ್ಯವನ್ನು ನೋಡಿದರೆ ಯಾರಿಗಾದರೂ ಆಶ್ಚರ್ಯವಾಗುತ್ತದೆ. ನಮ್ಮ ದೇಶದ ಹಿಂದಿನ ಮಹಾತ್ಮನೊಬ್ಬನು ಹೇಳಿದ "ಕಾಮಯೇ ದು:ಖ ತಪ್ತಾನಾಂ ಪ್ರಾಣಿನಾಂ ಅರ್ತಿನಾಶಂ" ದು:ಖಗಳ ದು:ಖವನ್ನು ಹೋಗಲಾಡಿಸಲು ನಾನು ಬಯಸುತ್ತೇನೆ ಎಂಬ ಬಯಕೆಯನ್ನು ಶ್ರೀನಿವಾಸಯ್ಯನವರು ಸದಾ ಸಾಧಿಸುತ್ತಿದ್ದಾರೆ. ಯಾವ ಯಾವ ಕಾರ್ಯಕ್ರಮಗಳಿಂದ, ವಿಧಾನಗಳಿಂದ, ಇದನ್ನು ಸಾಧಿಸಬಹುದೋ ಆ ಮಾರ್ಗಗಳನ್ನೆಲ್ಲಾ ಶ್ರೀನಿವಾಸಯ್ಯನವರು ಹುಡುಕಿಕೊಂಡು ಹೋಗಿ ಅಲ್ಲಿ ತಮ್ಮ ಕರ್ತವ್ಯವನ್ನು ಮಾಡುತ್ತಾರೆ.

ಜನತೆಯ ಸೇವೆ ಮಾಡಬೇಕಾದರೆ ಜನ ಸಂಪರ್ಕ ಮುಖ್ಯ. ಶ್ರೀನಿವಾಸಯ್ಯನವರ ಜೀವ, ಸಾವಿರ ಮೊನೆಗಳಲ್ಲಿ ಜನ ಜೀವನವನ್ನು ಮುಟ್ಟುತ್ತದೆ. ಅದಕ್ಕೆ ಅಖಿಲ ದೇಶದ ವ್ಯಾಪ್ತಿಯಿದೆ. ಅದಕ್ಕೆ ಜಾತಿಯ ಮೇರೆ ಇಲ್ಲ. ಆಸ್ತಿಕರಿಗೆ, ಆಸ್ತಿಕ ಮಾರ್ಗ. ನಾಸ್ತಿಕರಿಗೆ ನಾಸ್ತಿಕ ಮಾರ್ಗ. ಅವರು ಅನೇಕ ದೇವಸ್ಥಾನಗಳಿಗೆ ದಾನಿಗಳು, ಸಹಕಾರ ಸಂಸ್ಥೆಗಳು, ಬ್ಯಾಂಕ್‌ಗಳು, ರೈಲ್ವೆ ಅಸೆಸರ್ಸ್ ಸಹಕಾರ ಮಂಡಲಿ ರೈತ ಸೇವಾ ಮಂಡಲಿ ಇವುಗಳಲ್ಲೆಲ್ಲಾ ಸಕ್ರಿಯ ಸದಸ್ಯರು. ಇವರು ಶ್ರೀ ಸಿದ್ದಪ್ಪ

ಹಳ್ಳಿ ಕೃಷ್ಣಶರ್ಮರ ಪ್ರಭಾವಕ್ಕೆ ಒಳಗಾದರು. ಗಾಂಧಿ ಮಾರ್ಗ, ಗಾಂಧಿ ಜೀವನ ಕ್ರಮ, ರಚನಾತ್ಮಕ ಕಾರ್ಯಕ್ರಮಗಳೆಲ್ಲ ಇವರ ಉಸಿರು ಆಯಿತು. ಎಲ್ಲಕ್ಕಿಂತ ಹೆಚ್ಚಾಗಿ ಇವರು ಪ್ರಕೃತಿ ಜೀವನ ಕ್ರಮದ ಪ್ರತಿಪಾದಕರಾದರು. ಇವರು ಪ್ರಕೃತಿ ಚಿಕಿತ್ಸೆಯಲ್ಲಿ ತಾವೇ ಪರಿಣತರಾಗಿರುವರಲ್ಲದೆ, ಅನೇಕ ಪ್ರಕೃತಿ ಚಿಕಿತ್ಸಾ ಕೇಂದ್ರಗಳ ಸ್ಥಾಪಕರೂ ನಿರ್ವಾಹಕರೂ ಆಗಿದ್ದಾರೆ. ಕರ್ನಾಟಕ ಪ್ರಾಂತದ ಪ್ರಕೃತಿ ಚಿಕಿತ್ಸಾ ಕೇಂದ್ರದ ಸಲಹಾ ಸಮಿತಿಯ ಸದಸ್ಯರಾಗಿದ್ದಾರೆ. ದಕ್ಷಿಣ ವಲಯದ ಪ್ರಕೃತಿ ಚಿಕಿತ್ಸಾ ಸಮ್ಮೇಳನದ ಪ್ರಧಾನ ಕಾರ್ಯದರ್ಶಿ ಸಹ. ಭಾರತದಂಥ, ಆರ್ಥಿಕವಾಗಿ ಹಿಂದುಳಿದಿರುವ ರಾಜ್ಯದಲ್ಲಿ, ಅಲೋಪತಿ ವೈದ್ಯಕ್ರಮದ ದುಬಾರಿ ವೆಚ್ಚ, ಔಷಧಿಗಳ ಅಭಾವ, ಆಸ್ಪತ್ರೆಗಳಲ್ಲಿ ನೂಕು ನುಗ್ಗಲು ಅತಿ ಜನ ಸಂಖ್ಯೆಯ ಒತ್ತಡ, ಇಂಥ ದೇಶದಲ್ಲಿ ಪ್ರಕೃತಿ ಚಿಕಿತ್ಸೆಯ ಹೊರತು ಅನ್ಯಮಾರ್ಗ ಸಾಧ್ಯವೇ ಇಲ್ಲ. ಇದನ್ನು ಅರಿತೇ ಮಹಾತ್ಮ ಗಾಂಧೀಜಿ ತಮ್ಮ ಜೀವಮಾನವೆಲ್ಲ ಪ್ರಕೃತಿ ಚಿಕಿತ್ಸಾ ಕ್ರಮವನ್ನು ಅನುಸರಿಸಿದುದಲ್ಲದೆ, ಅನಾರೋಗ್ಯ ತೀವ್ರವಾದಾಗ ಪ್ರಕೃತಿ ಚಿಕಿತ್ಸಾ ಮಂದಿರವನ್ನು ಸೇರುತ್ತಿದ್ದರು. ಇದನ್ನು ಅರಿತು ಹೊ. ಶ್ರೀನಿವಾಸಯ್ಯ ಅವರು ತಮ್ಮ ಜೀವಿತದಲ್ಲಿ ಪ್ರಕೃತಿ ಚಿಕಿತ್ಸೆಗೆ ಮುಖ್ಯ ಸ್ಥಾನವನ್ನು ಕೊಟ್ಟಿದ್ದಾರೆ. ಈಚಿನ ದಿನಗಳಲ್ಲಿ ನನಗೆ ಹೃದಯದ ವಿಷಯದಲ್ಲಿ ಸ್ವಲ್ಪ ನಂಬಿಕೆ ಕಡಿಮೆಯಾದಾಗ ನಾನು ನನ್ನ ಹಿತೈಷಿಗಳಾದ ಶ್ರೀಮಾನ್ ನಿಟ್ಟೂರ್ ಶ್ರೀನಿವಾಸರಾಯರೊಡನೆ ಹೃದಯದ ತೊಂದರೆಯಿಂದಾಗ ನನ್ನ ಡಾಕ್ಟರು ಶ್ರೀ ಪರಮೇಶ್ವರ ಅವರನ್ನು ಹೋಗಿ ನೋಡಿದೆ. ಅವರು ಎಲ್ಲವನ್ನೂ ಪರೀಕ್ಷಿಸಿ ಹೃದಯಕ್ಕೆ ಇನ್ನೂ ಕೆಲವು ಕಾಲ ಆಯಸ್ಸು ಕೊಟ್ಟಿದ್ದಾರೆ. ಪರಮೇಶ್ವರ ಅವರು ಹೇಳಿದ ಮೇಲೆ ಇನ್ನು ಭಯವಿಲ್ಲ! ಎಂದು ಹೇಳಿದೆ. ಶ್ರೀನಿವಾಸರಾಯರು ನೀವು ಡಾಕ್ಟರನ್ನು ನೋಡಿದ್ದು ಸರಿ. ಆದರೆ ಹೊ. ಶ್ರೀನಿವಾಸಯ್ಯನವರನ್ನೂ ಹೋಗಿ ನೋಡಿ. ಅವರ ಸಲಹೆ ನಿಮಗೆ ಬಹಳ ಸಹಾಯವಾಗುತ್ತೆ ಎಂದರು. ಶ್ರೀನಿವಾಸಯ್ಯನವರ ಪ್ರಕೃತಿ ಚಿಕಿತ್ಸಾ ವಿಧಾನ ಹೇಗೆ ಪ್ರಭಾವಿತವಾಗುತ್ತಿದೆ ಎಂಬುದಕ್ಕೆ ಇದೇ ಉದಾಹರಣೆ. ಇವುಗಳ ಜೊತೆ, ಶ್ರೀನಿವಾಸಯ್ಯನವರು ಗೋರಕ್ಷಣೆ, ಕೃಷಿಕರ ಏಳಿಗೆ, ಭಾರತೀಯ ವೈದ್ಯಕೀಯ ಸಲಹಾ ಮಂಡಲಿ, ವಿದ್ಯಾರ್ಥಿ ನಿಲಯಗಳು, ವಿದ್ಯಾಸಂಸ್ಥೆಗಳು, ಸುಮಾರು ಮುವತ್ತು ಸಂಸ್ಥೆಗಳಲ್ಲಿ ಸಕ್ರಿಯ ಪಾತ್ರ ವಹಿಸುತ್ತಿದ್ದಾರೆ. ಇಷ್ಟೆಲ್ಲ ಸಂಘಗಳಲ್ಲಿ ಕೆಲಸ ಮಾಡಲು ಅವರಿಗೆ ಸಮಯ ಎಲ್ಲಿ ದೊರೆಯುತ್ತೆ ಎಂದು ನಾನು ಆಶ್ಚರ್ಯ ಪಡುತ್ತೇನೆ.

ಇವುಗಳೆಲ್ಲದರ ಜೊತೆಗೆ ಅವರಿಗೆ ಸಾಹಿತ್ಯ ರಚನೆ, ಲೇಖನಕಲೆ, ನಿಯತ ಕಾಲಿಕಗಳಿಗೆ ನಿಬಂಧಗಳು ಇವುಗಳನ್ನೆಲ್ಲ ಒದಗಿಸುವ ನೈಜಸ್ಫೂರ್ತಿಯುಂಟು. ಸಾಹಿತ್ಯರಚನೆಯಲ್ಲಿ ಅವರದು ಗುಣಗ್ರಾಹಿಸ್ವಭಾವದ ಸರಳವಾದ ರಸವತ್ತಾದ

ಆಕರ್ಷಕಶೈಲಿ. ಕಠಿಣವಾದ ಜಟಿಲವಾದ ಮತ್ತು ಸೂಕ್ಷ್ಮವಾದ ವಿಷಯಗಳನ್ನು ವೈಜ್ಞಾನಿಕ ವಿಚಾರಗಳನ್ನೂ ಅವರು ಸುಲಭವಾದ ಮನಮುಟ್ಟುವ ಕ್ರಮದಲ್ಲಿ ನಿರೂಪಿಸುತ್ತಾರೆ. ಅವರು ಬರೆದ "ನಾ ಕಂಡ ಜರ್ಮನಿ" ಪ್ರವಾಸಕಥನಕ್ಕೆ ಒಂದು ಅಪೂರ್ವ ಕೊಡುಗೆ. ಪ್ರಕೃತಿ ಜೀವನವನ್ನು ಕುರಿತು ಸಹ ಅವರು ಗ್ರಂಥವನ್ನು ಬರೆದಿದ್ದಾರೆ. ತಮ್ಮ ಉದ್ಯೋಗಕ್ಕೆ ( ರೈಲ್ವೆ ಕೋಚ್ ) ಸಂಬಂಧಪಟ್ಟ ಲೇಖನಗಳನ್ನೂ ಬರೆದಿದ್ದಾರೆ.

ಅವರ ಲೇಖನಗಳಲ್ಲೆಲ್ಲ ಒಂದು ವಾಸ್ತವಿಕತೆ, ತಾವು ಕಂಡ ಸತ್ಯ, ನಿಖರವಾದ ವಿಷಯನಿರೂಪಣೆ, ಜ್ಞಾನ ಸಮಾರಾಧನೆ ಇವು ಇರುತ್ತವೆ. ಜರ್ಮನಿಯನ್ನು ಕುರಿತು ಮೇಲೆ ವಿವರಿಸಿದ ಗ್ರಂಥವಲ್ಲದೆ ಇನ್ನೂ ಅನೇಕ ಬಿಡಿಲೇಖನಗಳನ್ನೂ ಬರೆದಿದ್ದಾರೆ. ಜರ್ಮನ್ ನಾಟಕಗಳನ್ನು ಕುರಿತು ಒಂದು ವಿಮರ್ಶಾ ಲೇಖನವನ್ನೂ ಬರೆದಿದ್ದಾರೆ. ಸಿದ್ದವನಹಳ್ಳಿ ಕೃಷ್ಣಶರ್ಮರ ವ್ಯಕ್ತಿತ್ವವನ್ನು ಕುರಿತು ಬರೆದಿದ್ದಾರೆ. ಇವರು ಕೆಲವು ವೈಜ್ಞಾನಿಕ ಮತ್ತು ಶುದ್ಧ ತಾಂತ್ರಿಕ ವಿಷಯಗಳನ್ನು ಕುರಿತ ಲೇಖನಗಳನ್ನು ಸಹ ಕನ್ನಡದಲ್ಲಿ ಬರೆದಿದ್ದಾರೆ. ಜನತೆಗೆ ಸುಲಭವಾಗಿ ಅರ್ಥವಾಗುವ ಶೈಲಿ ಇವರಿಗೆ ಸಿದ್ಧಿಸಿದೆ.

ಜರ್ಮನ್ ಪತ್ರಿಕೆಗಳಲ್ಲಿ ಕೂಡ, ಇವರು ಭಾರತೀಯರ ಗುರುತನ್ನು ಬಿಡದೆ ಹಿಂದಿರುಗಲಿಲ್ಲ. ಜರ್ಮನ್ ಪತ್ರಿಕೆಗಳಲ್ಲಿ ಇವರು ಒಂಬತ್ತು ಲೇಖನಗಳನ್ನು ಬರೆದಿದ್ದಾರೆ. ಈಗ ಎರಡು ವರುಷಗಳ ಹಿಂದೆ ಸಹ ಒಂದು ಜರ್ಮನ್ ಪತ್ರಿಕೆಯಲ್ಲಿ ಇವರ ಲೇಖನ ಪ್ರಕಟವಾಗಿದೆ.

ಇಷ್ಟೆಲ್ಲ ಸಾಧಿಸಿದ ಈ ವ್ಯಕ್ತಿಯನ್ನು ನೋಡಿದರೆ, ನಿರಾಡಂಬರದ ಅಕೃತ್ರಿಮ ವ್ಯಕ್ತಿ. ನಡತೆಯಲ್ಲಿ ಗಂಭೀರ ಮತ್ತು ವಿನಯಪರರು. ಜನಕ್ಕೆ ಸಹಾಯಕವಾದ ಯಾವುದಾದರೂ ಉದ್ಯೋಗದಲ್ಲಿ ಸದಾ ತೊಡಗಿರುತ್ತಾರೆ. ಸಮಾಜಕ್ಕೆ ಪ್ರಯೋಜನವಾಗುವುದು, ಬೆಲೆ ಬರುವುದು ಇಂಥವರಿಂದಲೇ. ಇವರಿಂದ ನಾವು ಇನ್ನೂ ಬಹು ಕಾಲದ ಸೇವೆಯನ್ನು, ಸಹಾಯವನ್ನು, ಸಹವಾಸವನ್ನು ನಿರೀಕ್ಷಿಸಬಹುದು. ಇವರು ಈಗ ತಾನೇ 57 ವರುಷವನ್ನು ದಾಟಿದ್ದಾರೆ. ಇದು ಅರ್ಧ ಆಯಸ್ಸು, ಪೂರ್ವ ಆಯಸ್ಸು. ಮುಂದಿನ ಆಯಸ್ಸು ಇದಕ್ಕಿಂತ ಉಜ್ವಲವಾಗಿರುತ್ತದೆ. ವ್ಯಕ್ತಿ ನಿಜವಾದ ಕೆಲಸ ಮಾಡುವುದು ಐವತ್ತನೆ ವಯಸ್ಸಿನಿಂದ ಎಪ್ಪತ್ತರವರೆಗೆ ಎಂದು ಬರ್ನಾರ್ಡ್ ಷಾ ಒಂದೆಡೆ ಹೇಳಿದ್ದಾನೆ.

ಶ್ರೀಮಾನ್ ಹೊ. ಶ್ರೀನಿವಾಸಯ್ಯನವರು ಆರೋಗ ಧೃಢಕಾಯರಾಗಿ ನಮ್ಮೊಡನೆ ಚಿರಕಾಲ ಬಾಳಿ, ನಮ್ಮ ಜನತೆಗೆ ಸಾಂತ್ವನ ನೀಡಲಿ ಎಂದು ಹಾರೈಸುತ್ತೇನೆ.

# ಸೇವಾಮಯಿ ಹೊ. ಶ್ರೀ

---

ವಿ. ಎಸ್. ಕೃಷ್ಣಯ್ಯರ್

ಪ್ರಸಿದ್ಧ ಗಾಂಧಿವಾದಿ ಹಾಗೂ ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ಹೊ. ಶ್ರೀನಿವಾಸಯ್ಯನವರು ನನ್ನ ನೆಚ್ಚಿನ ಸ್ನೇಹಿತರಲ್ಲೊಬ್ಬರು. ಅವರ ನಿಕಟ ಸಂಪರ್ಕ ವನ್ನು ಸ್ವಾತಂತ್ರ್ಯ ಸಂಗ್ರಾಮದ ವೇಳೆಯಿಂದಲೂ ಹೊಂದಿರುವವರಲ್ಲಿ ನಾನೂ ಒಬ್ಬ. ತ್ಯಾಗಮಯಿ, ಸಾಹಿತ್ಯಪ್ರೇಮಿ, ಸಮಾಜ ಸೇವೆಗೆ ಸದಾ ದುಡಿಯುತ್ತಿರುವ ಹಾಗೂ ಸ್ನೇಹಪರ ವ್ಯಕ್ತಿಯಾಗಿರುವ ಶ್ರೀ ಹೊ. ಶ್ರೀ ರವರು ನಾನಾ ಕ್ಷೇತ್ರಗಳಲ್ಲಿ ಮಾಡು ತ್ತಿರುವ ಸಾರ್ವಜನಿಕ ಸೇವೆಗೆ ಒಂದು ಸಾರ್ವಜನಿಕ ಸನ್ಮಾನ ಸಮಾರಂಭವನ್ನು ನನ್ನ ಮಿತ್ರರಾದ ಮತ್ತೊಬ್ಬ ಸುಪ್ರಸಿದ್ಧ ಗಾಂಧಿವಾದಿಗಳಾದ ಶ್ರೀ ಜಿ. ನಾರಾಯಣರವರ ಅಧ್ಯಕ್ಷತೆಯಲ್ಲಿ ಏರ್ಪಡಿಸಿ ನನ್ನನ್ನು ಉಪಾಧ್ಯಕ್ಷರನ್ನಾಗಿ ಸಮಿತಿಯಲ್ಲಿರಲು ಕೇಳಿ ಕೊಂಡಾಗ ನನಗೆ ಅತ್ಯಂತ ಸಂತೋಷವಾಯಿತು. ಕನ್ನಡ ನಾಡಿನ ಸುಪುತ್ರರಾದ ಶ್ರೀ ಹೊ. ಶ್ರೀ ಯವರನ್ನು ಸನ್ಮಾನಿಸುವುದು ನಮ್ಮೆಲ್ಲರ ಕರ್ತವ್ಯವೆಂದು ಭಾವಿಸುತ್ತೇನೆ.

ಶ್ರೀ ಶ್ರೀನಿವಾಸಯ್ಯನವರು ಬಡ ಕುಟುಂಬದಲ್ಲಿ ಹುಟ್ಟಿ, ಬಹಳ ಕಷ್ಟಪಟ್ಟು ವಿದ್ಯಾಭ್ಯಾಸ ಪೂರೈಸಿ ಇಂಜಿನಿಯರ್ ಆಗಿ, ಇಂದು ದೊಡ್ಡ ಹುದ್ದೆಯನ್ನು ಅಲಂಕರಿ ಸಿದ್ದಾರೆ. ಆದರೂ ಕೂಡ ಅವರ ಜೀವನದಲ್ಲಿ ಯಾವ ವ್ಯತ್ಯಾಸವೂ ಆಗಿಲ್ಲ. ಜರ್ಮನಿಗೆ ಹೋದಾಗಲೂ ಕೂಡ ಖಾದಿ ಬಟ್ಟೆಯನ್ನು ಬಿಡದ ಈ ಖಾದಿ ಪ್ರೇಮಿಯ ದೇಶಪ್ರೇಮ ಪ್ರತಿಯೊಬ್ಬರೂ ಅನುಕರಣೆ ಮಾಡುವಂಥದ್ದಾಗಿದೆ. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ದುಡಿದು, ಮಹಾತ್ಮಾ ಗಾಂಧೀಜಿಯವರ ಅನುಯಾಯಿ ಗಳಾಗಿ ಹಲವಾರು ಸಮಾಜ ಸೇವಾ ಕೆಲಸಗಳನ್ನು ಮಾಡಿದ್ದಾರೆ. ಗಾಂಧಿ ಸಾಹಿತ್ಯ ಸಂಘವನ್ನು ಸ್ಥಾಪಿಸಿ, ಆ ಮೂಲಕ ಗಾಂಧೀಜಿಯವರ ತತ್ವಗಳನ್ನು ಪ್ರಚುರಪಡಿಸಲು ಶ್ರಮವಹಿಸಿ ಕೆಲಸ ಮಾಡುತ್ತಿದ್ದಾರೆ. ಕನ್ನಡ ಭಾಷೆಯ ಮೇಲೆ ಅಪಾರ ಅಭಿಮಾನ ವಿದ್ದು ಅಚ್ಚ ಕನ್ನಡಿಗ ಶ್ರೀ ಹೊ. ಶ್ರೀರವರು ಹಲವಾರು ಪ್ರವಾಸ ಸಾಹಿತ್ಯ ಮತ್ತು ಮಕ್ಕಳ ಪುಸ್ತಕಗಳನ್ನು ಬರೆದಿದ್ದಾರೆ. ಅವರ 'ನಾ ಕಂಡ ಜರ್ಮನಿ' ಪುಸ್ತಕವನ್ನು ಯಾರೇ ಓದಿದರೂ, ಮತ್ತೊಮ್ಮೆ ಓದಬೇಕೆಂದು ಮನಸ್ಸು ಹಾತೊರೆಯುತ್ತಿದೆ.

ಎಲೆಮರೆ ಕಾಯಿಯಂತೆ ಸಮಾಜದ ಸುಧಾರಣೆಗೆ ಹಲವಾರು ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಶ್ರೀ ಹೊ. ಶ್ರೀರವರಿಗೆ ನಮ್ಮ ಕೃತಜ್ಞತೆಗಳನ್ನು ಕೇವಲ ಸನ್ಮಾನ ಗಳಿಂದ ಸಲ್ಲಿಸುವುದು ಅಸಾಧ್ಯ. ಅವರು ಮಾಡುತ್ತಿರುವ ಕೆಲಸಗಳಲ್ಲಿ ಕೆಲವ ನ್ನಾದರೂ ನಾವು ಅನುಕರಣೆ ಮಾಡಿದರೆ ಸಾಕು.

ಶ್ರೀ ಹೊ. ಶ್ರೀರವರು ಹಲವಾರು ಸಂಘ ಸಂಸ್ಥೆಗಳನ್ನು ಕಟ್ಟಿದ್ದಾರೆ. ಹಾಗೂ ಅವುಗಳು ಮುಂದೆ ಬಂದಿರುವುದನ್ನು ನೋಡಿ ಸಂತೋಷಪಟ್ಟಿದ್ದಾರೆ. ಅವರು ಸ್ಥಾಪಿಸಿರುವ ಸಂಘ ಸಂಸ್ಥೆಗಳಿಂದ ಇಂದು ಸಮಾಜಕ್ಕೆ ಆಗಿರುವ ಉಪಕಾರ ಅಪಾರ ವಾದುದು. ಶ್ರೀ ಹೊ. ಶ್ರೀರವರಿಗೆ ಸನ್ಮಾನಿಸುತ್ತಿಸುವುದು ನಿಜವಾಗಿಯೂ ಸ್ತುತ್ಯಾರ್ಹವಾದುದು.

ನಾನು ಹೊ. ಶ್ರೀ ರವರ ಜೊತೆಯಲ್ಲಿ ಅನೇಕ ಬಾರಿ ಕೆಲಸ ಮಾಡುವ ಸುಯೋಗ ನನಗೆ ದೊರೆತಿದೆ. ಅವರಲ್ಲಿರುವ ಸೇವಾ ಮನೋಭಾವ, ತಾಳ್ಮೆ ಹಾಗೂ ದೀನದಲಿತರ ಏಳಿಗೆಗೆ ದುಡಿಯುವ ಹಂಬಲ, ನಿಜವಾಗಿಯೂ ಮೆಚ್ಚತಕ್ಕದ್ದಾಗಿವೆ. ಅಪ್ಪಟ ಗಾಂಧಿವಾದಿಗಳಾಗಿರುವುದೇ ಅಲ್ಲದೆ, ಗಾಂಧಿ ತತ್ವಗಳನ್ನು ಅನುಷ್ಠಾನಕ್ಕೆ ತರಲು ಹಗಲಿರುಳೂ ಶ್ರಮಿಸುತ್ತಿರುವ ಈ ಸರಳ ಜೀವಿ ಹೊ. ಶ್ರೀರವರಿಗೆ 57ನೇ ವರ್ಷವು ತುಂಬಲಿರುವ ಸಂದರ್ಭದಲ್ಲಿ ನನ್ನ ಪ್ರೀತಿ ವಿಶ್ವಾಸದ ಅಭಿನಂದನೆಗಳು.

ಇವರ ಸೇವೆಯು ನಮ್ಮ ಸಮಾಜಕ್ಕೆ ಇನ್ನೂ ಹಲವಾರು ವರ್ಷಗಳು ದೊರಕ ಲೆಂದು ಭಗವಂತನಲ್ಲಿ ನನ್ನ ಪ್ರಾರ್ಥನೆ. ಯಾವ ರಾಜಕೀಯದಲ್ಲೂ ಇಲ್ಲದೆ ಕೇವಲ ಸಮಾಜ ಸೇವೆಗೆ ಹಾಗೂ ಗಾಂಧಿ ತತ್ವಗಳ ಅನುಷ್ಠಾನಕ್ಕೆ ದುಡಿಯುತ್ತ ಹೊ. ಶ್ರೀನಿವಾಸಯ್ಯನವರ ವ್ಯಕ್ತಿತ್ವವನ್ನು ಇಂದಿನ ಜನಾಂಗದವರು ಅನುಕರಿಸಿದರೆ ನಮ್ಮ ಸಮಾಜ ಅಭಿವೃದ್ಧಿ ಹೊಂದುವುದರಲ್ಲಿ ಯಾವ ಸಂಶಯವೂ ಇಲ್ಲ.



# ನೆನಪಿಗೂ ಮೀರಿದುದು

ಸಿದ್ದವನಹಳ್ಳಿ ವೇಣುಗೋಪಾಲ ಶರ್ಮ

ಸಾಧಾರಣ ಪ್ರತಿದಿನವೂ ಕುತೂಹಲದಿಂದ ಅಂಚೆ ನೋಡುವುದು ಸಾಮಾನ್ಯ. ಹಾಗೆಯೇ ನೋಡಿದಾಗ ಶ್ರೀ ಶ್ರೀನಿವಾಸಯ್ಯ ಅಭಿನಂದನಾ ಸಮಿತಿಯ ಪತ್ರ. ಅದೂ ನನ್ನನ್ನು 'ನೆನಪಿನ ಸಂಚಿಕೆ'ಗೆ ಲೇಖನ ಬರೆಯಲು ಕೇಳಿದ್ದು ಬಹಳ ಸಂತೋಷ ವಾಯಿತು. ಹೆಮ್ಮೆಯೂ ಒಂದು ಕಡೆ, ನನ್ನನ್ನು ಲೇಖನ ಬರೆಯಲು ಕೇಳಿದರಲ್ಲಾ ಎಂದು. ಶ್ರೀನಿವಾಸಯ್ಯನವರ ನೆನಪಿನ ಸಂಚಿಕೆಗೆ ಬರೆಯದಿದ್ದರೆ ಅಪಚಾರ ವಾದೀತೆಂದು ಪ್ರಾರಂಭಿಸಿದೆ.

ಈಗ 38–39 ವರ್ಷದ ಹಿಂದಿನ ಮಾತು, ಶ್ರೀನಿವಾಸಯ್ಯನವರ ಪರಿಚಯ ಹೇಗಾಯಿತೊ ! ನೆನಪೇ ಇಲ್ಲ. ಆದರೆ ನಮ್ಮ ಪರಿಚಯಕ್ಕೆ ಬಣ್ಣ ತಂದದ್ದು ನಾನು ನಮ್ಮ ಅಣ್ಣನ ತಮ್ಮ ಎನ್ನುವುದು. ಆಗತಾನೆ ಹಳ್ಳಿಯಿಂದ ಬಂದಿದ್ದೆ. ಪಟ್ಟಣದ ಜೀವನ, ರೀತಿ ನೀತಿ ಹೊಸದು. ಶ್ರೀನಿವಾಸಯ್ಯನವರ 'ಸಂಘ' ಸಹವಾಸದಿಂದ ಗಮಾರನಾದ ನಾನು ಹೊಸ ಸನ್ನಿವೇಶಕ್ಕೆ ಹೊಂದಿಕೊಂಡೇನು ಎನ್ನುವ ಆಸೆಯಿಂದ ಬೆಂಗಳೂರಿನ ಮಲ್ಲೇಶ್ವರಂ ಗಾಂಧೀ ಸಾಹಿತ್ಯಸಂಘದ ಚಂದಾ ವಸೂಲಿಗೆ ಸೇರಿಕೊಂಡೆ. ಅಲ್ಲಿಂದ ನಮ್ಮ ಸ್ನೇಹ ಪ್ರಾರಂಭವಾದದ್ದು. ನಮ್ಮ ಸ್ನೇಹದ ಪ್ರತ್ಯೇಕತೆ ಎಂದರೆ ಅದು ಗೌರವವೋ, ಸಲಿಗೆಯೋ, ಇಲ್ಲ ಆತ್ಮೀಯತೆಯೋ ! ಏನೇ ಅನ್ನಿ, ಅಂದಿನಿಂದ ಇಂದಿನವರೆಗೆ ನಿರರ್ಗಳವಾಗಿ ನಡೆದಿದೆ. ಹೀಗಾಗಿ ಶ್ರೀ ಶ್ರೀನಿವಾಸಯ್ಯನವರು ಆತ್ಮೀಯರು, ಸ್ವಕೀಯರು ಆಗಿದ್ದಾರೆ.

ಮೊದಲು ಪರಿಚಯವಾದಾಗ ಶ್ರೀನಿವಾಸಯ್ಯನವರು ಸಾಧಾರಣ, ನಿಷ್ಠಾವಂತ ಪ್ರಾಮಾಣಿಕ, ಕಾರ್ಯದಕ್ಷನಾದ ಕಾರ್ಯಕರ್ತ, ಅವರ ಸಾದಾಸೀದಾ ನಡತೆ, ಕರ್ತವ್ಯ ನಿಷ್ಠೆ, ಎಲ್ಲರೊಂದಿಗೆ ಹೊಂದಿಕೊಂಡು ಹೋಗುವ ಪ್ರಕೃತಿ ಕೃಷ್ಣಶರ್ಮರ ಕಡೆಗೆ ಸೆಳೆಯಿತು. ಪರಿಚಯವಾದುದ್ದೇ ತಡ ಶರ್ಮರ ಪ್ರಮುಖ ಕಾರ್ಯಕರ್ತರಲ್ಲಿ ಒಬ್ಬರಾದರು. ನಂತರ ವಿದ್ಯೆ, ಉದ್ಯೋಗ, ಲೋಕಾನುಭವಕ್ಕೆ ಅವರಿಗೆ ಅವಕಾಶ ಸಿಕ್ಕವು. ಅವುಗಳನ್ನು ಪೋಲು ಮಾಡದೆ ಸರಿಯಾಗಿ ಉಪಯೋಗಿಸಿಕೊಂಡರು. ತಾವು ಹುಟ್ಟಿ ಬಂದ ಸಮಾಜದ ಸೇವೆಯಲ್ಲೇ ಜೀವನ ಸಾರ್ಥಕತೆ ಕಂಡುಕೊಂಡರು.

ಅಂದು ಪ್ರಾರಂಭವಾದದ್ದು ಸತತವಾಗಿ ನಡೆಯುತ್ತಲೇ ಇದೆ. ಒಂದು ಬಗೆಯ ಸಂಸ್ಥೆಯೇ ! ಗಾಂಧಿ ಸಾಹಿತ್ಯ, ಪ್ರಕೃತಿ ಚಿಕಿತ್ಸೆಯಿಂದ ಮೊದಲು ಮಾಡಿಕೊಂಡು ಗೋ ಸೇವೆಯವರೆಗೆ, ರಾಮಮಂದಿರದಿಂದ ಆಂಜನೇಯನ ಗುಡಿಯ ನಿರ್ಮಾಣ ದವರೆಗೆ ಅವರ ಸೇವಾಕ್ಷೇತ್ರ-ವಿಶಾಲವಾದುದು, ವಿವಿಧವಾದುದು. ಆ ಸೇವೆಯಲ್ಲಿ ಫಲಾಪೇಕ್ಷೆ ಇಲ್ಲ. ಗೀತೆಯಲ್ಲಿ ಹೇಳಿದಂತೆ ಅಕ್ಷರಶಃ ಯಜ್ಞಾರ್ಥವಾಗಿ, ನಿಷ್ಕಾಮ ಕರ್ಮ ಮಾಡುವುದೇ ಅವರ ಜೀವನದ ಉಸಿರಾಗಿ ಹೋಗಿದೆ.

ಈಗ ಶ್ರೀನಿವಾಸಯ್ಯನವರು 57 ವರ್ಷದ ಹರೆಯರು, ರಾಜಕೀಯಕ್ಕೆ ಇಳಿಯಲು ಸರಿಯಾದ ವಯಸ್ಸು. ಹಿರಿಯ ತಜ್ಞರಂತೆ ಇವರೂ ಇಂಜಿನಿಯರ್ ಆಗಿ ನಿವೃತ್ತರಾಗುತ್ತಿದ್ದಾರೆ. ಮೈಸೂರು ರಾಜಕೀಯ, ಜನಜೀವನ ಮಲೆತು ಹೋಗಿದೆ. ಬೆಂಗಳೂರಿಗೆ ಬಂದರೆ ಉಸಿರು ಕಟ್ಟಿದಂತಾಗುತ್ತದೆ. ಉದ್ಯಾನ ವನಗಳ ನಗರವಾದ, ಸಂಸ್ಕೃತಿ, ಕಲೆ, ಸಂಗೀತಕ್ಕೆ ಒಮ್ಮೆ ಬೀಡಾಗಿದ್ದ ರಾಜ್ಯ ವಿಪರೀತ ಜನ ಸಂದಣಿ ಯಿಂದ, ಸಾಮಾಜಿಕ ಸಮಸ್ಯೆಗಳಿಂದ ಕಲುಷಿತವಾಗಿದೆ. ಇಂಥ ಪರಿಸ್ಥಿತಿಯನ್ನು ಪುನಃ ಮೊದಲಿನಂತೆ ಮಾಡುವ ಶಕ್ತಿ 'ಅಯ್ಯ' ನವರಲ್ಲಿ ದೇವರು ದಯಪಾಲಿಸಲಿ. ಅವರಿಗೆ ಆಯುರಾರೋಗ್ಯ ಪ್ರಸಾದಿಸಲಿ, ಜನ ಸೇವೆಯಿಂದ ಜನಾರ್ದನನ ದರ್ಶನ ಲಭಿಸಲಿ ಎಂದು ಹಾರೈಸುತ್ತೇನೆ.



# ಶಾಂತ ಕ್ರಾಂತಿ ಧೀರ

---

**ಅಯ್ಯರ್**

ಶ್ರೀನಿವಾಸಯ್ಯನವರಿಗೆ ಜಯಲಕ್ಷ್ಮಿ ಕೊರಳಿಗೆ ಮಾಲೆ ಹಾಕಿದ ಮೇಲೆ ಕೀರ್ತಿ ಲಕ್ಷ್ಮಿಯ ಈ ಮಾಲೆಯನ್ನು ಏಕ ಪತ್ನೀ ವ್ರತಧಾರಿಯಾದ ಅವರು ಹಾಕಿಸಿಕೊಳ್ಳಲು ಖಂಡಿತ ಒಪ್ಪುವವರಲ್ಲ. ಹಾಗೆ ಅವರು ಇಷ್ಟ ಪಟ್ಟಿದ್ದರೆ, ಜರ್ಮನಿ, ಶ್ರೀಲಂಕೆ ಗಳಲ್ಲಿ ಅವರಿಗೆ ಭಾರಿ ಲಕ್ಷ್ಮಿಗಳೇ ತಾವಾಗಿ ಒಲಿದು ಬಿಡುತ್ತಿದ್ದವು. ಅವರು ಅಂಥ ಸಂದರ್ಭದಲ್ಲೆಲ್ಲಾ ಸತ್ಯವ್ರತಧಾರಿಗಳಾಗಿ ನಾನು ವಿವಾಹಿತ ಎಂಬ ಮಾತನ್ನು ಸ್ಪಷ್ಟಪಡಿಸಿಬಿಟ್ಟಿದ್ದಾರೆ.

ಆದರೆ ಅವರ ಸುಂದರ, ಆರೋಗ ಶ್ರೀಕಾಯದ ಈ 57 ನೆಯ ವರ್ಷದಲ್ಲಿ ಈ ಅಭಿನಂದನಾ ಕೀರ್ತಿಮಾಲೆ ಏಕೆ ಬಂತು, ಅವರ ಮಾತೃಶ್ರೀ ಯವರ ಕೀರ್ತಿಯಿ ದೆಂದು ನನ್ನ ಹೃದಯ ಹೇಳುತ್ತಿದೆ. ತಿಮ್ಮಮ್ಮನವರ ವ್ಯಕ್ತಿತ್ವ, ತುಂಬು ಹೆಣ್ಣುತನ ಭಕ್ತರ ಪವಿತ್ರ ಸಂತತಿಯಲ್ಲಿ ಜನ್ಮ ಪಡೆದ ಮಹಿಳೆ ಆಕೆ. ಅಗಲವಾದ ದುಂಡು ಹಣೆ, ಯಾರೇ ಬಂದರೂ ಹೃದಯ ತುಂಬಿದ, ಸವಿನಯವಾದ ಮಾತು ಕಾಂಪೌಂಡಿ ನಲ್ಲಿ ತಾವೇ ನೆಟ್ಟು ಬೆಳಸಿದ ವೃಕ್ಷಗಳಿಂದ ತಾವೇ ಕಿತ್ತು ತಂದ ಆ ಫಲ ಸಮರ್ಪಣೆ. ನಿತ್ಯ ಪುರಾಣ ಶ್ರವಣ, ಎರಡೂ ಹೊತ್ತೂ ದೇವರ ಮೂರ್ತಿದರ್ಶನ. ಸದಾ ಸತ್ಸಂಗ ದಲ್ಲಿ ಸರಳ ಜಿಜ್ಞಾಸೆ, ಇವೆಲ್ಲಾ ಮೂರ್ತೀಕರಿಸಿದ ಮಾತೃಕೀರ್ತಿಯೇ ಈಗ ಅವರ ಸುಪುತ್ರ, ಏಕಮಾತ್ರ ಸತ್ ಪುತ್ರನಿಗೆ ಗಂಟು ಬೀಳುತ್ತಿದೆ. ಅಂತೆಯೇ ನಿಷ್ಕಾಮ ಕರ್ಮಯೋಗಿಗಳಾದ ಶ್ರೀನಿವಾಸಯ್ಯನವರು ಇದಕ್ಕೆಲ್ಲಾ ಒಪ್ಪಿದ್ದಾರೆ.

ಉಪನಿಷತ್ತಿನಲ್ಲಿ ಹೇಳಿದೆ, ''ಯಥಾ ಪುಣ್ಯಸ್ಯ ಕರ್ಮಣಃ ದೂರದ್ ಗಂಧೋ ವಾತಿ'' ಮಾಡಿದ ಪುಣ್ಯಗಂಧ ಖಂಡಿತ ಬಲು ದೂರ, ಸರ್ವತೋ ದಿಕ್ಕಾಗಿ ಬೀಸಿ ಅಲ್ಲಲ್ಲಿನವರನ್ನು ತಣಿಸುತ್ತದೆ. ಶ್ರೀನಿವಾಸಯ್ಯನವರ, ದೇಶ, ವಿದೇಶ ಸಂಚಾರ ದಿಂದ ನಾವೀ ಉಪನಿಶತ್ತಿನ ತಥ್ಯತೆಯನ್ನು ಮನಗಾಣಬಹುದು. ಶ್ರೀನಿವಾಸಯ್ಯ ನವರ ವ್ಯಕ್ತಿತ್ವ ತಾಯಿಯಿಂದ ರೂಪಿತವಾಗಿರುವಂತೆಯೇ ಸದ್ಗುರುಗಳಿಂದಲೂ ರೂಪಿತವಾಗಿದೆ. "ಶ್ರೀನಿವಾಸು'' ಎಂದು ತಿಮ್ಮಮ್ಮನವರು ಮಗನನ್ನ ಕರೆಯುತ್ತಿದ್ದ ಆ ಸಂಭೋದನಾ ಸಿರಿನುಡಿ ನನ್ನ ಕಿವಿಯಲ್ಲಿ ಇನ್ನು ದುಮುದುಮಿಸುತ್ತಿದೆ. ಯಾಕೆ

ಬರೀ ಮುದ್ದಿನ ಮಾತೆ ಮಾತ್ರವಲ್ಲ. ಹಿತೈಷಿಣಿಯೂ ಇದ್ದಳು. ಅಂತೆಯೇ, ಶ್ರೀ ಸಿದ್ದವನ ಹಳ್ಳಿ ಕೃಷ್ಣಶರ್ಮರಂಥ ಗುರು ಸತ್ಸಂಗದಲ್ಲಿ ಮಗನನ್ನು ಬೆಳಸಿದಳು.

ತಂದೆ ಹೊನ್ನಯ್ಯನವರ, ಸ್ವರ್ಣರಮಣೀಯ ವ್ಯಕ್ತಿತ್ವ, ಮಾತೆಯ ಭಕ್ತಿಯ ವಿನಯ ವ್ಯಕ್ತಿತ್ವ, ಸದ್ಗುರುಗಳ ಜ್ಞಾನ ಕರ್ಮ ಯುಕ್ತತ್ವ ಈ ಮೂರು ತ್ರಿವೇಣಿ ಸಂಗಮವಾದ ಶ್ರೀನಿವಾಸಯ್ಯನವರು ನಮ್ಮ ಮಧ್ಯೆ ಇಂದು ಇದ್ದಾರೆ. ಒಬ್ಬ ವ್ಯಕ್ತಿಯಲ್ಲಿ ಕಂಡು ಬರುವ ವಿಶೇಷಗಳಿಗೆ ಅನಾದಿಯಾದ ಅನಂತ ಇತಿಹಾಸವಿರುತ್ತದೆ. ಈ ತತ್ವಜ್ಞಾನದಲ್ಲಿ ನಂಬಿಕೆಯುಳ್ಳವನಾದುದರಿಂದ ನಾನು ಶ್ರೀನಿವಾಸಯ್ಯನವರೊಬ್ಬರನ್ನೇ ಅಭಿನಂದಿಸುತ್ತಿಲ್ಲ. ಅವರ ಇಂದಿನ ಕೀರ್ತಿಧ್ವಜ, ಮರೆಯಲ್ಲಿರುವ ಅನೇಕ ದೃಢ ದಂಡಗಳ ಆಶ್ರಯದಿಂದ ಬಂದುದು. ಅನೇಕರಿಂದ ಒಬ್ಬ ವ್ಯಕ್ತಿಯಲ್ಲಿ ಗುಣ ಪ್ರಕಾಶವೇ ಪ್ರಜಾತಂತ್ರದ ಮಂತ್ರ. ಶ್ರೀನಿವಾಸಯ್ಯನವರೂ ಮುಂದೆಯೂ ಸರ್ವರಿಗಾಗಿ ಬಾಳುವೆ ನಡೆಸುವವರು.

ಇವರಿಗೆ ಅಧ್ಯಾತ್ಮ, ಹಾಗೂ ವಿಜ್ಞಾನ ಎರಡೂ ಕೈಗೂಡಿರುವುದರಿಂದ ಇಂದಿನ ಹೊಸ ಜಗನ್ನಿರ್ಮಾಣಕ್ಕೆ ಇಂಥ ಕ್ರಾಂತಿಧೀರರನ್ನು ಪರಮಾತ್ಮನು ನಮಗೆ ಕರುಣಿಸಿದ್ದಾನೆ. ಚಿತ್ತದ ಗಂಟುಗಳೆನಿಸಿದ, ರಾಗ, ದ್ವೇಷ ಆಸಕ್ತಿಗಳಿಂದ ಅಲಿಪ್ತರಾದ ಶ್ರೀನಿವಾಸಯ್ಯನವರು, ಮನೋಭೂಮಿಕೆಯನ್ನು ದಾಟಿದ್ದಾರೆ. ವಿಜ್ಞಾನ ಯುಗಕ್ಕೆ ಮಾನಾಪಮಾನರೂಪೀ ಮನ ಸರಿಹೊಂದುವುದಿಲ್ಲ. ಈ ಸನ್ಮಾನ ಸಮಾರಂಭ ಶ್ರೀನಿವಾಸಯ್ಯನವರನ್ನು ಕೂದಲಿನಷ್ಟು ಅಲುಗಿಸದು. ಅವರು ನಿಶ್ಚಲ ಪರ್ವತದಂತೆ. ಈ ಸನ್ಮಾನ ಸಮಾರಂಭಗಳನ್ನೆಲ್ಲಾ ಅವರು,ವೇದಾಂತ ದೇಶಿಕರಂತೆ ವಿಷವಾಗಿ ತಿಳಿಯುವವರು "ಸಂಭಾವನಾ ಯಸ್ಯಹಿ ಕಾಲಕೂಟ:'' ಆದರೆ ನಾವು ವ್ಯಕ್ತಿ ಪೂಜೆಯ ರೂಪದಲ್ಲಿ ನಡೆಸದೆ, ಆದರ್ಶ ತತ್ವಮೂರ್ತಿಯ ಸಗುಣಸಾಕಾರ ಉಪಾಸನಾ ರೂಪವಾಗಿ ಈ ಮಂಗಳ ಸಮಾರಂಭವನ್ನು ಆಚರಿಸುತ್ತಿದ್ದೇವೆ.

ಗ್ರಾಮಜೀವನದ ಪರಿಸರದಲ್ಲಿ ಹುಟ್ಟಿ ನಗರ ಸೇರಿದ ಕುಟುಂಬ ಶ್ರೀನಿವಾಸಯ್ಯನವರದು. ವಿಜ್ಞಾನ ಸಾರಗ್ರಾಹಿಗಳಾದ ಇವರು ಅಧ್ಯಾತ್ಮದ ಕಂಪರಳಿಸುತ್ತಿದ್ದಾರೆ. ಅಂತೆಯೇ ಬಹುಮುಖ ಸಮಾಜ ಸೇವೆ ನಡೆಸುತ್ತಿದ್ದಾರೆ. ವಿಜ್ಞಾನದ ಸಂಯೋಗದಿಂದ ಇಂದು ಅಧ್ಯಾತ್ಮವು ಒಂದು ಹೊಸ ಆಯಾಮ ನಿರ್ಮಿಸಿದೆ. ಅದೇ ''ಶಾಂತಿಮಯ ಕ್ರಾಂತಿ'' ಅಹಿಂಸಾ ಕ್ರಾಂತಿ. ಎಲ್ಲರ ಅಭ್ಯುದಯ. ಇದೆಲ್ಲಾ ಮೇಳೈಸಿರುವ ಶ್ರೀನಿವಾಸಯ್ಯನವರು ಗ್ರಾಮಾಂತರ ಪ್ರದೇಶಗಳಲ್ಲಿಯೂ ತಮ್ಮ ಭವಿಷ್ಯ ಪಾವನ ಜೀವನವನ್ನು ಅಲ್ಲಿನ ಕುಲಭಾಂಧವರಿಗಾಗಿ ಮೀಸಲಿಡಲಿ, ಇಡುತ್ತಾರೆ.

ಆಹಾರದ ಕೊರತೆಯ ಮಹಾ ಕಪುರಿಗೆ ವಿಶ್ವ ಬೀಳುತ್ತಿರುವ ಈ ಭಯಾನಕ ವಿಷಮ ಸಂದರ್ಭದಲ್ಲಿ, ಗ್ರಾಮ ಜೀವನ, ಬೇಸಾಯ, ಗ್ರಾಮೋದ್ಯೋಗ ಇವುಗಳ ಸ್ಥಿರತೆ ಬಲು ಗಮನಾರ್ಹ. ಮಾನವ ಮಾಂಸಾಹಾರ ಬಿಟ್ಟಿಲ್ಲವೆ, ಈ ವಿಶ್ವದ ಆಹಾರ ಸಮಸ್ಯೆ ಬಗೆ ಹರಿಯದು. ಮಾಂಸಾಹಾರಕ್ಕಾಗಿ ಹಂದಿ, ಆಡು, ಕುರಿ, ಕೋಳಿಗಳಿಗಾಗಿ ಜಮೀನು ಜಾಸ್ತಿ ಬೇಕಾಗುತ್ತದೆ. ಈಗಾಗಲೇ ಅನೇಕ ದೇಶಗಳಲ್ಲಿ 20 ಜನರ ಆಹಾರವನ್ನು ಒಂದೊಂದು ಮಾಂಸಾಹಾರಿ ಮನೆತನ ಕಸಿಯುತ್ತಿರುವುದು ಅಂಕಿ ಅಂಶಗಳಿಂದ ದೃಢಪಟ್ಟಿದೆ. ನಮ್ಮ ಗ್ರಾಮಗಳಲ್ಲಂತೂ, ನನ್ನ 50 ವರ್ಷದ ಗ್ರಾಮ ಪ್ರವಾಸದ ಅನುಭವದಿಂದ ಹೇಳುವುದಾದರೆ ಬಹುತೇಕ ಗ್ರಾಮಗಳಲ್ಲಿ ಜಗಳಗಳು 'ಆಡು' ಗಳಿಂದಲೇ ಸಂಭವಿಸುತ್ತಿವೆ. ಪರಿಶ್ರಮಪಟ್ಟ ಬೇಸಾಯದ ಸಸಿಗಳನ್ನು ತಿಂದುಹಾಕುವ ಪ್ರಾಣಿಗಳಿಂದಲೇ ಗ್ರಾಮಕಲಹ.

ಶ್ರಿನಿವಾಸಯ್ಯನವರೂ, ಮಾಂಸಾಹಾರ ಪರಿತ್ಯಾಗ ಮಾಡಿದ ಕುಟುಂಬದಲ್ಲೇ ಜನಿಸಿದವರು. ಜತೆಗೆ ವಿಜ್ಞಾನ, ಅಧ್ಯಾತ್ಮದ ಬಲ ಇದೆ. ಗ್ರಾಮಾಂತರಗಳಲ್ಲಿ ಮಾಂಸಾಹಾರ ತ್ಯಾಗದ ಆಂದೋಳನದ ಅಧ್ವರ್ಯುಗಳಾಗಿ, ತಮ್ಮ ಜೀವನ ಪರ್ಯಂತ ದುಡಿದಾರು. ಇದು ನನ್ನ ನಂಬಿಕೆ. ಅವರು ಜನವರಿ 4ಕ್ಕೆ ಹುಟ್ಟಿದ್ದು, ಮೇಲುಕೋಟೆ ಹೊಲೆ ಚೆಲುವರಾಯನಿಗೂ ಅಂದೇ ಪುಷ್ಪಧಾರಣೆಯ ಕೊಠಾರೋತ್ಸವ, ಪ್ರತಿವರ್ಷ ನಡೆಯುತ್ತಿದೆ. ಮುಂದೆ ಅನಂತಕಾಲಕ್ಕೂ ನಡೆಯುತ್ತದೆ. ಹಾಗೆಯೇ ಶ್ರೀನಿವಾಸಯ್ಯನವರ ವರ್ಷವರ್ಧಂತಿಗಳೂ, ''ಶತಮಾನಂ ಭವತಿ ಶತಾಯುಃ ಪುರುಷಃ ಜಿಜೀವಿಷೇತ್ ಶತಂ ಸಮಾಃ'' ಎಂಬ ವೈದಿಕಾಶೀರ್ವಾದದಂತೆ, ಬೆಳಗುತ್ತ ಬರಲಿ !



# ನಾ ಕಂಡ ಶ್ರೀನಿವಾಸಯ್ಯ

ವಿ.ಎಸ್. ನಾರಾಯಣರಾವ್

ಜರ್ಮನಿಗೆ ಹೋಗಿ ಅಲ್ಲಿ ಕೆಲಕಾಲ ಉಳಿದು 'ನಾ ಕಂಡ ಜರ್ಮನಿ' ಪುಸ್ತಕ ಬರೆದರು. ಶ್ರೀನಿವಾಸಯ್ಯನವರ ಈ ಪ್ರವಾಸ ಕಥನ ಎರಡು ಮುದ್ರಣ ಕಂಡಿತು.

ಶ್ರೀನಿವಾಸಯ್ಯನವರನ್ನು ಹೆಚ್ಚುಕಡಿಮೆ ದಿನವೂ ನೋಡುತ್ತಿದ್ದರೂ ಅವರ ವಿಷಯದಲ್ಲಿ ಏನೆಂದು ಬರೆಯಲಿ, ಇದು ನನಗೆ ಅರಿವಾಗದಾಗಿದೆ. ಬಹುಶಃ ಈ ಸಾಮೀಪ್ಯವೇ ಬರೆಯಲು ತೊಡಕಾಗಿರುವುದು. ದೂರದ ವ್ಯಕ್ತಿ, ಪುಸ್ತಕಗಳಿಂದ ಪರಿಚಿತನಾಗುವ ವ್ಯಕ್ತಿ ಅಪರಿಚಿತ ವ್ಯಕ್ತಿ ಇವರನ್ನು ಕುರಿತು ವಿಷಯ ಸಂಗ್ರಹಿಸಿ ಬರೆಯಬಹುದು. ಆದರೆ ತುಂಬ ಪರಿಚಿತ ವ್ಯಕ್ತಿಯನ್ನು ಕುರಿತು ಬರೆಯುವುದು. ಲೇಖಕನನ್ನು ಸಂಕಟಕ್ಕೆ ಈಡು ಮಾಡುತ್ತದೆ. ಇದು ನನ್ನ ಪರಿಸ್ಥಿತಿ.

ಗೆಳೆಯ ನೀಲತ್ತಹಳ್ಳಿ ಕಸ್ತೂರಿ ಸಂಕೋಚಕ್ಕೆ ಒಳಪಡಿಸುವ ಈ ಕೆಲಸ ತುಂಬ ತೃಪ್ತಿಕರನಾಗಿ ನಿರ್ವಹಿಸಿರುತ್ತಾನೆ. ಅದಕ್ಕಿಂತ ಹೆಚ್ಚು ಬರೆಯುವುದು ಸುಲಭವಲ್ಲ. ನಾನು ಚಾಮರಾಜಪೇಟೆಯಿಂದ ಮಲ್ಲೇಶ್ವರದ 6ನೇ ಅಡ್ಡರಸ್ತೆಗೆ ಶ್ರೀನಿವಾಸಯ್ಯನವರ ಮನೆಯ ಸಮೀಪದ ಮನೆ ಬಾಡಿಗೆ ಹಿಡಿದಾಗ ಶ್ರೀನಿವಾಸಯ್ಯ ಇಂಜಿನಿಯರಿಂಗ್ ಕಾಲೇಜ್ ವಿದ್ಯಾರ್ಥಿ. ತುಂಡು ತುಂಡು ಪಂಚೆ, ತಲೆಯಮೇಲೆ ಬಿಳಿಯ ಖಾದಿ ಟೋಪಿ, ಅರ್ಧತೋಳಿನ ಷರಟು ಇದು ಅವನ ಉಡುಪು. ಕಾಲೇಜಿಗೆ ಹೋಗುವಾಗ ಷರಾಯಿ ಕೋಟು. ಈ ಕಾಲಕ್ಕೆ ಶ್ರೀನಿವಾಸಯ್ಯನವರ ಮನೆಯಿಂದ ನಾಲ್ಕುಮನೆ ಆಚೆ ಪೂರ್ವಕ್ಕೆನಾನಿದ್ದೆ. ಬೆಳಿಗ್ಗೆ 8 ಗಂಟೆಯೊಳಗಾಗಿ ನನ್ನ ಮುದ್ರಣಾಲಯ ಇಂಡಿಯನ್ ಪ್ರೆಸ್‌ನ ಬಾಗಿಲು ತೆರೆಯಲು, ಸ್ನಾನಪಾನ ಮುಗಿಸಿಕೊಂಡು ಸೈಕಲ್ ಹತ್ತಿ ಹೊರಟು ಹೋಗುತ್ತಿದ್ದೆ. ರಾತ್ರಿ ಮನೆಗೆ ಬರುವುದೂ ಹೊತ್ತು ಮೀರಿ ಹೋಗುತ್ತಿತ್ತು. ಹೀಗಾಗಿ ನಾನೂ ಅವರೂ ಭೇಟಿಯಾಗುವುದೇ ಕಷ್ಟವಾಗುತ್ತಿತ್ತು.

ವಿದ್ಯಾರ್ಥಿದೆಸೆ ಮುಗಿಯಿತು. ಇಂಜಿನೀಯರ್ ಪದವೀಧರನಾದ. ಆಗಿನ ಕಾಲಕ್ಕೆ ಈಗಿರುವಂತೆ ನಿರುದ್ಯೋಗ ಸಮಸ್ಯೆ ಅಷ್ಟು ಭಯಂಕರವಾಗಿರಲಿಲ್ಲ. ವಿಮಾನ ಕಾರ್ಖಾನೆಯಲ್ಲಿ ಕೆಲಸ ಸಿಕ್ಕಿತು. ಸೈಕಲ್ ಸವಾರಿ ತಪ್ಪಿತು. ಬಸ್ಸಿನಲ್ಲಿ ಕಾರ್ಖಾನೆಗೆ ಹೋಗಿಬರುವುದು. ಪಾಳಿಯಂತೆ ಕೆಲಸ. ಈಗ ನಾನು ಶ್ರೀನಿವಾಸಯ್ಯ

ನವರ ಮನೆಯ ಸಮೀಪಕ್ಕೆ ಬಂದೆ. ನಾನು ವಾಸಿಸುತ್ತಿದ್ದ ಬಾಡಿಗೆಯ ಮನೆಗೂ ಅವರ ಸ್ವಂತ ಮನೆಗೂ ನಡುವೆ ಮತ್ತೊಂದು ಮನೆ. ಕಾರ್ಖಾನೆಗೆ ಹೋಗುವಾಗ ಆಗಾಗ ಭೇಟಿಯಾಗುತ್ತಿತ್ತು. ನೆರಮನೆಯ ಗುಂಡು, ಸುಬ್ಬು ಇವರಲ್ಲಿ ಮಿತ್ರತ್ವ.

ಶ್ರೀನಿವಾಸಯ್ಯ ಖಾದಿಧಾರಿ, ನಿಷ್ಠಾವಂತ.ದಿನಾ ನೂಲುತ್ತಿದ್ದ. ನನ್ನ ರಾಟೆ ಕೆಟ್ಟಾಗ ಗುಂಡು ಅಥವಾ ಶ್ರೀನಿವಾಸಯ್ಯ ದುರಸ್ತಿ ಮಾಡಿಕೊಡುತ್ತಿದ್ದರು. ನಾವೆಲ್ಲ ನೂಲುವವರ ಬಳಗದವರಾದೆವು. ಇದಕ್ಕೆ ಸಂಬಂಧಿಸಿದ ಮಾತು ಕಥೆ. ಒಳ್ಳೆಯ ಹಂಜಿ ಎಲ್ಲಿ ಸಿಗುತ್ತೆ. ಹೇಗೆ ತಯಾರಿಸುವುದು ಇತ್ಯಾದಿ.

ಶ್ರೀನಿವಾಸಯ್ಯ ಸಿದ್ದವನ ಹಳ್ಳಿ ಕೃಷ್ಣಶರ್ಮರ ಅಚ್ಚುಮೆಚ್ಚಿನ ಶಿಷ್ಯ. ಸಂಜೆ ಬಿಡುವಾದಾಗಲೆಲ್ಲ ಅವರ ಮನೆಗೆ ಹೋಗುತ್ತಿದ್ದೆ ಕೃಷ್ಣ ಶರ್ಮರನ್ನು ಕಾಣಲು ನಾನು ಅವರ ಮನೆಗೆ ಆಗಿಂದಾಗ ಹೋಗುತ್ತಿದ್ದೆ. ಅಲ್ಲಿ ನಮ್ಮೆಲ್ಲರ ಸಮಾಗಮ. ಗಾಂಧೀ ತತ್ವದ ವಿಷಯದಲ್ಲಿ ವಿಚಾರ ಮಂಥನ ನಡೆಯುವುದು. ಗಾಂಧೀ ಸಾಹಿತ್ಯ ಸಂಘದ ವಿಷಯದ ಪ್ರಸ್ತಾಪ. ನಮ್ಮೆಲ್ಲರಿಗೂ ಮಾರ್ಗದರ್ಶಕರು ಕೃಷ್ಣಶರ್ಮ. ವಿಶ್ವ ಕರ್ನಾಟಕ ಪತ್ರಿಕೆಯ ಕಚೇರಿಗೆ ಹೋಗುವಾಗ ಬರುವಾಗ ನಮ್ಮಮುದ್ರಣಾಲಯದಲ್ಲಿ ಸ್ವಲ್ಪ ಹೊತ್ತು ಕುಳಿತು ಆಮೇಲೆ ಮುಂದೆ ಸಾಗುವರು ಶರ್ಮ. ಕಾಫಿ ಸೇವನೆಗೆ ಶರ್ಮ ಮತ್ತು ನಾನು ಉಡುಪಿ ಕೃಷ್ಣ ಭವನಕ್ಕೆ ಕೂಡಿ ಹೋಗುವೆವು. 'ಒನ್ ಬೈಟು' ಕಾಫಿ.

ವಿಮಾನ ಕಾರ್ಖಾನೆಯಲ್ಲಿ ಶ್ರೀನಿವಾಸಯ್ಯ ಮೇಲಿಂದ ಮೇಲಕ್ಕೆ ಸಾಗುತ್ತಿದ್ದ. ರೈಲು ಕೋಚ್ ವಿಭಾಗ ಸ್ಥಾಪಿತವಾದಾಗ ಆ ವಿಭಾಗಕ್ಕೆ ಬಡ್ತಿ. ಕ್ರಮೇಣ ಅಲ್ಲಿನ ತಾಂತ್ರಿಕ ವಿಭಾಗ ಮುಖ್ಯಾಧಿಕಾರಿ. ಜರ್ಮನಿಗೆ ಪ್ರಯಾಣ. ಡೈರಿ ಬರೆಯುವಂತೆ ಶರ್ಮರ ಸಲಹೆ. ಅದೇ ರೂಪುಗೊಂಡಿತು, ನಾ ಕಂಡ ಜರ್ಮನಿಯಾಗಿ.

ಇದಕ್ಕೆ ಮೊದಲು ವಿವಾಹ. ಬಾಲ್ಯದಲ್ಲಿಯೇ ತಂದೆಯನ್ನು ಕಳೆದು ಕೊಂಡಿದ್ದ ಶ್ರೀನಿವಾಸಯ್ಯ. ಕನ್ಯೆ ಗೊತ್ತಾಯಿತು. ಲಗ್ನಪತ್ರಿಕೆ ಯಾರ ಹೆಸರಿನಲ್ಲಿ ಹೊರಡಿಸಬೇಕೆಂಬ ಜಿಜ್ಞಾಸೆ. ಗುರುಗಳು ತಂದೆಯಾದರು. ಶರ್ಮಾಜಿ ಬ್ರಾಹ್ಮಣರು. ಅವರ ತಂದೆ ಅನೇಕರಿಗೆ ಗುರು. ಶ್ರೀನಿವಾಸಯ್ಯ ಒಕ್ಕಲಿಗ ಆದರೇನು? ಪ್ರೀತಿ ವಾತ್ಸಲ್ಯವಿದ್ದೆಡೆ ಜಾತಿಕುಲಯಾವುದು ಅಡ್ಡಿ. ಕೃಷ್ಣಶರ್ಮ ತಮ್ಮ ಹೆಸರಿನಲ್ಲೇ ಲಗ್ನಪತ್ರಿಕೆ ಅಚ್ಚುಹಾಕಿಸಿದರು. ಶರ್ಮರ ಆಶೀರ್ವಾದಕ್ಕೆ ಪಾತ್ರನಾದ ಕುಮಾರ ಶ್ರೀನಿವಾಸಯ್ಯನ ವಿವಾಹ ನಡೆಯಿತು. ಸಂಭ್ರಮದಿಂದ ಸೊಸೆ ಬಂದಳು ಮನೆಗೆ. ಶ್ರೀನಿವಾಸಯ್ಯನ ತಾಯಿಗೆ ಸೊಸೆ ಬಂದಳೆಂದು ಆನಂದ, ಸಂತೋಷ, ಸಡಗರ.

ಶ್ರೀನಿವಾಸಯ್ಯ ಜರ್ಮನಿಯ ಕನ್ನಿಕೆಯರಿಗೆ ಮಾರುಹೋಗಲಿಲ್ಲ. ತನ್ನ ವಿವಾಹ ಆಗಿದೆ ಎಂದು ಸಂಯಮದಿಂದ ನಡೆದುಕೊಂಡು ಎಲ್ಲರ ಮೆಚ್ಚುಗೆಗೂ ಪಾತ್ರನಾದ.

ಕಾರ್ಖಾನೆಯ ಮುಖ್ಯಸ್ಥನಾದ. ಮೋಟಾರು ಕೊಂಡ. ಅದನ್ನು ನಡೆಸುವುದನ್ನೂ ಕಲಿತ. ಹೆಂಡತಿಯನ್ನು ಕೂಡಿಸಿಕೊಂಡು ಸಂಜೆ ವಿಹಾರಕ್ಕೆ ಹೊರಡುವನು.

ವರ್ಷಗಳು ಉರುಳಿದವು, ಸೊಸೆ ಗರ್ಭವತಿ ಆಗಲಿಲ್ಲ. ಔಷಧಿ, ಪೂಜೆ, ಪುನಸ್ಕಾರ ಯಾವುದರಿಂದಲೂ ಫಲ ಪ್ರಾಪ್ತಿಯಾಗಲಿಲ್ಲ.

ತಾಯಿಗೆ ಒಬ್ಬನೇ ಮಗ. ಅವನಿಗೂ ಮಕ್ಕಳಿಲ್ಲ. ಸಂತಾನ ಹೇಗೆ ಬೆಳೆಯುವುದು? ತಾಯಿಗೆ ಇದೇ ಕೊರಗು. ಇನ್ನೊಂದು ಕನ್ಯೆಯನ್ನು ವಿವಾಹವಾಗು ಎಂದರು ತಾಯಿ. ದ್ವಿಪತ್ನಿ ನಿಷೇಧಿಸುವ ಶಾಸನ ಆಗ ಇನ್ನೂ ಆಗಿರಲಿಲ್ಲ. ದ್ವಿತೀಯ ಮದುವೆಗೆ ಯಾವ ಆತಂಕವೂ ಇರಲಿಲ್ಲ. ದೊಡ್ಡ ಅಧಿಕಾರ ಸ್ಥಾನದಲ್ಲಿದ್ದ ವರನಿಗೆ ಯಾರು ತಾನೆ ಕನ್ಯಾದಾನ ಮಾಡಲು ಇಚ್ಛಿಸರು? ಆದರೆ ಶ್ರೀನಿವಾಸಯ್ಯ ಮತ್ತೊಂದು ಮದುವೆ ಮಾಡಿಕೊಳ್ಳಲು ಒಪ್ಪಲಿಲ್ಲ. ತಾಯಿಯ ಅಭಿಲಾಷೆ ಕೈಗೂಡಲಿಲ್ಲ. ಈ ಕೊರಗು, ಸಂತಾನವಿಲ್ಲದ ದುಃಖ ಅವರ ದೇಹಾರೋಗ್ಯದ ಮೇಲೆ ಪರಿಣಾಮ ಬೀರದೆ ಹೋಗಲಿಲ್ಲ.

ಸ್ವಾತಂತ್ರ್ಯದ ಸಂಗ್ರಾಮ ಬಿರುಸಿನಿಂದ ಸಾಗಿತ್ತು. ಶ್ರೀನಿವಾಸಯ್ಯನಿಗೆ ಹೋರಾಟದಲ್ಲಿ ಭಾಗವಹಿಸುವ ಆಸೆ. ಆದರೆ ತಾಯಿಗೆ ಇಷ್ಟವಿಲ್ಲ. ಒಬ್ಬನೇ ಮಗ ಅವನೂ ಕೈಬಿಟ್ಟು ಹೋದಾನು ಎಂಬ ಶಂಕೆ. ಆಂದೋಳನದಿಂದ ದೇಶ ಅಲ್ಲೋಲ ಕಲ್ಲೋಲವಾಗಿತ್ತು. ಹರತಾಳ, ಮೆರವಣಿಗೆ, ಧ್ವಜಾರೋಹಣ, ಶಾಸನಭಂಗ ಚಳವಳಿ, ಇವನ್ನು ನಿಷೇಧಿಸುವ ಆಜ್ಞೆಗಳು. ಆಜ್ಞೆ ಉಲ್ಲಂಘಿಸುವ ಉತ್ಸಾಹ, ಚಳವಳಿ, ಲಾಟಿಪ್ರಯೋಗ, ಕಲ್ಲೆಸೆತ, ಅಶ್ರುವಾಯು ಪ್ರಯೋಗ, ಗೋಲೀಬಾರ್, ಜೈಲು. ಇವೆಲ್ಲ ಆಕೆಯ ಕಣ್ಣು ಮುಂದೆಯೇ ನಡೆಯುತ್ತಿದ್ದವು. ಮಲ್ಲೇಶ್ವರದ ಐದನೇ ಸರ್ಕಲ್ಲಿನ ಸಮೀಪದಲ್ಲಿ ಶ್ರೀನಿವಾಸಯ್ಯನ ಮನೆಯಿಂದ ಅನತಿದೂರದಲ್ಲಿ ಗುಂಡೇಟಿಗೆ ಒಬ್ಬ ಹುಡುಗ ಬೀದಿಯಲ್ಲಿ ಸತ್ತು ಬಿದ್ದ. ಒಬ್ಬನೇ ಮಗನನ್ನು ಕಳುಹಿಸಿಕೊಡಲು ಮನಸ್ಸು ಹೇಗೆ ಬಂದೀತು. ಹೊರಗೆ ಹೋಗಬೇಡ ಎಂದು ತಾಯಿ ಎಚ್ಚರಿಸುತ್ತಲೇ ಇರುವಳು. ಬೀದಿಯಲ್ಲಿ ಮನೆಯ ಮುಂದೆ ಬಂದು ಕುಳಿತಿರುವಳು. ನಾನು ಅತ್ತ ಹೋದಾಗಲೆಲ್ಲ ಕ್ಷೇಮ ಸಮಾಚಾರ ವಿಚಾರಿಸುವರು.

ಕ್ಕೈಮುಗಿಯುವರು. ಅದೆಷ್ಟು ಸಮ್ಮತಿ. ನನ್ನನ್ನು ಪೋಲೀಸರು ಜೈಲಿಗೆ ಒಯ್ದರು. ಇದೆಲ್ಲ ತಾಯಿ ಬಲ್ಲವರಾಗಿದ್ದರು. ಚಳವಳಿಯಲ್ಲಿ ಪ್ರತ್ಯಕ್ಷ ಭಾಗವಹಿಸಲು ತಾಯಿ ಅವಕಾಶಕೊಡಲಿಲ್ಲ.

ಆದರೂ ಅಪ್ರತ್ಯಕ್ಷವಾಗಿ ಚಳವಳಿಗೆ ಬೆಂಬಲ ನೀಡುತ್ತಿದ್ದರು. ಕರಪತ್ರ ಗುಟ್ಟಾಗಿ ಹೊರಡಿಸುವುದು ಹಂಚುವುದು ಈ ಕೆಲಸಗಳಲ್ಲಿ ಭಾಗವಹಿಸುತ್ತಿದ್ದರು.

ಶ್ರೀನಿವಾಸಯ್ಯ ಸರಳ ಜೀವಿ. ಸರಳ ಜೀವನ, ಪ್ರಕೃತಿ ಜೀವನ, ಪ್ರಕೃತಿ ಚಿಕಿತ್ಸೆಯಲ್ಲಿ ಅಪಾರ ವಿಶ್ವಾಸ, ತತ್ಸಂಬಂಧ ಗ್ರಂಥಗಳನ್ನು ಓದಿ ಪರಿಣತಿ ಪಡೆದರು. ಕಾಫಿಯನ್ನೂ ಸೇವಿಸರು. ಪ್ರತಿದಿನ ಹಾಲು ಜೇನುತುಪ್ಪ ಸವಿಯುವರು. ಬೆಳಿಗ್ಗೆ ಹಾಲು, ಚಪಾತಿ ಅಥವಾ ರೊಟ್ಟಿ ತಿಂದು ಹೊರಡುವರು. ಸಂಜೆ ಮನೆಗೆ ಬಂದ ಮೇಲೆ ಒಪ್ಪತ್ತು,ಊಟ. ಹೋಟೆಲಿಗೆ ಹೋಗುವುದನ್ನು ನಾನು ಎಂದೂ ಕಾಣೆ, ಪ್ರಕೃತಿ ಜೀವನ, ಪತ್ರಿಕೆ ಗಾಂಧೀ ಸಾಹಿತ್ಯ ಸಂಘದವರಿಂದ ಹೊರಬೀಳಲು ಇವರು ಮುಖ್ಯ ಕಾರಣ. ಪ್ರಕೃತಿ ಚಿಕಿತ್ಸಾ ತರಗತಿಗಳು ನಡೆಸಲು ಅತೀವ ಶ್ರದ್ಧೆ. ದಕ್ಷಿಣ ವಲಯ ಪ್ರಕೃತಿ ಚಿಕಿತ್ಸಾ ಸಮ್ಮೇಳನದ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಪ್ರಕೃತಿ ಜೀವನ ಮತ್ತು ಚಿಕಿತ್ಸಾ ತಜ್ಞರಿಗೆ ಇವರ ಮನೆಯಲ್ಲೇ ಬಿಡಾರ ಮತ್ತು ಆತಿಥ್ಯ. ಪ್ರಕೃತಿ ಚಿಕಿತ್ಸಾಲಯ ಅಖಿಲ ಭಾರತ ಮಟ್ಟದ ಸಮ್ಮೇಳನ ನಡೆದಲ್ಲಿ ಶ್ರೀನಿವಾಸಯ್ಯ ಪ್ರತಿನಿಧಿಯಾಗಿ ಹಾಜರ್. ಯೋಗಾಸನ ಕಲಿಸುವವರಿಗೆ, ಪ್ರಕೃತಿ ಚಿಕಿತ್ಸಾ ತಜ್ಞ ನಾನಾ ವಿಧದಲ್ಲಿ ಪ್ರೋತ್ಸಾಹ. ಪ್ರಕೃತಿ ಚಿಕಿತ್ಸೆ ಸಲಹೆ ನೀಡುವರು. ಅಖಿಲ ಭಾರತ ಪ್ರಕೃತಿ ಚಿಕಿತ್ಸಾ ಸಂಸ್ಥೆಯ ಕಾರ್ಯನಿರ್ವಾಹಕ ಸಮಿತಿಯ ಸದಸ್ಯರೂ ಆಗಿದ್ದರು. ಪ್ರಕೃತಿ ಚಿಕಿತ್ಸೆಗೆ ಅಗತ್ಯವಾದ ಉಪಕರಣಗಳನ್ನು ಸುಲಭದರದಲ್ಲಿ ಒದಗಿಸಿಕೊಡುವ ವ್ಯವಸ್ಥೆ ಮಾಡಿಸಿದ್ದರು.

ಶ್ರೀರಾಮ ಸಹಕಾರ ಬ್ಯಾಂಕ್ ಮಲ್ಲೇಶ್ವರ, ಶ್ರೀಆಂಜನೇಯ ಸಹಕಾರ ಬ್ಯಾಂಕ್ ಶೇಷಾದ್ರಿಪುರಂ ಇವುಗಳ ಸ್ಥಾಪನೆ ಮತ್ತು ಬೆಳವಣಿಗೆಗೆ ಮನಸಾರೆ ದುಡಿದರು ಕೃಷ್ಣಶರ್ಮರ ಆದರ್ಶದಂತೆ. ಕಾರ್ಯನಿರ್ವಾಹಕ ಸಮಿತಿ ಸದಸ್ಯರು ತಮ್ಮ ವೆಚ್ಚದಲ್ಲಿಯೇ ಉಪಹಾರ ತರಿಸಿಕೊಳ್ಳಬೇಕು. ಬ್ಯಾಂಕಿನ ಹಣ ಇದಕ್ಕೆ ಖರ್ಚುಮಾಡಲಾಗದು. ಇಷ್ಟು ಆದರ್ಶ ಮಟ್ಟದಲ್ಲಿ ಬ್ಯಾಂಕಿಗೆ ಸ್ಥಿರವಾದ ಅಸ್ತಿಭಾರ ಹಾಕಿದರು. ಬಡವರಿಗೆ ಅತ್ಯುಪಯುಕ್ತವಾದ ಬ್ಯಾಂಕ್ ಇದು. ಅತಿ ಕಡಿಮೆ ವೆಚ್ಚದಲ್ಲಿ ಬ್ಯಾಂಕ್ ನಡೆಯುತ್ತಿದೆ. ಆದರ್ಶ ಬ್ಯಾಂಕ್ ಎಂದು ಗುರಾಣಿಗಳಿಸಿದೆ. ಹಲವು ಸಾರಿ.

ನಿರ್ಮಲ ಚಿತ್ತ, ವಿಶಾಲ ಹೃದಯ, ದೈವಭಕ್ತ, ಎರಡಾವರ್ತಿ ಜರ್ಮನಿಗೆ ಹೋಗಿಬಂದರೂ ಆಧುನಿಕ ನಾಗರೀಕತೆಯ ಕೊಡುಗೆ ಸಿಗರೇಟು, ಬಾಟ್ಲಿ ಸೇವನೆ ಕಲಿಯಲಿಲ್ಲ. ಎಂಥ ಅನಾಗರೀಕ ! ಗಾಂಧೀ ವಾದಿ. ಮಿತ ಭಾಷಿ. ವಿದ್ಯಾರ್ಥಿ ನಿಲಯ, ಕಲ್ಯಾಣ ಮಂಟಪ ಕಟ್ಟಿಸುವುದರಲ್ಲಿ ತೊಡಗಿದ್ದಾರೆ. ಬಿಡುವಿಲ್ಲದ ಕೆಲಸದಲ್ಲಿ ಇವಕ್ಕೆ ಗಮನ ಕೊಡಲು ಸಾಧ್ಯವಾಗುತ್ತಿಲ್ಲವೆಂದು ಕಾಣುತ್ತೆ. ಜನಸೇವೆಯ ಕಾರ್ಯದಲ್ಲಿ ತೊಡಗಿರಲು ಭಗವಂತ ಇವರಿಗೆ ದೀರ್ಘಾಯುರಾರೋಗ್ಯ ಕರುಣಿಸಲಿ.

-oOo-

# ನಗುಮೊಗದ ಶ್ರೀನಿವಾಸಯ್ಯ

ಎಚ್. ಎಲ್. ನಾಗೇಗೌಡ

'Necessity is the mother of invention' ಎಂಬ ಇಂಗ್ಲಿಷ್ ನುಡಿಯೊಂದುಂಟು. ಮಳೆ ಬೆಳೆಗಳು ಅಪರೂಪವಾದ ನಾಗಮಂಗಲ ತಾಲ್ಲೂಕಿನ ಜನ ಹೊಟ್ಟೆಪಾಡಿಗಾಗಿ ಅಲೆದಾಡದ ಸ್ಥಳಗಳಿಲ್ಲ. ಬೆಂಗಳೂರು, ಭದ್ರಾವತಿ, ನೀಲಗಿರಿ, ಬೊಂಬಾಯಿ ಮುಂತಾದ ಊರುಗಳಲ್ಲಿ ಅವರನ್ನು ಕಾಣಬಹುದು. ಹೋದ ಕಡೆಗಳಲ್ಲೆಲ್ಲಾ ನಾಗಮಂಗಲದ ಜನ ಕೇವಲ ಸಣ್ಣಪುಟ್ಟ ಕೆಲಸಗಳನ್ನೋ ನೌಕರಿಗಳನ್ನೋ ಮಾಡಿಕೊಂಡು ಮಕ್ಕಳನ್ನು ಮುಂದಕ್ಕೆ ತಂದು ಹುಟ್ಟಿದ ನಾಡಿಗೆ ಕೀರ್ತಿ ತಂದಿದ್ದಾರೆ. ಅಂಥವರಲ್ಲಿ ಶ್ರೀ ಹೊ. ಶ್ರೀನಿವಾಸಯ್ಯನವರ ತಂದೆಯವರೊಬ್ಬರು.

ಶ್ರೀ ಶ್ರೀನಿವಾಸಯ್ಯನವರು ತಮ್ಮ ಇಂಜಿನಿಯರಿಂಗ್ ವಿದ್ಯಾಭ್ಯಾಸ ಮುಗಿಸಿ ಕಾರ್ಖಾನೆಯೊಂದರಲ್ಲಿ ಕೆಲಸಕ್ಕೆ ಸೇರಿ ಹಂತಹಂತವಾಗಿ ಮೇಲೇರಿ ಈಗ ಭಾರತ್ ಅರ್ತ್ ಮೂವರ್ಸ್‌ನಲ್ಲಿ ಒಬ್ಬ ಉನ್ನತ ಅಧಿಕಾರಿಯಾಗಿದ್ದಾರೆ. ಕನ್ನಡನಾಡಿನಲ್ಲಿ ಸ್ಥಾಪಿತವಾದ ಈ ಕಾರ್ಖಾನೆಯಲ್ಲಿ ಕನ್ನಡಿಗರಿಗೂ ಕನ್ನಡಕ್ಕೂ ಆಗುತ್ತಿದ್ದ ಅನ್ಯಾಯವನ್ನು ಕಂಡ ಶ್ರೀನಿವಾಸಯ್ಯನವರು ಕನ್ನಡಿಗರಿಗೆ ಕೆಲಸ, ಕನ್ನಡಕ್ಕೆ ಸ್ಥಾನ ಇವೆರಡನ್ನೂ ಎಷ್ಟರಮಟ್ಟಿಗೆ ದೊರಕಿಸಿಕೊಟ್ಟಿದ್ದಾರೆಂಬುದನ್ನು ಆ ಕಾರ್ಖಾನೆಗೆ ಭೇಟಿ ಕೊಟ್ಟು ಯಾವುದಾದರೂ ಒಂದು ಸಮಾರಂಭದಲ್ಲಿ ಭಾಗವಹಿಸಿದರೆ ಗೊತ್ತಾಗುತ್ತದೆ. ರೈಲ್ ಕೋಚ್ ವಿಭಾಗದ ಕನ್ನಡ ಸಂಘಕ್ಕೆ ಭೇಟಿ ನೀಡಿ ಅದರ ಚಟುವಟಿಕೆಗಳನ್ನು ನೋಡಿದಾಗ ಅದಕ್ಕೆಲ್ಲಾ ಅಡಿಪಾಯ ಹಾಕಿರುವವರು ಶ್ರೀನಿವಾಸಯ್ಯ ಎಂಬುದು ಸ್ಪಷ್ಟವಾಗುತ್ತದೆ.

ಶ್ರೀನಿವಾಸಯ್ಯನವರ ಕಾರ್ಯಚಟುವಟಿಕೆಗಳು ಕಾರ್ಖಾನೆಗಷ್ಟೇ ಸೀಮಿತವಾಗದೆ ಬೆಂಗಳೂರು ನಗರದಲ್ಲೂ ಅವುಗಳನ್ನು ಕಾಣಬಹುದು. ಅವರು ಒಂದಲ್ಲ ಒಂದು ರೀತಿಯಲ್ಲಿ ಸಂಪರ್ಕ ಪಡೆದಿರುವ ಸಂಸ್ಥೆಗಳು ಹತ್ತಾರು. ದಿವಂಗತ ಸಿದ್ಧವನಹಳ್ಳಿ ಕೃಷ್ಣಶರ್ಮ ಹಾಗೂ ಜಿ.ಪಿ. ರಾಜರತ್ನಂ ಅವರ ಆತ್ಮೀಯರಾಗಿ, ಗಾಂಧೀತತ್ವದ ಅನುಯಾಯಿಗಳಾಗಿ, ತಾವು ನಡೆಸುತ್ತಿರುವ ಸಂಘಸಂಸ್ಥೆಗಳಲ್ಲಿ ನಿಷ್ಠಾವಂತ ದುಡಿಮೆಗೆ ಹೆಸರಾಗಿ ಶ್ರೀನಿವಾಸಯ್ಯನವರು ಇಂದು ಬೆಂಗಳೂರಿನಲ್ಲಿ ಒಂದು ಗಣ್ಯ ಸ್ಥಾನ ಪಡೆದಿದ್ದಾರೆ.

ಇಂಜಿನೀಯರ್ ಆಗಿದ್ದ ಕಾರಣ ಜರ್ಮನಿಗೂ ಹೋಗಿಬಂದಿದ್ದಾರೆ. ಇವರಂತೆ ವಿದೇಶಗಳಿಗೆ ಹೋಗಿಬಂದವರು ಲೆಕ್ಕವಿಲ್ಲದಷ್ಟಿದ್ದಾರೆ. ಆದರೆ ಹೋದವರು ಕಂಡದ್ದು ಏನೇನೋ ! ಆದರೆ ಶ್ರೀನಿವಾಸಯ್ಯ ಕಂಡದ್ದೇ ಬೇರೆ. ಯಾವ ದೇಶದಲ್ಲೇ ಆಗಲಿ ನಾವು ಹೊರಗೆ ಕಾಣುವುದಕ್ಕಿಂತ ಬೇರೊಂದು ಒಳಗಿರುತ್ತದೆ. ಅದನ್ನು ಕಂಡವರು ಮತ್ತು ಕಂಡುದನ್ನು ತುಂಬ ಆಕರ್ಷಕವಾದ ರೀತಿಯಲ್ಲಿ ಬರೆದವರು ಶ್ರೀನಿವಾಸಯ್ಯ 'ನಾ ಕಂಡ ಜರ್ಮನಿ' ಅವರ ಉತ್ತಮವಾದ ಕೃತಿ, ಸಾಹಿತ್ಯ ರಚನೆಯಲ್ಲೂ ಸಾಹಸಿ, ಎಂಬುದಕ್ಕೆ ಸಾಕ್ಷಿ.

ಇಷ್ಟೆಲ್ಲಾ ಸಾಹಸಮಯ ಜೀವನ ನಡೆಸಲು ಅವರ ವ್ಯಕ್ತಿತ್ವವೇ ಕಾರಣ. ಶುಚಿ ಜೀವನ, ಶುಚಿ ನಡೆನುಡಿ, ರಚನಾತ್ಮಕ ಕಾರ್ಯಗಳಲ್ಲಿ ಆಸಕ್ತಿ. ಮೇಲು ನೋಟಕ್ಕೆ ಕೊಂಚ ಹಿಂಜರಿತದ ಮನಸ್ಸಿನವರಂತೆ ಕಂಡರೂ ತಾವು ಕೈಕೊಂಡ ಕೆಲಸ ಗಳನ್ನು ಅಚ್ಚುಕಟ್ಟಾಗಿ ಮಾಡಿ ಮುಗಿಸುವ ಕಾರ್ಯತತ್ಪರತೆ ಇವು ಅವರ ವ್ಯಕ್ತಿತ್ವದ ಹಲವು ಮುಖಗಳು. ಇಷ್ಟೆಲ್ಲಾ ಇದ್ದೂ ಸಾರ್ವಜನಿಕ ಜೀವನದಲ್ಲಿ ಅಥವಾ ತಮ್ಮ ಕಾರ್ಖಾನೆಯ ಕಾರ್ಯಕ್ಷೇತ್ರದಲ್ಲಿ ಜಯ ಪಡೆಯುವುದು ಕಷ್ಟ. ಒದಗುವ ಅನೇಕ ಕಿರುಕುಳಗಳನ್ನೂ ಆಕ್ಷೇಪಣೆಗಳನ್ನೂ ಎದುರಿಸುವುದು ಸುಲಭವಲ್ಲ. ಇದಕ್ಕೆ ತಕ್ಕ ಅಸ್ತ್ರವೇ ಬೇಕು. ಆ ಅಸ್ತ್ರವೆಂದರೆ ಶ್ರೀನಿವಾಸಯ್ಯನವರ ನಗುಮೊಗ. ಆ ಸ್ವಚ್ಛ ಮುಖದ ಅಚ್ಚನಗುವಿಗೆ ಯಾರಾದರೂ ಸೋಲಲೇ ಬೇಕು.ಒಂದು ಬಗೆಯ ಸಮ್ಮೋಹ ನಾಸ್ತ್ರ ಅವರ ನಗು. ಇದರಲ್ಲಿ ಕಪಟತನವಿಲ್ಲ. ಸೋಗಿನ ಮುಖವಾಡವಿಲ್ಲ. ಆದ್ದರಿಂದಲೇ ಅವರು ಎಲ್ಲರನ್ನೂ ಆಕರ್ಷಿಸಿ ಎಲ್ಲರಿಂದಲೂ ಆಕರ್ಷಿತರಾಗಿ ಇಷ್ಟೊಂದು ಬಗೆಬಗೆಯ ಕಾರ್ಯಗಳಲ್ಲಿ ಯಶಸ್ವಿಯಾಗಿರುವುದು.

ಶ್ರೀನಿವಾಸಯ್ಯ ನಮ್ಮ ಅನೇಕ ಕಾರ್ಯಕರ್ತರಿಗೆ ಒಂದು ಮಾದರಿ. ಮಾಡಲು ಬೇಕಾದಷ್ಟು ಕೆಲಸ ಇದೆ. ಮಾಡುವವರೂ ಲೆಕ್ಕವಿಲ್ಲದಷ್ಟಿದ್ದಾರೆ. ಆದರೆ ಶ್ರೀನಿ ವಾಸಯ್ಯ ನವರಂತೆ ನಿಷ್ಠೆಯಿಂದ, ನಿರಾಡಂಬರವಿಲ್ಲದೆ, ಜನಸೇವೆಯೇ ಜನಾರ್ದನ ಸೇವೆ ಎಂದು ಭಾವಿಸಿ ದುಡಿಯುವವರು ಕಡಮೆ. ಅಂಥವರಲ್ಲಿ ಶ್ರೀನಿವಾಸಯ್ಯ ನವರು ಒಬ್ಬರೆಂದರೆ ನನ್ನ ನಾಡಿನಿಂದ ಬಂದ ಅವರ ಬಗ್ಗೆ ನಿಜವಾದ ಅಭಿಮಾನ. ಅವರಿಗೆ ಎಲ್ಲ ರೀತಿಯ ಶ್ರೀರಕ್ಷೆ ಇರಲಿ.

# ನಾ ಕಂಡ ಸರಳಜೀವಿ

---

ಎಸ್. ಶಶಿಕಲಾ

ನಮ್ಮ ತಂದೆಯವರಾದ ಶ್ರೀನಿವಾಸಯ್ಯನವರು ಸ್ವಸಾಮರ್ಥ್ಯದಿಂದ ಓದಿ ಇಂಜಿನಿಯರಾಗಿ ವಿಮಾನ ಕಾರ್ಖಾನೆ ಸೇರಿ ಅಲ್ಲಿಂದ ಭಾರತ್ ಅರ್ತ್ ಮೂವರ್ಸ್ (ಬಿ.ಇ.ಎಂ.ಎಲ್.) ಸಂಸ್ಥೆಯ ರೈಲ್ ಕೋಚ್ ಕಾರ್ಖಾನೆಗೆ ಸೇರಿದರು. ಕಾರ್ಖಾನೆಯ ವತಿಯಿಂದ ಎರಡು ಸಲ ಜರ್ಮನ್ ಪ್ರವಾಸ ಮಾಡಿ ಬಂದರಲ್ಲದೆ ಶ್ರೀಲಂಕಾ ಮತ್ತು ಬಾಂಗ್ಲಾ ದೇಶಗಳಿಗೂ ಹೋಗಿ ಬಂದರು. ಈಗ ಇವರು ಬಿ.ಇ.ಎಂ.ಎಲ್ ನಲ್ಲಿ ಡೆಪ್ಯುಟಿ ಜನರಲ್ ಮ್ಯಾನೇಜರ್ ಆಗಿದ್ದಾರೆ. ಒಬ್ಬ ಮನುಷ್ಯ ತನ್ನ ಕಾರ್ಯ ವ್ಯಾಪ್ತಿಯನ್ನು ತಜ್ಞತೆಯನ್ನು ಒಂದು ಕ್ಷೇತ್ರದಲ್ಲಿ ತೋರಿಸುತ್ತಾನೆ. ಆದರೆ ನಮ್ಮ ತಂದೆಯವರು ಸೇವಾರಂಗ, ಸಾಮಾಜಿಕ ರಂಗ, ಸಾಹಿತ್ಯ ಕ್ಷೇತ್ರ ಎಲ್ಲದರಲ್ಲೂ ದುಡಿಯುತ್ತಿದ್ದಾರೆ. ಬರವಣಿಗೆ, ಓದುವುದು ಮತ್ತು ಫೋಟೋ ತೆಗೆಯುವುದೆಂದರೆ ಇವರಿಗೆ ಹೆಚ್ಚು ಆಸಕ್ತಿ. ಮಕ್ಕಳ ಜೊತೆ ಆಟವಾಡುವುದೆಂದರೆ ಮತ್ತೂ ಇಷ್ಟ.

ದಿನವೂ ಬೆಳಿಗ್ಗೆ ಐದು ಗಂಟೆಗೆ ವಾಯು ವಿಹಾರಕ್ಕೆಂದು ಹೋಗುವರು. ಆಗ ನಮ್ಮ ತಾಯಿಯೂ ಜೊತೆಯಲ್ಲಿ ಹೋಗುತ್ತಾರೆ. ಹಾಗೆಯೇ ತರಕಾರೀನೂ ಜೊತೆಯಲ್ಲಿ ತರುತ್ತಾರೆ. ನಂತರ ಸ್ನಾನ ಮುಗಿಸಿ ಪೂಜೆ ಮಾಡಿ ಒಂದು ಲೋಟ ಹಣ್ಣಿನ ರಸ ಕುಡಿದು ಕಾರ್ಖಾನೆಗೆ ಹೋಗಲು ಸಿದ್ಧವಾಗುತ್ತಾರೆ. ಅಷ್ಟರಲ್ಲಿ ಅವರನ್ನು ಕಾಣಲು ಯಾರಾದರೂ ಬಂದಿದ್ದರೆ ವಿಚಾರಿಸಿ ಕಳುಹಿಸುತ್ತಾರೆ. 8-20ಕ್ಕೆ ಕಾರ್ಖಾನೆಯ ಕಾರು ಬರುತ್ತದೆ. ಊಟ ತೆಗೆದುಕೊಂಡು ಹೋಗದಿದ್ದಲ್ಲಿ ಮನೆಯಲ್ಲಿಯೇ ತಿಂಡಿ ತಿಂದು ಹೋಗುತ್ತಾರೆ. ಕಾರ್ಖಾನೆಯ ಕೆಲಸ ಮುಗಿಸಿಕೊಂಡು ಸಾಯಂಕಾಲ 6-30ಕ್ಕೆ ಮನೆಗೆ ಬರುತ್ತಾರೆ. ಅಷ್ಟರಲ್ಲಿ ಕೆಲವರು ಬಂದು ಕಾಯುತ್ತಿರುತ್ತಾರೆ. ಅವರನ್ನು ಮಾತನಾಡಿಸಿ ಕಳುಹಿಸಿದ ನಂತರ ಅಂದಿನ ಅಂಚೆಯವನು ತಂದಿಟ್ಟ ಪತ್ರಗಳನ್ನು ನೋಡಿ ಸ್ನಾನ ಮಾಡಿ ಊಟ ಮುಗಿಸುತ್ತಾರೆ. ನಂತರ ಗಾಂಧಿ ಸಾಹಿತ್ಯ ಸಂಘಕ್ಕೆ ಅಥವಾ ರಾಮಮಂದಿರ, ಇಲ್ಲದಿದ್ದರೆ ಬೇರೆ ಯಾವ ಸಂಘ ಸಂಸ್ಥೆಯಲ್ಲಾದರೂ ನಡೆಯುವ ಸಭೆಗಳಿಗೆ ಹೋಗುತ್ತಾರೆ. ಕೆಲವು ಸಲ ಊಟ ಮಾಡದೆ ಹಾಗೇ ಹೋಗಿರುತ್ತಾರೆ. ಎಲ್ಲ ಮುಗಿಸಿ ಮನೆಗೆ ಬರುವಷ್ಟರಲ್ಲಿ

10 ಗಂಟೆಯಾಗುತ್ತೆ. ನಾವೇನಾದರು ಸಿನಿಮಾಕ್ಕೆ ಹೋಗಬೇಕೆಂದರೆ ಅವರಿಗೆ ಏನೂ ಕೆಲಸ ಇಲ್ಲದೇ ಇದ್ದರೂ 9 ಗಂಟೆಗೆ ಬರುವ ಹಾಗಿದ್ದರೆ ಕೇಳಿಕೊಂಡಿದ್ದು ಹೊರಡ ಬೇಕು. ನಮಗೆ ಮಾತನಾಡಲು ಸಿಗಬೇಕಾದರೂ ಸಹ 10 ಗಂಟೆಯ ಮೇಲೆಯೇ. ಆಗಲೂ ಸಹ ಏನಾದರೂ ಓದುತ್ತಾ, ಬರೆಯುತ್ತಾ ಇರುತ್ತಾರೆ.

ಇವರು ಅನೇಕ ವರ್ಷಗಳಿಂದ ಪ್ರಕೃತಿಜೀವನವನ್ನು ಅನುಸರಿಸುತ್ತಿದ್ದಾರೆ. ಏನೇ ಅಸ್ವಸ್ಥತೆಯುಂಟಾದರೂ ವೈದ್ಯರ ಬಳಿ ಹೋಗುವುದಿಲ್ಲ. ಮನೆಯವರೆಲ್ಲಾ ಅದಕ್ಕೆ ಹೊಂದಿಕೊಂಡಿದ್ದೇವೆ. ಇನ್ನು ಇವರ ಆಹಾರವೆಂದರೆ ಬೆಳಿಗ್ಗೆ ಹಣ್ಣಿನ ರಸ ಮಧ್ಯಾಹ್ನ ಸುಕ್ಕಾ ಚಪಾತಿ, ಪಲ್ಯ, ಮಜ್ಜಿಗೆ, ರಾತ್ರಿ ಸ್ವಲ್ಪ ಅನ್ನ, ತರಕಾರಿ ತುಂಬಾ ಇರಬೇಕು, ಜೊತೆಗೆ ಮಜ್ಜಿಗೆ, ಹಣ್ಣಿದ್ದರೆ ತಿನ್ನುತ್ತಾರೆ.

ನಮ್ಮ ತಂದೆಯವರು ಗಾಂಧೀವಾದಿಗಳು. ತತ್ವಗಳನ್ನು ಅನುಸರಿಸುವರು. ಇವರ ಗುರುಗಳು ದಿವಂಗತ ಸಿದ್ದವ್ವನಹಳ್ಳಿ ಕೃಷ್ಣಶರ್ಮಾಜಿಯವರು. ಕಾರ್ಖಾನೆ ಯಲ್ಲಿಯೇ ಆಗಲಿ ಮನೆಯಲ್ಲಿಯೇ ಆಗಲಿ ಎಲ್ಲರನ್ನೂ ಒಂದೇ ಭಾವದಿಂದ ನೋಡು ತ್ತಾರೆ. ಕಾರ್ಖಾನೆಯಲ್ಲಿ ಕಾರ್ಮಿಕರ ಮೆಚ್ಚಿನ ಇಂಜಿನಿಯರ್ ಸಹ ಆಗಿದ್ದಾರೆ. ಒಬ್ಬ ಕೆಲಸಗಾರ ಎಂಥವನೇ ಆಗಿರಲಿ ಅವನ ಯಾವುದೇ ಕಾರ್ಯಕ್ರಮಕ್ಕೂ ತಪ್ಪದೇ ಹೋಗುತ್ತಾರೆ. ಇವರು ಜರ್ಮನಿಗೆ ಹೋದಾಗಲೂ ಅಷ್ಟೆ ಅಲ್ಲಿಯ ಜನರಲ್ಲಿ ಹೊಂದಿ ಕೊಂಡು, ನಮ್ಮ ದೇಶದ ಕಲೆ-ಸಾಹಿತ್ಯಗಳನ್ನು ಅಲ್ಲಿಯವರಿಗೆ ಅರ್ಥವಾಗುವ ಹಾಗೆ ಹೇಳಿ ಬಂದರು. ಮಾಂಸ, ಮದ್ಯವನ್ನು ಮುಟ್ಟದೆ ಬರೀ ಸಸ್ಯಾಹಾರಿಯಾಗಿಯೇ ಜರ್ಮನಿಯಲ್ಲಿ ಇದ್ದು ಬಂದಿದ್ದಾರೆ. ಯಾವಾಗಲೂ ನಗುನಗುತ್ತಲೇ ಇರುವ ನಮ್ಮ ತಂದೆ ಕಠಿಣವಾಗಿ ಮಾತನಾಡುವವರಲ್ಲ. ಇವರನ್ನು ನಾವು ಕೋಪದಲ್ಲಿ ನೋಡು ವುದೇ ಅಪರೂಪ. ಆದರೆ ಬಹಳ ಶಿಸ್ತು. ಈ ಕೆಲಸ ಈಗ ಆಗಬೇಕೆಂದರೆ ಅದು ಆಗಲೇಬೇಕು. ಒಂದೇ ಪಟ್ಟು. ಆಗುವವರೆಗೂ ಬಿಡುವವರಲ್ಲ. ಎಲ್ಲಾ ಜನಗಳಿಗೆ ಕಾರ್ಮಿಕರಿಗೆ ಬೇಕಾದವರಾಗಿದ್ದರೂ ಸಹ ಇವರು ದರ್ಪ ತೋರುವುದಿಲ್ಲ. ಸ್ವಾರ್ಥ ಮತ್ತು ಅಹಂಕಾರ ದೂರ. ಎಲ್ಲೇ ಹೋದರೂ ಅಲ್ಲಿಯವರಲ್ಲಿ ಹೊಂದಿಕೊಳ್ಳುವರು. ಇವರ ಹತ್ತಿರ ಮಾತಾಡುತ್ತ ಕುಳಿತರೆ ಏಳುವುದಕ್ಕೆ ಮನಸ್ಸೇ ಬರುವುದಿಲ್ಲ. ಎಷ್ಟೋ ವಿಚಾರಗಳನ್ನು ತಿಳಿಯಬಹುದು. ಎಷ್ಟೇ ಸುಖ ಬಂದರೂ ಹಿಗ್ಗದೇ, ಕಷ್ಟ ಬಂದಾಗ ಕುಗ್ಗದೇ ಇರುವಂಥ ಮಹಾನುಭಾವರು.

ಇವರು ಕಾರ್ಖಾನೆಯಲ್ಲಿ ಕಾರ್ಮಿಕರನ್ನು ಮಾತನಾಡಿಸಿ ಕೆಲಸ ಮಾಡಿಸು ವುದರಲ್ಲಿ ಚತುರರು. ಯಾವುದಾದರೂ ಬೋಗಿ ಸರಿಯಿಲ್ಲದಿದ್ದರೆ ಏನಪ್ಪಾ ಇದು ಹೀಗಿದೆ? ಕಾರ್ಖಾನೆಯಲ್ಲಿ ಏನು ಇಷ್ಟು ಗಲೀಜು ? ಎಂದರೆ ಸಾಕು, ಮರುದಿನವೇ ಕಾರ್ಮಿಕರು ಎಲ್ಲವನ್ನೂ ಸರಿಮಾಡಿ ಇಟ್ಟಿರುತ್ತಾರೆ. ಅಂದರೆ ಇವರ ಬಗ್ಗೆ ಕಾರ್ಖಾನೆ

ಯಲ್ಲಿ ಎಷ್ಟು ಭಯ, ಗೌರವ ಎರಡೂ ಇದೆ ಅನ್ನೋದು ತಿಳಿಯುತ್ತದೆ. ಕಾರ್ಮಿಕ ವರ್ಗದವರು ಯಾವುದೇ ಕಾರ್ಯಕ್ರಮಕ್ಕೆ ಕರೆದರೆ ತಪ್ಪದೇ ಹೋಗುತ್ತಾರೆ. ಒಬ್ಬ ಸಾಮಾನ್ಯ ಕಾರ್ಮಿಕನೇ ಬಂದು ಮದುವೆ ಅಥವಾ ಯಾವುದೇ ಶುಭಕಾರ್ಯಕ್ಕೆ ಆಹ್ವಾನವಿತ್ತರೇ, ಎಷ್ಟೇ ಕೆಲಸವಿದ್ದರೂ ಮುಗಿಸಿ ಹೋಗಿ ಬರುತ್ತಾರೆ. ಎಂಥವರೇ ಮನೆಗೆ ಬಂದರೂ ಸತ್ಕರಿಸದೇ ಕಳುಹಿಸುವುದಿಲ್ಲ.

ಅವರಿಗೆ ಇನ್ನೂ ಹೆಚ್ಚು ಆಯುಷ್ಯವನ್ನು ದೇವರು ಕೊಡಲಿ ಎಂದು ಪ್ರಾರ್ಥಿಸುವೆ.



# ಅಣ್ಣ ಶ್ರೀನಿವಾಸಯ್ಯ

**ನೀಲತ್ತಹಳ್ಳಿ ಕಸ್ತೂರಿ**

ಖಾದಿ ಲುಂಗಿ, ಅರೆತೋಳಿನ ಖಾದಿ ಷರಟು, ತಲೆಯಲ್ಲಿದ್ದ ಟಿಂಗಾಣಿ ಜುಟ್ಟನ್ನು ಮುಚ್ಚಿದ್ದ ಗಾಂಧೀ ಟೋಪಿ. ಒಳ್ಳೇ ದುಂಡು ಕೆಂಪು ಮುಖ. ಅಷ್ಟೇನೂ ಎತ್ತರ ಅಲ್ಲದ ದೇಹ. ದುಂಡುದುಂಡಾದ ಮೈಕಟ್ಟು. ಸೈಕಲ್ ಮೇಲೆ ಓಡಾಟ. ಗಾಂಧೀ ಸಾಹಿತ್ಯ ಸಂಘದ ಕಾರ್ಯಕ್ರಮಗಳನ್ನು ಮಲ್ಲೇಶ್ವರದಲ್ಲಿ ಪ್ರಚಾರಮಾಡಲು ಕೈಯ್ಯಲ್ಲಿ ಡಬ್ಬ ತಗಡಿನ ತುತ್ತೂರಿ ಹಿಡಿದು ಹಣ ವಸೂಲಿ ಮಾಡಲು ಮನೆಮನೆಗೆ ಅಲೆತ. ಸಂಘದಲ್ಲಿ ಕಸ ಗುಡಿಸುವುದು, ಜಮಖಾನ ಎತ್ತುವುದು, ಪುಸ್ತಕ ಜೋಡಿಸುವುದು, ಬಂದವರಿಗೆ ಪುಸ್ತಕ ಕೊಡುವುದು, ಇತ್ಯಾದಿ ಕೆಲಸ. ಇದ್ದದ್ದು ಮಲ್ಲೇಶ್ವರದ ಆರನೆಯ ಕ್ರಾಸಿನಲ್ಲಿ ಶಾಲೆ ಹಿಂದೆ ಒಂದು ಸಣ್ಣ ಮನೆ. ನಿರಂಜನರ "ರಂಗಮ್ಮನ ವಠಾರ" ಕಾದಂಬರಿಗೆ ಹಿನ್ನೆಲೆ ಒದಗಿಸಿತು ಎನ್ನಬಹುದಾದ ವಠಾರ.

ಹಳೆಯ ಕಾಲದ ಶ್ರದ್ಧೆ, ಭಕ್ತಿ, ನೀತಿ ನಿಯತ್ತು, ನೇಮಗಳೇ ಮೈವಡೆದ ಹಾಗಿದ್ದ ತಾಯಿ. ಆಕೆಯ ವ್ರತ ನೋಂಪಿ ಅಪಾರ. ಪೂಜೆ ಪುನಸ್ಕಾರ ಹೇಳುವಂತಿಲ್ಲ. ಶುದ್ಧ ಸಾತ್ವಿಕ ಜೀವ. ಜೊತೆಗೆ ವ್ಯವಹಾರ ಕುಶಲಿ. ಮಗ ಎಳೆಯ ಮಗುವಾಗಿರುವಾಗಲೇ ಪತಿ ಕಣ್ಮರೆಯಾದರೂ, ಧೃತಿಗೆಡದೆ, ಮನೆಯ ಆಸ್ತಿ ರೂಢಿಸಿ, ಮಗನನ್ನು ಬೆಳೆಸಿ, ಒಳ್ಳೆ ವಿದ್ಯೆ ಕೊಡಿಸಿ ರೂಪಿಸಿದ ಗಟ್ಟಿ ಜೀವ. ಮೇಲಾಗಿ ಅಪಾರ ದೈವಭಕ್ತಿ. ದಿನವೂ ಪೂಜೆ, ಭಜನೆ ಗಂಟೆಗಟ್ಟಲೆ. ಏಕಾದಶಿ ಉಪವಾಸ ಕಟ್ಟುನಿಟ್ಟಾಗಿ. ತಮ್ಮ ಸಮಾಜದ ರೂಢಿಗಳಿಗೆ ಹೊರತಾಗಿ, ನಿಷ್ಠೂರಕ್ಕೂ ಗುರಿಯಾಗಿ, ಸಾತ್ವಿಕವಾಗಿ, ಶುಧ್ಧ ಸಸ್ಯಾಹಾರಿಯಾಗಿ ಬೆಳೆದ ಜೀವ. ಮಗನ ಮೇಲೆ ಇದೆಲ್ಲದರ ಪ್ರಭಾವ ಅಪಾರ.

ನಾವೆಲ್ಲ ಶ್ರೀನಿವಾಸಯ್ಯನವರನ್ನು ಮೊದಲ ಕಂಡದ್ದು ಹೀಗೆ. ಸುಮಾರು 33 ವರ್ಷದ ಹಿಂದೆ, 1947. ಅದೇತಾನೇ ಸ್ವಾತಂತ್ರ್ಯ ಬಂದಿತ್ತು. ಜನರ ಉತ್ಸಾಹ ಅಪಾರ. ಸೇವಾದಳದ ಆಕರ್ಷಣೆ ನಮಗೆ. ಮಲ್ಲೇಶ್ವರದಲ್ಲಿ ಶ್ರೀನಿವಾಸಯ್ಯನವರ ಮನೆಯಲ್ಲೆ ಇದ್ದ ಗಾಂಧೀಸಾಹಿತ್ಯ ಸಂಘಕ್ಕೆ ಪ್ರವೇಶ, ಮರುವರ್ಷವೇ ಬಾಪೂಜಿ ಹತ್ಯೆ. ಆ ಸಂಬಂಧದ ಕಾರ್ಯ ಕ್ರಮಗಳು, ಪ್ರಾರ್ಥನಾ ಸಭೆಗಳು ಮೆರವಣಿಗೆ, ಭಾಷಣ, ಸಾಮೂಹಿಕ ಸೂತ್ರಯಜ್ಞ; ಗಾಂಧೀ ಸಾಹಿತ್ಯದ ಅದಮ್ಯ

ಆಕರ್ಷಣೆ, ಪ್ರಭಾವ, ಪೂಜ್ಯ ಸಿದ್ಧವನಹಳ್ಳಿ ಕೃಷ್ಣಶರ್ಮಾಜಿಯವರ ಜೀವನದ ಅಂಗಳಕ್ಕೆ ಪ್ರವೇಶ. ಅವರ ಸ್ಫೂರ್ತಿಯುತ ಸಹವಾಸ, ಸೂಜಿಗಲ್ಲಿನ ಸೆಳೆತ. ಖಾದಿಯ ಹೊದಿಕೆ. ಸಂಘದ ಕೆಲಸದಲ್ಲಿ ಮಗ್ನತೆ. ತುತ್ತೂರಿ ಹಿಡಿದು ಕೂಗುತ್ತ ಅಲೆಯುವುದು, ಬೋರ್ಡು ಬರೆಯುವುದು, ಕಸ ಗುಡಿಸುವುದು, ಭಜನೆ ಮಾಡುವುದು, ಕಾಣಿಕೆ ವಸೂಲಿಗೆ ಅಲೆದಾಡುವುದು. ನಾಟಕ, ಸಭೆಗಳಿಗೆ ಬೆಂಚು ಹೊರುವುದು; ಮಲ್ಲೇಶ್ವರದ ರಾಮಮಂದಿರದಲ್ಲಿ ಗಾಂಧೀ ಜಯಂತಿಯ ವಾರದಲ್ಲಿ ಅಲ್ಲೇ ಠಿಕಾಣಿ. ಅಲಂಕಾರ, ಪಟಗಳ ಜೋಡಣೆ, ಹುಂಡಿ ಆಡಿಸುವುದು, ಗಾಂಧೀ ನೆಹರು ಚಿತ್ರ ಪುಸ್ತಕ ಮಾರುವುದು, ಪಕ್ಕದ ಮನೆಗಳಿಂದ ಹೂಕುಂಡ ಹೊತ್ತು ತರುವುದು. ಜಮಖಾನ ಎತ್ತುವುದು. ರಾತ್ರಿ ಅಲ್ಲೇ ನಿದ್ದೆ. 40-50 ಯುವಕರ ಕೂಟ, ತಮಾಷೆ, ಚರ್ಚೆ, ಬೆಳಗಿನಜಾವದ ಪ್ರಾರ್ಥನೆ. ಕಿಟ್ಟಿ, ಪಾಪ್ಪ, ವೆಂಕಟಾಚಲಂ ಹಾಡುಗಳು, ಶರ್ಮಾಜಿಯವರ ಮಾತು, ಸಂಭಾಷಣೆ—ಎಲ್ಲದರಲ್ಲೂ ನಮಗೆ ಶ್ರೀನಿವಾಸಯ್ಯನವರೇ ಮುಂದಾಳು, ಮೇಲುಪಂಕ್ತಿ. ಕೆಲಸಗಾರರ ಬಳಗಕ್ಕೆ ಅವರು ಅಣ್ಣ! ಶರ್ಮಾಜಿ ಶ್ರೀರಾಮ ಆದರೆ, ಶ್ರೀನಿವಾಸಯ್ಯ ಆಂಜನೇಯ. ನಾವೆಲ್ಲ ಇತರವಾನರ ಬಂಟರು ! ಕಿಷ್ಕಿಂಧೆಯ ಹಾಗೆಯೆ ಇತ್ತು ಆಗ ಗಾಂಧೀ ಸಾಹಿತ್ಯ ಸಂಘದ ಸಣ್ಣ ಕೋಣೆ. ಅಲ್ಲಿ ಅಪಾರ ಕೆಲಸ. ಆದರೆ, ಒಂದೇ, ಅಲ್ಲಿ ವಾಲಿ-ಸುಗ್ರೀವರ ಕಾಳಗ ಇರಲಿಲ್ಲ. ತಾರೆ, ರುಮೆಯರ ಪ್ರಸಂಗ ಇರಲಿಲ್ಲ !

ಈ ಮೂವತ್ತು ಮೂರು ವರ್ಷದ ಅವಧಿಯಲ್ಲಿ ಶ್ರೀನಿವಾಸಯ್ಯನವರ ಬದುಕು ಬೆಳೆದಿದೆ, ಸ್ವಲ್ಪ ಬದಲೂ ಆಗಿದೆ. ಸಹಜವಾಗಿಯೆ ಆಗ ಇದ್ದ ತಲೆಯ ಜುಟ್ಟು ಇಲ್ಲ. ಖಾದಿಯ ಅರ್ಧ ಪ್ಯಾಂಟು ಹೋಯಿತು (ಇಂಜಿನಿಯರಿಂಗ್ ಕಾಲೇಜಿನಲ್ಲಿ ವರ್ಕ್‌ಷಾಪ್‌ಗೆ ಹೋಗುವ ದಿನದ ಉಡುಪಾಗಿತ್ತು ಖಾದಿಯ ಖಾಕಿ ಬಣ್ಣದ ಅರ್ಧ ಪ್ಯಾಂಟು). ಅವರ ಸ್ಥಾನ–ಅಧಿಕಾರಗಳಿಗೆ ಅಗತ್ಯವಾದಂತೆ, ತಕ್ಕಂತೆ ಸೂಟು ಬಂತು ಆದರೆ ಎಲ್ಲ ಖಾದಿಯೆ, ಜರ್ಮನಿಗೆ ಹೋದಾಗಲೂ ಅದೇ. ಆದರೆ ಈಗಲೂ ಈ ಸೂಟಿನ ವೇಷ ಅವರಿಗೆ ಸಮವಸ್ತ್ರ ಇದ್ದ ಹಾಗೆ. ಕೆಲಸ ಮುಗಿದ ಕೂಡಲೇ ಪಂಚೆಗೆ ಬದಲಾವಣೆ. ಆಲುಂಗಿ-ಅಂಗಿಯಲ್ಲೆ ಅವರಿಗೆಹಿತ. ಸರಳತೆಯೇ ಅವರ ಜೀವಾಳ.

ಶ್ರೀನಿವಾಸಯ್ಯ ಮೊದಲು ಮಾತುಗಾರರಾಗಿರಲಿಲ್ಲ. ಭಾಷಣ ಎಂದರೆ ಅವರಿಗೆ ನಡುಕ. ಸಭೆಗೆ ವ್ಯವಸ್ಥೆ ಮಾಡುವುದು ಅಷ್ಟೆ ಅವರ ಕೆಲಸ. ಕೊನೆಗೆ ಸ್ವಾಗತ, ವಂದನಾರ್ಪಣೆಗೂ ಬರುತ್ತಿರಲಿಲ್ಲ. ಖಾಸಗಿಯಾಗಿ ಗಂಟೆಗಟ್ಟಲೆ ಸ್ವಾರಸ್ಯವಾಗಿ ಸಂಭಾಷಿಸುತ್ತಿದ್ದರು, ಆದರೆ ಸಭೆ ಸಮಾರಂಭದಲ್ಲಿ ನಿಂತು ನಾಲ್ಕು ಮಾತು ಆಡಿ ಎಂದರೆ ಓಡುತ್ತಿದ್ದರು. ಪ್ರಾಯಶಃ ಜರ್ಮನಿಗೆ ಹೋದಮೇಲೆ ಈ ಛಳಿ ಸ್ವಲ್ಪ ಬಿಟ್ಟಿತೇನೊ. ಅಲ್ಲಿ ಅವರಿಗೆ ಇದ್ದ ಹಲವಾರು ಸಾಮಾಜಿಕ ಸೇವಾಸಕ್ತಿ ಅವರನ್ನು

ಹಲವು ಸಂಸ್ಥೆಗಳಿಗೆ, ಶಾಲೆಗಳಿಗೆ ಕರೆದೊಯ್ದಿತು. ಖಾದಿ ಉಡುಗೆ, ಸಸ್ಯಾಹಾರದ ಮಡಿವಂತ, ಹೆಂಡ-ಸಿಗರೇಟು ಏನೂ ಗರಂ ಇಲ್ಲದ ವಿಚಿತ್ರ ವ್ಯಕ್ತಿ. ಅಲ್ಲಿನ ಜನಕ್ಕೆ ವಿಶೇಷವಾಗಿ ಕಂಡಿರಬೇಕು. ಜೊತೆಗೆ ಅವರ ಗಾಂಧೀಭಕ್ತಿ ರಾಷ್ಟ್ರಭಕ್ತಿ, ಸಮಾಜ ಸೇವೆಯ ಅನುರಕ್ತಿ, ಪತ್ನೀವ್ರತ, ಇವೆಲ್ಲದರಿಂದ ಅಲ್ಲಿ ಅವರು ಎದ್ದು ಕಾಣುವ ವ್ಯಕ್ತಿ ಆದರು, ಅಂತೆಯೆ ಹಲವು ಕಡೆ, ಭಾಷಣ ಮಾಡಬೇಕಾಯಿತು, ಪ್ರಶ್ನೋತ್ತರ ಎದುರಿಸಬೇಕಾಯಿತು. ಶ್ರೀನಿವಾಸಯ್ಯನವರ ನಾಲಿಗೆ ಛಳಿಬಿಟ್ಟು ಆಡತೊಡಗಿತು. ಈಗಂತೂ ಅವರಿಗೆ ದಿನವೂ ಪುರುಸೊತ್ತಿಲ್ಲದ ಕಾರ್ಯಕ್ರಮಗಳು. ಪತ್ರಿರದ ನಮಗೆ ಕಾಣಿಸಿಗರು. ಮಾತೂ ಆಡುತ್ತಾರೆ ಸಭೆಗಳಲ್ಲಿ.

ಬರೆಹವೂ ಅಷ್ಟೆ. ಕಟ್ಟಿಕೊಂಡದ್ದೇನೂ ಅಲ್ಲ. ತಿಣಕಿದ್ದೇನೂ ಅಲ್ಲ. ಬರೆಹಗಾರ ಆಗಬೇಕು ಎಂದು ಅವರು ಕನಸಿನಲ್ಲೂ ಎಣಿಸಿರಲಿಲ್ಲ. ಜರ್ಮನಿಗೆ ಹೋದಾಗ ದಿನಚರಿ ಬರೆದಿಡುವುದು ದಿನದ ಮುಖ್ಯ ಕೆಲಸವಾಗಿತ್ತು. ತಾವು ಅಲ್ಲಿ ಕಂಡದ್ದನ್ನು ಕೇಳಿದ್ದನ್ನು ಅಂದುಕೊಂಡದ್ದನ್ನು ಯಥಾರ್ಥವಾಗಿ ಬರೆದಿದ್ದಾರು. ನೂರಾರು ಪುಟದ ಬರೆಹ. ಅನೇಕ ಸ್ವಾರಸ್ಯವಾದ ಸಂಗತಿಗಳು, ಟಿಪ್ಪಣಿಗಳು ಅಲ್ಲಿನ ಜನ ಜೀವನದ ಹಲವು ರೀತಿನೀತಿಗಳು. ಅದನ್ನೆಲ್ಲ ನಮ್ಮ ಜನಕ್ಕೂ ಹೇಳಬೇಕೆನಿಸಿತು. ದಿನಚರಿಯ ಆಧಾರದ ಮೇಲೆ ಬೆಂಗಳೂರಿನ "ತಾಯಿನಾಡು" ಪತ್ರಿಕೆಗೆ ಕೆಲವು ಲೇಖನ ಬರೆದರು. ಎಲ್ಲಾ ಬರಹವನ್ನೂ ಮೊದಲು ಶರ್ಮಾಜಿಗೆ ತೋರಿಸಿಯೆ ಕಳಿಸುವುದು. ಒಂದು ರೀತಿಯಲ್ಲಿ ಲೇಖಕ ಶ್ರೀನಿವಾಸಯ್ಯ ಶರ್ಮಾಜಿಯವರ "ಕರಕಮಲ ಸಂಜಾತ"ರು. ಲೇಖಕರೇ ಏಕೆ, ಶ್ರೀನಿವಾಸಯ್ಯನವರ ಇಡೀ ಬದುಕು, ಇಡೀ ವ್ಯಕ್ತಿತ್ವವೇ ಶರ್ಮಾಜಿಯವರಿಂದ ರೂಪುಗೊಂಡದ್ದು. ಆ ಸರಳತೆ ಆ ಪ್ರಾಮಾಣಿಕತೆ, ಆ ಸೇವಾಸಕ್ತಿ, ಆ ಜನ ಸಂಘಟನೆ, ಆ ಅನಾಸಕ್ತವಾದರೂ ದಕ್ಷ ವಾದ ಕರ್ಮಯೋಗ - ಇವೆಲ್ಲ ಶರ್ಮಾಜಿಯಿಂದಲೇ ಕಲಿತದ್ದು. ನಮ್ಮಲ್ಲಿ ಬಹು ಪಾಲು ಜನಕ್ಕೆ ಶರ್ಮಾಜಿಯದೇ ಛಾಪು. ಅವರ ನೆರಳಿನಲ್ಲಿ ನಮ್ಮ ಬದುಕು ಅರಳಿದೆ. ಅವರ ದೀಪವೇ ನಮ್ಮ ಬದುಕಿನ ಬಟ್ಟೆಯನ್ನು ಬೆಳಗಿದೆ, ಬೆಳಗುತ್ತಿದೆ.

ಅಂತೂ ಶ್ರೀನಿವಾಸಯ್ಯ ಲೇಖನಿ ಹಿಡಿದರು. ತಾನು ಸಾಹಿತಿ, ವಿದ್ವಾಂಸ, ಏನೋ ಮಹಾ ಸಾಹಿತ್ಯ ಸೃಷ್ಟಿ ಮಾಡುತ್ತೇನೆ ಎಂಬ ಯಾವುದೇ ಪೂರ್ವಗ್ರಹ ಇಲ್ಲ. ಏನೋ ಅನುಭವ ಆಯಿತು, ಅದನ್ನು ಇತರರೊಂದಿಗೆ ಹಂಚಿಕೊಳ್ಳಬೇಕೆನಿಸಿತು. ಬರೆದದ್ದಾಯಿತು. ಅದರ ಓರೆಕೋರೆ, ಕಾಗುಣಿತ, ವ್ಯಾಕರಣ ತಿದ್ದಲು ಶರ್ಮಾಜಿ. ಹೀಗಾಗಿ ಸಹಜವಾಗಿ ಮೂಡಿಬಂತು ಬರಹ. ವಿಷಯದ ಸ್ವಾರಸ್ಯದಿಂದ, ಶೈಲಿಯ ಸರಳತೆ, ಸಹಜತೆಗಳಿಂದ, ಪಾಶ್ಚಾತ್ಯ ಜೀವನವನ್ನು ಶುದ್ಧ ಭಾರತೀಯನಾಗಿ ತೆರೆದ ಕಣ್ಣುಗಳಿಂದ ನೋಡಿದ್ದ ನೋಟದಿಂದ, ಅಲ್ಲೂ ತನ್ನ ಭಾರತೀಯತೆಯನ್ನು ಬಿಡದ

ಉಳಿಸಿಕೊಂಡ ಹಿರಿಮೆಯಿಂದ, ಅವರ ಲೇಖನಗಳು ಜನಪ್ರಿಯ ಆದವು, ಸ್ಪಷ್ಟ ಆದವು. ಅದೇ ಮುಂದೆ "ನಾ ಕಂಡ ಜರ್ಮನಿ" ಪುಸ್ತಕಕ್ಕೆ ಬೀಜ ಆದವು. ಆ ಪುಸ್ತಕದ ಇಂದಿನ ಸ್ವರೂಪ ಬರಲು ಶರ್ಮಾಜಿ ಬಹುಪಾಲು ಕಾರಣ. ಅವರಿಗೆ ಕೈ ನೆರವು ನೀಡಿದ ಭಾಗ್ಯ ನನ್ನದೂ ಆಗಿತ್ತು. ಪುಸ್ತಕ ಶ್ರೀನಿವಾಸಯ್ಯನವರಿಗೆ ಅಪಾರ ಕೀರ್ತಿ ತಂದಿತು. ಬರೆ ಎಂದರೆ ಹಿಂಜರಿಯುತ್ತಿದ್ದವರು ಒಮ್ಮೆಲೇ ಬರಹಗಾರರಾದರು! ಪ್ರಕೃತಿ ಜೀವನದ ಮೇಲೆ, ತಮ್ಮ ಇಂಜಿನಿಯರಿಂಗ್ ಬಗ್ಗೆ, ಪ್ರವಾಸಗಳ ಬಗ್ಗೆ, ಗಾಂಧೀ ವಿಚಾರದಲ್ಲಿ ಸಹಕಾರದ ಬಗ್ಗೆ ಅನೇಕ ಲೇಖನ ಬರೆದರು. ವಿಶ್ವಕೋಶಗಳಿಗೆ ಲೇಖನ ಬರೆದರು. ಇಂದು ಅವರು ಸಾಕಷ್ಟು ಯಶಸ್ಸು ಪಡೆದ ಬರಹಗಾರರು. ಆದರೂ ತಾವು ಬರೆದುದನ್ನು ಒಮ್ಮೆ ಇನ್ನೊಬ್ಬರಿಗೆ ತೋರಿಸಿ ತಿದ್ದಿಸಿಕೊಳ್ಳುವ ವಿನಯ ಬಿಟ್ಟಿಲ್ಲ. ಸರಳತೆ, ಸಹಜತೆಯಂತೆಯೆ ವಿನಯ ಅವರ ಇನ್ನೊಂದು ಗುಣ.

ವಿದೇಶಗಳಿಗೆ ಎಷ್ಟೋ ಜನ ಹೋಗಿ ಬರುತ್ತಾರೆ. ಏನೇನೋ ಸಾಮಾನು ತರುತ್ತಾರೆ. ತಾವು ಇಟ್ಟುಕೊಳ್ಳುತ್ತಾರೆ. ಏನೋ ಕೆಲವರು ಬಂಧು ಮಿತ್ರರಿಗೆ ತೋರಿಸಿಯಾರು. ಕೆಲವರು ಮಾರಿ ಹಣ ಮಾಡಿಕೊಂಡಾರು. ಆದರೆ ಶ್ರೀನಿವಾಸಯ್ಯನವರದೇ ಬೇರೆ ದಾರಿ. ಜರ್ಮನಿಯ ಸಾಮಾನ್ಯ ಜೀವನವನ್ನು ನಮಗೆ ಪರಿಚಯಸುವುದು, ನಮ್ಮ ದೃಷ್ಟಿಯನ್ನು ಅಲ್ಲಿಗೆ ತಿಳಿಸುವುದು ಅವರ ಆಸೆ. ಅದಕ್ಕಾಗಿ ಭಾರತ-ಜರ್ಮನಿ ಸ್ನೇಹ ಸಂಘಗಳನ್ನು ಕಟ್ಟಿದ್ದರು. ಜರ್ಮನಿ ಶಾಲೆಗಳಲ್ಲಿ ಭಾರತದ ಬಗ್ಗೆ ಮಾತಾಡಿದರು. ಚಿತ್ರಗಳನ್ನು ತೋರಿಸಿದರು, ಮಕ್ಕಳ ಚಿತ್ರ ಇತ್ಯಾದಿಗಳ ಪ್ರದರ್ಶನ ಮಾಡಿದರು. ಇಲ್ಲೂ ಅಷ್ಟೆ. ಜರ್ಮನಿಯಿಂದ ಬರುವಾಗ ಮೂಟೆಗಟ್ಟಲೆ ಸಾಮಾನು ತಂದರು. ಏನು ಗೊತ್ತೇ ಚಿತ್ರಗಳು, ಪುಸ್ತಕಗಳು, ಆಟದ ಸಾಮಾನುಗಳು, ವ್ಯೂಮಾಸ್ಟರ್ ಫೋಟೋಗಳು, ಪತ್ರಿಕೆಗಳು ರಾಶಿರಾಶಿ! ನಮ್ಮ ವಾನರ ಪಡೆಗೆ ಖುಷಿಯೋ ಖುಷಿ! ದಿನಗಟ್ಟಲೆ ಕೂತು ಅವನ್ನೆಲ್ಲಾ ನೋಡಿದೆವು.ವಿಷಯಾನುಕ್ರಮವಾಗಿ ವಿಂಗಡಿಸಿದೆವು. ರಟ್ಟುಗಳನ್ನು ತಂದು ಅದಕ್ಕೆ ಹಿನ್ನೆಲೆಗಾಗಿ ಕಪ್ಪು ಬಣ್ಣ ಚಿಮುಕಿಸಿ, ಅವುಗಳ ಮೇಲೆ ಚಿತ್ರಗಳನ್ನು ಅಂಟಿಸಿದೆವು. ಕೆಳಗೆ ಅಂಕಿತ ಬರೆದೆವು. ಇಂಥ 24-25 ದೊಡ್ಡ ಪಟಗಳನ್ನು ತಯಾರು ಮಾಡಿದೆವು. ಆ ಒಂದೆರಡು ವರ್ಷ ನಮಗೆ ಅದೇ ಹುಯಿಲು. ಗಾಂಧೀ ಸಾಹಿತ್ಯ ಸಂಘದಲ್ಲಿ, ತೆಂಗಿನಮರದ ರಸ್ತೆ, ಶ್ರೀ ರಾಮಮಂದಿರದಲ್ಲಿ, ಶಾಲೆಗಳಲ್ಲಿ, ನಾಗಮಂಗಲದಲ್ಲಿ, ಎಲ್ಲೆಲ್ಲೋ ಆ ಚಿತ್ರಪಟಗಳನ್ನು ವ್ಯೂಮಾಸ್ಟರನ್ನು, ಆಟದ ಸಾಮಾನುಗಳನ್ನು ಹೊತ್ತು ಹೋಗಿ ಜೋಡಿಸಿ ಪ್ರದರ್ಶನ ಏರ್ಪಡಿಸಿದೆವು. ಶ್ರೀನಿವಾಸಯ್ಯನವರ ಮಾತು ಅಲ್ಲಲ್ಲಿ. ಕೊನೆಗೆ ನಮ್ಮ ನಾಟಕ ! ನಮ್ಮ ಜನಕ್ಕೆ, ಅದರಲ್ಲೂ ಮಕ್ಕಳಿಗೆ ಹೇಗೆ ಪಾಶ್ಚಾತ್ಯ ಜಗತ್ತಿನ ಜೀವನದ ದರ್ಶನ ಮಾಡಿಸಲು ಓಡಾಡಿದೆವು! ಪ್ರವಾಸಮಾಡಿ ಬಂದವರಲ್ಲಿ ಹೀಗೆಲ್ಲ ಸಾಹಸ ಮಾಡಿದವರು ಎಷ್ಟು ಜನ ?

ಶ್ರೀನಿವಾಸಯ್ಯ ಸಹಕಾರ ಬ್ಯಾಂಕು ಕಟ್ಟಿದರು, ಶ್ರೀರಾಮ ಮಂದಿರವನ್ನೂ ಬೆಳೆಸಿದರು. ತಮ್ಮ ಹಳ್ಳಿಯಲ್ಲೂ ಸಾಂಸ್ಕೃತಿಕ ಸಂಸ್ಥೆಯನ್ನು ಸ್ಥಾಪಿಸಿದರು. ಸಂಘಕ್ಕಂತೂ ಅವರು ಬಲವಾದ ಆಧಾರ. ಶಾಲೆಯನ್ನು ನಡೆಸಿದರು. ಕಾರ್ಖಾನೆಯಲ್ಲೂ ಕನ್ನಡ ಸಂಘಕ್ಕೆ ಕುಮ್ಮಕ್ಕು ಕೊಟ್ಟರು. ಪುಸ್ತಕ ಭಂಡಾರ ಬೆಳೆಸಿದರು. ಕಲ್ಯಾಣ ಮಂಟಪ, ವಿದ್ಯಾರ್ಥಿನಿಲಯ ಕಟ್ಟಲು ಹೆಣಗಿದರು. ಒಂದಲ್ಲ ಎರಡಲ್ಲ ಅವರ ವಹಿವಾಟು. ಎಲ್ಲದರಲ್ಲೂ ಏನೂ ಲಾಭ ದೃಷ್ಟಿ ಇಲ್ಲ. ಸೇವೆಯ ಕೆಲಸ ಅಷ್ಟೆ. ಹಾಗೆಂದು ಅಸಡ್ಡೆ, ಅನಾದರ ಬೇಕಾಬಿಟ್ಟಿಭಾವನೆ ಕಿಂಚಿತ್ತೂ ಇಲ್ಲ. ಅವರ ಪಟ್ಟು ಬಲು ಬಿಗಿ ! ಹಿಡಿದ ಕೆಲಸ ಮುಗಿಸುವವರೆಗೂ ಅವರಿಗೆ ಸಹನೆ ಇಲ್ಲ. ಜೊತೆಯವರನ್ನೂ ಹಿಂದೆ ಬೀಳಲು ಬಿಡರು. ಯಾರಿಗೆ ಬೇಸರ ಆದರೂ ಸರಿಯೆ. ಕೆಲಸ ಆಗಲೇ ಬೇಕು!

ಬಡತನದಲ್ಲೇ ಹುಟ್ಟಿಬೆಳೆದ ವ್ಯಕ್ತಿ ಶ್ರೀನಿವಾಸಯ್ಯ, ನಾಲ್ಕಾರು ಜನರ ನೆರಳಿನಿಂದ ಪ್ರೋತ್ಸಾಹದಿಂದ ರೂಪುಗೊಂಡ ವ್ಯಕ್ತಿತ್ವ. ಈಗೇನೋ ಉನ್ನತ ಸ್ಥಾನದಲ್ಲಿದ್ದಾರೆ. ಹಳೆಯ ಹೆಂಚಿನ ಜೋಪಡಿ ಬಿಟ್ಟು ಮುಂದಿನ ಮಹಡಿಗೆ ಬಂದಿದ್ದಾರೆ. ಅವರ ಸ್ಥಾನ ಮಾನ ಹೆಚ್ಚಿದೆ, ದಿಟ. ಆದರೆ ಶ್ರೀನಿವಾಸಯ್ಯನವರ ದೃಷ್ಟಿ ಬಡವರ ಕಡೆಗೆ. ಸೌಕರ್ಯಗಳಿಂದ ವಂಚಿತರಾದ ನಿರ್ಭಾಗ್ಯವಂತರತ್ತಲೇ. ಅದಕ್ಕೆ ಅವರು ಬಡವರು, ಅನಕ್ಷರಸ್ಥರುಗಳಿಗಾಗಿಯೆ ಶ್ರೀರಾಮ ಸಹಕಾರ ಬ್ಯಾಂಕನ್ನು ಕಟ್ಟಲು ಹೆಣಗಿದರು. ಅದೇ ರೀತಿ ಆಂಜನೇಯ ಬ್ಯಾಂಕನ್ನು ಬೆಳೆಸಿದರು. ತಮಗೆ ಸಾಹಿತ್ಯ ಅಕಾಡೆಮಿಯಿಂದ ಬಂದ ಬಹುಮಾನದ ಹಣವನ್ನು ಕಾರ್ಮಿಕರ ಕನ್ನಡ ಭಾಷಾ ಜ್ಞಾನಾಭಿವೃದ್ಧಿಗಾಗಿ ನೀಡಿದರು, ತಮ್ಮ ಹಳ್ಳಿಯ ಯುವಜನಕ್ಕೆ ಸಾಸ್ಕೃತಿಕ ಸಂಘ, ರಾಮಮಂದಿರ ಏರ್ಪಡಿಸಿದರು. “ನಾ ಕಂಡ ಜರ್ಮನಿ” ಪಠ್ಯಪುಸ್ತಕ ಆಗಿ ಹಣ ಬಂದಾಗ, ಅದನ್ನೆಲ್ಲ ಶರ್ಮಾಜಿ ಹೆಸರಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಚಿನ್ನದ ಪದಕ ಸ್ಥಾಪಿಸಲೂ, ಸಂಘದಲ್ಲಿ ತಮ್ಮ ತಾಯಿಯವರ ಹೆಸರಿನಲ್ಲಿ ಶರ್ಮಾಜಿಯವರ ‘ಬಾಲರಾಮಾಯಣ’ ಪ್ರಕಟಿಸಲೂ ದಾನಮಾಡಿಬಿಟ್ಟರು. ಸಮಾಜದಿಂದ ಪಡೆದದ್ದು ಸಮಾಜಕ್ಕೆ ಹೋಗಬೇಕು ಎನ್ನುವುದು ಅವರ ತತ್ವ. ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆಯುವ ಹಂಬಲ.

ಶ್ರೀನಿವಾಸಯ್ಯ ನಮ್ಮ ಬದುಕಿನ ಅಂಗವಾಗಿದ್ದಾರೆ. ಬೇರ್ಪಡಿಸಲಾರದ ಅಂಗ. ಅವರ ಬಗ್ಗೆ ಹೇಳುವುದು ಎಂದರೆ ನಮ್ಮ ಸಂಘದ ಬಗ್ಗೆಯೆ ಹೇಳಿಕೊಂಡಂತೆ, ನಮ್ಮ ಗೆಳೆಯರ ಬಳಗದ ಬಗ್ಗೆಯೇ ಹೇಳಿಕೊಂಡಂತೆ. ಪರಸ್ಪರ ಒಂದು ರೀತಿಯ ಸಿನಾ ಸಂಬಂಧ. ಹಾಗಿದ್ದರೂ ನಾವು ನಾವು ಪ್ರತ್ಯೇಕ. ಒಬ್ಬೊಬ್ಬರದು ಒಂದೊಂದು ತರ.

ಯಾರೂ ಇನ್ನೊಬ್ಬರ ಪಡಿಯಚ್ಚು ಅಲ್ಲ. ಮಂಟಪದ ಕಂಭಗಳಂತೆ ಬೇರೆ ಬೇರೆ. ಆದರೂ ಒಂದೇ ಭಾವನೆಯನ್ನು ಧರಿಸುವುವು. ಶ್ರೀನಿವಾಸಯ್ಯ ನಮ್ಮ ಮುಖ್ಯ ಕಂಭ. ನಮ್ಮ ಸರ್ಕಸ್ ಡೇರೆಯ ನಡುವಿನ ಕಂಭ. ನಮಗೆಲ್ಲ ಅಣ್ಣ.

ಶಿಸ್ತಿನ ನಡೆ, ಹಿಡಿದುದನ್ನು ಬಿಡದೆ ನಡೆಸುವ ಹಟ, ಕಾರ್ಯಕ್ಷಮತೆ, ನಾಲ್ಕು ಜನರನ್ನು ಕಟ್ಟಿಕೊಂಡು ಕೆಲಸ ಮಾಡುವ ರೀತಿ, ಇಲ್ಲಿರಲಿ, ಜರ್ಮನಿಯಲ್ಲಿರಲಿ, ಎಲ್ಲೆಲ್ಲೂ ತಮ್ಮತನವನ್ನು ತಮ್ಮ ತತ್ವ ನಿಷ್ಠೆಯನ್ನು ಕಾಪಾಡಿಕೊಳ್ಳುವ ದೃಢತೆ, ತಮ್ಮ ಆನಂದವನ್ನು ಇತರರಿಗೂ ನೀಡಲು ಕಾತರ-ಎಲ್ಲ ಅವರ ಬದುಕನ್ನು ತುಂಬಿವೆ. ಎಲ್ಲ ಶರ್ಮಾಜಿಯಿಂದ ಬಂದ ಬಳುವಳಿ, ಬೆಳಕು.

ನಮ್ಮ ಶ್ರೀನಿವಾಸಯ್ಯ ನೂರುಕಾಲ ಹೀಗೇ ನಮ್ಮನ್ನೆಲ್ಲ ನಡೆಸಬೇಕು. ಶ್ರೀರಾಮ ಹಾಗೆ ಕರುಣಿಸಬೇಕು. ಅವರಿಗೂ, ನಮಗೂ.



# ನೂರು ನಂಬರುಗಳನ್ನೂ ಪಡೆಯಲಿ

**ಜಯದೇವ**

ಸುಮಾರು ಮೂವತ್ತೈದು–ಮೂವತ್ತಾರು ವರ್ಷಗಳ ಹಿಂದಿನ ಮಾತು. 1944–45ರ ಸಮಯ. 'ಕ್ವಿಟ್ ಇಂಡಿಯ' ಆಂದೋಲನದ ದಿನಗಳು. ಸ್ವರ್ಗೀಯ ಸಿದ್ದವನಹಳ್ಳಿ ಕೃಷ್ಣಶರ್ಮರ ಮಾರ್ಗದರ್ಶನದಲ್ಲಿ ಬೆಂಗಳೂರಿನ ಮಲ್ಲೇಶ್ವರದಲ್ಲಿ ಗಾಂಧೀ ಸಾಹಿತ್ಯ ಸಂಘದ ಸ್ಥಾಪನೆಯಾಗಿತ್ತು. ವಿದ್ಯಾರ್ಥಿಗಳಿಗಾಗಿ ಗಾಂಧೀ ಸಾಹಿತ್ಯದ ಅಧ್ಯಯನ ವರ್ಗವೂ (ಸ್ಟಡಿ ಸರ್ಕಲ್) ನಡೆಯುತ್ತಿತ್ತು. ಆ ಗುಂಪಿನಲ್ಲಿ ಹೇಗೋ ನಾನೂ ಕಲೆತೆ. ಆಗಲೇ ಶ್ರೀನಿವಾಸಯ್ಯನವರ ಪರಿಚಯ ಆದದ್ದು. ಸ್ನೇಹ ಬೆಳೆಯಿತು. ಅವರ ಮನೆಯಲ್ಲಿಯೇ ಕೆಲವು ಕಾಲ ಇರುವ ಸಂದರ್ಭವೂ ಒದಗಿತು. ಆಗ ಅವರ ಮನೆಯ ಆವರಣದಲ್ಲಿಯೇ ಇದ್ದ ಗಾಂಧೀ ಸಾಹಿತ್ಯ ಸಂಘದ ಕಾರ್ಯವನ್ನು ಇಬ್ಬರೂ ಕೂಡಿ ಮಾಡತೊಡಗಿದೆವು. ಶ್ರೀನಿವಾಸಯ್ಯನವರ ಭಕ್ತ ಹೃದಯ, ಮಾತೃಶ್ರೀಯವರ ಪ್ರೇಮ ವಾತ್ಸಲ್ಯವನ್ನೂ ಸಾಕಷ್ಟು ಪಡೆದೆ.

ಗಾಂಧೀ ಸಾಹಿತ್ಯ ಸಂಘ, ಅಲ್ಲಿನ ಮಿತ್ರಮಂಡಲ, ಆದರಣೀಯ ಕೃಷ್ಣಶರ್ಮರ ಮಾರ್ಗದರ್ಶನ, ಶ್ರೀನಿವಾಸಯ್ಯನವರ ಸ್ನೇಹ ಎಲ್ಲ ಮರೆಯದಂತಹ ದಿನಗಳು.

ನನ್ನ ಸೇವಾಕ್ಷೇತ್ರ ಬದಲಾಯಿತು. ಕರ್ನಾಟಕದ ಹೊರಗೆ ಬಂದೆ. ಈ ಮೂವತ್ತೈದು ವರ್ಷಗಳಲ್ಲಿ ಶ್ರೀನಿವಾಸಯ್ಯನವರನ್ನು ಭೇಟಿ ಮಾಡಿರುವುದು ನಾಲ್ಕಾರು ಸಲ ಮಾತ್ರ ಎನ್ನಬಹುದೇನೊ. ಪತ್ರ ವ್ಯವಹಾರವೂ ಕ್ವಚಿತವೇ. ಆದರೂ ಹಾರ್ದಿಕ ಮೈತ್ರಿ ಮೊದಲಿನಷ್ಟೇ ಗಾಢವಿದೆ. ಇಂದಿಗೂ ಅವರು ಅತ್ಯಂತ ನಿಕಟ ವಾಗಿರುವರು.

ಶ್ರೀನಿವಾಸಯ್ಯನವರು ಪರಿಶ್ರಮಿಗಳು, ಅವರ ಜೀವನದಲ್ಲಿ ನಿಸ್ವಾರ್ಥ ಸೇವಾ ಭಾವನೆ, ಭಕ್ತಿಭಾವನೆ ಎರಡೂ ಒಂದುಗೂಡಿದೆ. ವಿವಿಧ ಪ್ರಕಾರದ ಸೇವೆ ಅವರಿಂದಾಗುತ್ತದೆ.

ಪೂಜ್ಯ ವಿನೋಬಾ ಅವರು ಗಣಿತಜ್ಞರು. ಅವರ ಜೀವನದಲ್ಲಿ ಮೊದಲನೆಯ ಸ್ಥಾನ ಪರಮಾತ್ಮನಿಗಾದರೆ ಎರಡನೆಯ ಸ್ಥಾನ ಗಣಿತಕ್ಕೆ. ಮನುಷ್ಯ ಜೀವನದ ನೂರು ವರ್ಷಗಳನ್ನು ತಮ್ಮ ವಿಶಿಷ್ಟ ರೀತಿಯಲ್ಲಿ ವಿಭಜನೆ ಮಾಡಿರುವರು.

ಮನುಷ್ಯನ ಮೊದಲ 50 ವರ್ಷದವರೆಗೆ ಪ್ರತಿ ವರ್ಷಕ್ಕೆ ½ ನಂಬರಿನಂತೆ 50 ವರ್ಷಗಳಿಗೆ 25 ನಂಬರು. ಮುಂದಿನ 25 ವರ್ಷಗಳಿಗೆ ಅಂದರೆ 75ರವರೆಗೆ ವರ್ಷಕ್ಕೆ 1 ನಂಬರಿನಂತೆ 25 ನಂಬರು. ಉಳಿದ 25 ವರ್ಷಗಳಿಗೆ ಅಂದರೆ 100 ವರ್ಷಗಳ ವರೆಗೆ ವರ್ಷಕ್ಕೆ 2 ನಂಬರಿನಂತೆ 50 ನಂಬರು. ಹೀಗೆ ನೂರು ವರ್ಷಕ್ಕೆ ನೂರು ನಂಬರು ಕೊಟ್ಟಿರುವರು.

| | | |
|---|---|---|
| $50 \times \frac{1}{2}$ | = | 25 |
| $25 \times 1$ | = | 25 |
| $25 \times 2$ | = | 50 |
| ವರ್ಷ 100 | | 100 ನಂಬರು |

ಈ ಗಣಿತದ ರೀತ್ಯಾ ಶ್ರೀನಿವಾಸಯ್ಯನವರಿಗೆ ಇಲ್ಲಿಯವರೆಗೆ ಕೇವಲ 30 ನಂಬರು ಮಾತ್ರ ಸಿಕ್ಕಿದೆ. ಮೂರನೆಯ ದರ್ಜೆಯಲ್ಲಿ ಉತ್ತೀರ್ಣರಾಗುವಷ್ಟು ನಂಬರು ಕೂಡ ಸಿಕ್ಕಿಲ್ಲ.

ಪೂರ್ಣ ಜೀವನದ ನೂರು ನಂಬರುಗಳನ್ನೂ ಪಡೆಯಲು $\frac{\text{ಸೇವೆ}}{\text{ಅಹಂಕಾರ}}$ = ಭಕ್ತಿ ಈ ಸೂತ್ರ (ವಿನೋಬಾ)ದಂತೆ ಭಕ್ತಿಯ ಅಂಕ ವೃದ್ಧಿಯಾಗುತ್ತ ಹೋಗಲಿ ಎಂದು ಭಗವಂತನಲ್ಲಿ ಪ್ರಾರ್ಥನೆ.



# ಲೇಖಕರಾಗಿ ಹೊ. ಶ್ರೀನಿವಾಸಯ್ಯ

ಬಿ. ಗೋ. ರಮೇಶ್

ವೃತ್ತಿಯಿಂದ ಶ್ರೀನಿವಾಸಯ್ಯನವರು ಇಂಜಿನಿಯರ್. ಬೆಂಗಳೂರಿನ ಭಾರತ್ ಅರ್ಥ್ ಮೂವರ್ಸ್ ಲಿಮಿಟೆಡ್ (ಬಿ.ಇ.ಎಂ.ಎಲ್.) ಕಾರ್ಖಾನೆಯಲ್ಲಿ ಹಿರಿಯ ಅಧಿಕಾರಿಗಳಾಗಿ ದುಡಿಯುತ್ತಿದ್ದಾರೆ. ಸಾವಿರಾರು ಜನರಿಗೆ ಪ್ರವಾಸ ಸೌಲಭ್ಯವನ್ನು ಒದಗಿಸಿ ಕೊಡುವ ರೈಲು ಬಂಡಿಗಳ ತಯಾರಿಕೆಯಲ್ಲಿ ನಿರತವಾಗಿರುವ ಸಂಸ್ಥೆಯಲ್ಲಿ ಶ್ರೀಯುತರ ದುಡಿಮೆ. ಅವರ ತಾಂತ್ರಿಕ ಜ್ಞಾನ ಅಲ್ಲಿಗೆ ಮೀಸಲು. ಪ್ರವಾಸಕ್ಕೆ ರೈಲು ಸಾಧನವಾದಂತೆ ಶ್ರೀನಿವಾಸಯ್ಯನವರಿಗೆ ಪ್ರವಾಸ ಸಾಹಿತ್ಯ ಅವರನ್ನು ಸಾಹಿತ್ಯ ಕೃಷಿಯತ್ತ ಹೊರಳಿಸಿ ಒಬ್ಬ ಲೇಖಕರಾಗಲು ನಾಂದಿ ಹಾಡಿತು. ಅವರೇ ಹೇಳಿಕೊಂಡಂತೆ ಅವರು ಸಾಹಿತಿಯಲ್ಲದ ಲೇಖಕ. ಸಾಹಿತ್ಯದ ಹವ್ಯಾಸ ಅವರಿಗೆ ಒಲವಿನ ವಿಷಯವೂ ಹೌದು. ಖ್ಯಾತ ಲೇಖಕ, ಗಾಂಧಿ ತತ್ತ್ವೋಪಾಸಕ ದಿವಂಗತ ಸಿದ್ಧವನಹಳ್ಳಿ ಕೃಷ್ಣಶರ್ಮರಂತಹ ಧುರೀಣರ ಮಾರ್ಗದರ್ಶನದಲ್ಲಿ ಬೆಳೆದು ಸರಳ ಸಾತ್ವಿಕ ಸೇವಾಮಯ ಜೀವನವನ್ನು ಆತುಕೊಂಡ ಶ್ರೀನಿವಾಸಯ್ಯನವರ ಕೃತಿಗಳಲ್ಲಿ ನಾವು ಕಾಣುವುದು ಇದನ್ನೇ. ಸರಳತೆ, ಆಡಂಬರ ರಹಿತ ಭಾಷೆ, ಆತ್ಮೀಯ ಶೈಲಿ ಇವುಗಳನ್ನೊಳಗೊಂಡ ಅವರ ರಚನೆಗಳನ್ನು ಪರಿಚಯಿಸುವುದು ಇಲ್ಲಿನ ಉದ್ದೇಶ.

ಶ್ರೀಯುತರು ಎರಡು ಪ್ರವಾಸ ಸಾಹಿತ್ಯ ಕೃತಿಗಳನ್ನು, ಪ್ರಕೃತಿ ಜೀವನ (Naturai Living)ಕ್ಕೆ ಸಂಬಂಧಿಸಿದಂತೆ ಎರಡು ಕಿರು ಹೊತ್ತಗೆಗಳನ್ನು ಹಾಗೂ ಕೆಲವು ಲೇಖನಗಳನ್ನು, ಎರಡು ಸಂಕ್ಷಿಪ್ತ ಜೀವನಚರಿತ್ರೆಗಳನ್ನು ಹಾಗೂ ಮಕ್ಕಳಿಗೆಂದು ಎರಡು ಕಿರು ಪ್ರವಾಸ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಇದೇ ಅಲ್ಲದೆ ಅವರು ಬೆಂಗಳೂರು ಆಕಾಶವಾಣಿಗೆಂದು ಕಾರ್ಮಿಕ, ಕೈಗಾರಿಕೆ, ಗಾಂಧೀ ಚಿಂತನ ಈ ವಿಷಯಗಳ ಬಗೆಗೆ ಮಾತನಾಡಿದ ವಸ್ತುವನ್ನು ಲೇಖನಗಳ ರೂಪದಲ್ಲಿ ಕೊಟ್ಟಿದ್ದಾರೆ. ಅವರು ಓದಿದ್ದು ಇಂಜಿನಿಯರಿಂಗ್ ಹೀಗಾಗಿ ಕೆಲವು ತಾಂತ್ರಿಕ ಲೇಖನಗಳನ್ನು ಅವರು ಕನ್ನಡ ವಿಶ್ವಕೋಶದ ಸಂಪುಟಗಳಿಗಾಗಿ ಬರೆದದ್ದುಂಟು. ಇವಿಷ್ಟೂ ಶ್ರೀಯುತರ ಇದುವರೆಗಿನ ಬರವಣಿಗೆಗಳೆನ್ನಬಹುದು.

## ಅ] ಗ್ರಂಥಗಳು

**ನಾ ಕಂಡ ಜರ್ಮನಿ** ಒಂದು ವಿಶಿಷ್ಟ ಪ್ರವಾಸ ಸಾಹಿತ್ಯ. ಈ ಕೃತಿ ಅವರಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ತಂದು ಕೊಟ್ಟಿದೆಯಲ್ಲದೆ ವಿಶ್ವ ವಿದ್ಯಾನಿಲಯ ಪೂರ್ವ (ಪಿ.ಯು.ಸಿ.) ಪರೀಕ್ಷೆಗೆ ಪಠ್ಯ ಪುಸ್ತಕವಾಗಿ ಗೊತ್ತು ಮಾಡಿದ್ದರಿಂದ ನೂರಾರು ವಿದ್ಯಾರ್ಥಿಗಳು ಈ ಕೃತಿಯ ಪರಿಚಯವನ್ನು ಮಾಡಿಕೊಂಡಿದ್ದಾರೆ. ಕೃತಿಯ ವೈಶಿಷ್ಟ್ಯ ಶ್ರೀನಿವಾಸಯ್ಯನವರ ಓದುಗರ ಮನಮುಟ್ಟುವ ಆತ್ಮೀಯ ಕಥನ ಶೈಲಿ. ಇಡೀ ಕೃತಿಯಲ್ಲಿ ಎಲ್ಲಿಯೂ ಉಪದೇಶವಿಲ್ಲ. ವಸ್ತು ವಿವರಣೆಯಲ್ಲಿ ಉತ್ಪ್ರೇಕ್ಷೆ ಇಲ್ಲ. ತಾವು ಕಂಡ ಜರ್ಮನಿಯನ್ನು ಇತರರಿಗೂ ಕಾಣಿಸುತ್ತಾರೆ. ಈ ಗ್ರಂಥ ಎರಡು ಮುದ್ರಣಗಳನ್ನು ಕಂಡಿದೆ. ಪ್ರವಾಸ ಸಾಹಿತ್ಯ ಕೃತಿಗಳು ಹೀಗೆ ಎರಡು ಮುದ್ರಣಗಳನ್ನು ಕಾಣುವುದು ಅಪರೂಪ. ಸಾಮಾನ್ಯವಾಗಿ ಪ್ರವಾಸ ಸಾಹಿತ್ಯವೆಂದರೆ ಒಂದು ಊರಿನ ವರ್ಣನೆ, ಅಲ್ಲಿನ ವಿಶೇಷಗಳು, ಕಟ್ಟಡಗಳು, ದೇವಸ್ಥಾನಗಳು ಹೀಗೆ ಒಂದು ಪಟ್ಟಿ ಮಾಡಿಕೊಡುವ ಸಾಹಿತ್ಯ ಎಂಬ ಒಂದು ಭಾವನೆ ಇದೆ. ಆದರೆ ಸಾಹಿತ್ಯ ಎಂದರೆ ವರದಿಯಲ್ಲ. ಅದು ಅನುಭವಗಳ ಕ್ರೋಢೀಕರಣ. ಅದರಲ್ಲೂ ಒಂದು ದೇಶದವರು ಮತ್ತೊಂದು ದೇಶವನ್ನು ನೋಡಿ ಬಂದು ಆ ದೇಶದ ಬಗೆಗೆ ಬರೆಯುವ ಸಾಹಿತ್ಯ ಎಂಥದಾಗಿರ ಬೇಕು? ನಾ ಕಂಡ ಜರ್ಮನಿ ಅಂಥದೊಂದು ಮಾದರಿ ಗ್ರಂಥ. ಅದು ಮತ್ತೆ ಪ್ರಕಟಗೊಂಡದ್ದು ಅಲ್ಲಿನ ಗುಣದಿಂದಾಗಿ. ಮೊದಲ ಮುದ್ರಣದ ಮುನ್ನುಡಿಕಾರ ಶ್ರೀ ಬಿ. ಪುಟ್ಟಸ್ವಾಮಯ್ಯನವರು ಇದೊಂದು ಔಚಿತ್ಯ ಪೂರ್ಣ ಕೃತಿ ಎಂದರೆ ಎರಡನೆಯ ಮುದ್ರಣದ ಮುನ್ನುಡಿಯಲ್ಲಿ ಶ್ರೀ ದೇ. ಜವರೇಗೌಡರು "ಈ ಕೃತಿಯನ್ನು ಓದುವಾಗ ಜರ್ಮನಿಯ ದೃಶ್ಯಗಳನ್ನೂ ಹಾಗೂ ಜನರನ್ನು ರಜತ ಪರದೆಯ ಮೇಲೆ ಕಂಡಂತೆ ಭಾಸವಾಗುತ್ತದೆ, ಅನುಭವವಾಗುತ್ತದೆ" ಎಂದು ಅಭಿಪ್ರಾಯ ಪಟ್ಟಿದ್ದಾರೆ

'ನಾ ಕಂಡ ಜರ್ಮನಿ' ಗ್ರಂಥದ ಆರಂಭದ ಸೊಗಸೇ ಇಡೀ ಗ್ರಂಥವನ್ನು ಓದಿಸಿಕೊಂಡು ಹೋಗುತ್ತದೆ. ಇಟಲಿಯ ಬೆಟ್ಟಗುಡ್ಡಗಳಲ್ಲಿ ಇರುವ ಊರಾದ ಜಿನೋವಾವರೆಗೆ ಅವರು ಹಡಗಿನಲ್ಲಿ ಹೋಗುತ್ತಾರೆ. ಹಡಗು ಬಿಟ್ಟದ್ದು ಭಾರತದ ಬೊಂಬಾಯಿನಿಂದ. ಸುಮಾರು 12 ಪುಟಗಳಲ್ಲಿ ಹಡಗಿನ ವರ್ಣನೆ, ಹಡಗಿನಲ್ಲಿ ಜರುಗುವ ಕಾರ್ಯ, ವಿವಿಧ ಪ್ರವಾಸಿಗಳ ವರ್ತನೆ ಇವೆಲ್ಲವನ್ನು ತಮ್ಮದೇ ಆದ ಪುಟ್ಟ ಪುಟ್ಟ ವಾಕ್ಯಗಳಲ್ಲಿ ತಿಳಿಸುತ್ತಾರೆ. ಹಡಗು ಅಲ್ಲಲ್ಲಿ ತಂಗಿದಾಗ ಕಂಡ ಸ್ಥಳಗಳ ಲಘು ಪರಿಚಯವೂ ಅಲ್ಲಿ ಬರುತ್ತದೆ. ಹಡಗಿನಲ್ಲಿದ್ದಷ್ಟು ಕಾಲವೂ ಮುಂದೆ ಅವರು ಜರ್ಮನಿಯಲ್ಲಿದ್ದಂತೆ ಅಚ್ಚ ಭಾರತೀಯರಾಗಿ ತಮ್ಮತನವನ್ನು ಉಳಿಸಿ

ಕೊಳ್ಳುತ್ತಾರೆ. ನಂತರ ರೈಲಿನಲ್ಲಿ ಜರ್ಮನಿಗೆ ಪ್ರಯಾಣ. ಜರ್ಮನಿಗೆ ಅವರು ಹೋದದ್ದು ಅಲ್ಲಿನ ಫಾಮಸ್ ಲಿಂಕೇ ಅಫ್ ಮರ್ ಬುಷ್ ಎಂಬ ಹೆಸರಿನ ರೈಲು ಗಾಡಿಗಳನ್ನು ತಯಾರಿಸುವ ಕಾರ್ಖಾನೆಯಲ್ಲಿ ಕೆಲಸ ಮಾಡಲು, ಜರ್ಮನರನ್ನು, ಸುಲಲಿತವಾಗಿ ಜರ್ಮನ್ ಭಾಷೆಯನ್ನು ಮಾತನಾಡಲಾಗದ ಪರಿಸ್ಥಿತಿ. ಮೊದಲ ದಿನಗಳಲ್ಲಿ ಸಾಕಷ್ಟು ತೊಂದರೆ ಪಡಬೇಕಾಗುತ್ತದೆ. ಆದರೆ ಅಲ್ಲಿ ಅವರು ಕಂಡದ್ದು ಜರ್ಮನರ ಔದಾರ್ಯವನ್ನು, ಹೊರಗಿನವರಲ್ಲಿ ಅವರು ತೋರಿಸುವ ಸ್ನೇಹ ಪರತೆಯನ್ನು.

ಜರ್ಮನರದು ಅಪಾರ ದೇಶ ಪ್ರೇಮ. ಕರ್ತವ್ಯ ನಿಷ್ಠೆ ಅವರು ಮೈಗೂಡಿಸಿ ಕೊಂಡದ್ದು. ಎರಡನೆಯ ವಿಶ್ವ ಸಂಗ್ರಾಮದಲ್ಲಿ ಸರ್ವಸ್ವವನ್ನೂ ಕಳೆದುಕೊಂಡ ಜರ್ಮನರು ಕೇವಲ ಏಳೆಂಟು ವರ್ಷಗಳಲ್ಲಿ ಪುನರುತ್ಥಾನ ಸಾಧಿಸಿದ್ದು ಒಂದು ಅದ್ಭುತ ಕಥೆ. ಜರ್ಮನರ ಭಾಷಾ ಪ್ರೇಮ ಅದ್ವಿತೀಯ. ತಾಂತ್ರಿಕ ಜ್ಞಾನವೂ ಅಷ್ಟೆ. ಎಲ್ಲದರಲ್ಲೂ ಅಸಾಧಾರಣ ಕರ್ತೃತ್ವ ಶಕ್ತಿಯನ್ನು ಪಡೆದ ಜರ್ಮನರ ಕುರಿತು ವಿಷಯಗಳನ್ನು ತಿಳಿಯುವುದು ಕುತೂಹಲಕರ. ಆ ಕುತೂಹಲವನ್ನು ಲೇಖಕರು ತಮ್ಮ ಪಶ್ಚಿಮ ಜರ್ಮನಿಯ ಪ್ರವಾಸ ಕುರಿತ ಈ ಕೃತಿಯಲ್ಲಿ ಅರಳಿಸುತ್ತಾರೆ.

ಜರ್ಮನಿಯಲ್ಲಿ ಅವರು ಕೆಲಸ ಮಾಡಿದ ಕಾರ್ಖಾನೆ ಮತ್ತು ಅಲ್ಲಿನ ಕೆಲಸ ಗಾರರ ಬಗ್ಗೆ ತಿಳಿಸುವುದರ ಮೂಲಕ ಇಡೀ ಜರ್ಮನ್ ಜನಾಂಗದ ಒಂದು ಮುಖವನ್ನು ಪರಿಚಯಿಸುತ್ತಾರೆ. ಜರ್ಮನರಲ್ಲಿ ಅಧಿಕಾರಿಗೂ ಆಳಿಗೂ ವ್ಯತ್ಯಾಸ ವಿಲ್ಲ. ಇಬ್ಬರು ಒಬ್ಬರನ್ನೊಬ್ಬರು ವಿಶ್ವಾಸವಾಗಿ ಕಾಣುತ್ತಾರೆ. ಅಧಿಕಾರಿಗಳು ಆಳುಗಳನ್ನು ತಮ್ಮ ಕೆಲಸಕ್ಕೆ ಕರೆಯುವುದಿಲ್ಲ. ಕೆಲಸಗಾರರಲ್ಲಿ ಶಿಸ್ತು ಕಾಣ ಬರುದು. ಕಾರ್ಖಾನೆಯನ್ನು ಮುಂದೆ ತರುವ ಕಾರ್ಯದಲ್ಲಿ ಎಲ್ಲರೂ ಅದು ತಮ್ಮ ಸ್ವಂತ ಕೆಲಸವೆಂತೆ ಕಾಣುತ್ತಾರೆ. ಲೇಖಕರು ಜರ್ಮನಿಯಲ್ಲಿರುವಾಗ ಒಂದು ಮನೆಯಲ್ಲಿ ಉಳಿಯುತ್ತಾರೆ. ಆ ಮನೆ ಅವರಿಗೆ ನೆಮ್ಮದಿ ತರುತ್ತದೆ. ಆ ಮನೆಯ ಜನ ಅವರ ಬಂಧುಗಳಷ್ಟು ಸಮೀಪವಾಗುತ್ತಾರೆ. ಇವರ ಖಾದಿ ವಸ್ತ್ರ ಅವರಿಗೆ ಕುತೂಹಲವಾದ ವಿಷಯವಾಗುತ್ತದೆ. ಖಾದಿಯ ವಿವರವನ್ನು ಕೊಟ್ಟ ಮೇಲೆ ಅವರೆಲ್ಲ ಸಂತೋಷ ಪಡುತ್ತಾರೆ. ಕೊನೆಗೆ ಇವರ ಹುಟ್ಟು ಹಬ್ಬವನ್ನು ಅವರು ಆಚರಿಸುತ್ತಾರೆ. ಈ ವಿಷಯ ಇಲ್ಲಿ ಗಮನಾರ್ಹ. ಜರ್ಮನರ ಮಾನವೀಯ ಗುಣಗಳನ್ನು ಪ್ರತಿ ಹಂತದಲ್ಲೂ ಲೇಖಕರು ತಮ್ಮ ಸೂಕ್ಷ್ಮ ಮನಸ್ಸಿನಿಂದ ಅವಲೋಕಿಸುತ್ತಾರೆ. ಜರ್ಮನರು ಅಷ್ಟು ವಿಶ್ವಾಸಪರರು. ಜರ್ಮನರ ಸಾಮಾಜಿಕ ಆಚಾರಗಳನ್ನು ತಿಳಿಸುತ್ತ ಲೇಖಕರು ಅಲ್ಲಿ ನಗರ ನೈರ್ಮಲ್ಯವನ್ನು ಕಾಪಾಡಲು ಮುನಿಸಿಪಾಲಿಟಿಯವರು ವಹಿಸುವಷ್ಟು ಮುತುವರ್ಜಿಯನ್ನು ನಾ ಗ ರಿ ಕ ರೂ

ನಟಿಸುವುದನ್ನು ಕಂಡು ಬೆರಗಾಗುತ್ತಾರೆ. ಪ್ರಕೃತಿ ಸ್ವಚ್ಛತ್ವಕ್ಕೆ ದಾರಿ ಮಾಡಿ ಕೊಡುತ್ತದೆ ಎಂದು ನಾವು ಹೇಳುತ್ತೇವೆ. ಆದರೆ ಅದನ್ನು ಪಾಲಿಸುವುದು ಕರ್ತವ್ಯವಲ್ಲವೆ? ಜರ್ಮನರು ಈ ವಿಷಯದಲ್ಲಿ ತೋರಿಸುವ ಶ್ರದ್ಧೆ ಅಸಾಧಾರಣವಾದದ್ದು. ಒಂದು ರಸ್ತೆಯ ನೈರ್ಮಲ್ಯವನ್ನು ಕಾಪಾಡುವುದರ ಬಗ್ಗೆ ಅವರು ತೋರುವ ಕಾಳಜಿ ಕುರಿತು ಲೇಖಕರು ಸ್ವಾರಸ್ಯವಾಗಿ ಒಂದು ಕಡೆ ಹೇಳುವ ರೀತಿ ಇದು. "ಜರ್ಮನರು ತಪ್ಪಿಯೂ ಬಾಳೆಹಣ್ಣು ಸಿಪ್ಪೆ, ಕಡಲೆಕಾಯಿ ಸಿಪ್ಪೆ ಮುಂತಾದ ಯಾವುದೇ ಕಸದ ಪದಾರ್ಥವನ್ನು ಕಸದ ಬುಟ್ಟಿಯಲ್ಲಿ ಹಾಕುವರು. ತಪ್ಪಿದರೆ ತಮ್ಮ ಜೇಬಿನಲ್ಲಿ ಹಾಕಿಕೊಂಡು ಮುಂದೆ ಹೋಗುತ್ತಾರೆ. ಕಸದ ಬುಟ್ಟಿಯನ್ನು ಕಂಡಾಗ ಜೇಬು ಖಾಲಿ ಮಾಡುತ್ತಾರೆ". ಇನ್ನೊಂದು ಸಲ ಲೇಖಕರು ತಾವು ಇಳಿದು ಕೊಂಡಿದ್ದ ಮನೆಯ ಕೊಠಡಿಗೆ ಬೀಗ ಹಾಕಿ ಹೊರಗೆ ಹೋದುದರ ಬಗ್ಗೆ ಮನೆಯಾಕೆ ಆಕ್ಷೇಪಿಸಿದಳಂತೆ. ಕಾರಣ ಕೇಳಿದ್ದಕ್ಕೆ ಕೊಠಡಿ ಸ್ವಚ್ಛ ಮಾಡುವುದಿರುತ್ತದೆ ಎಂದು ಹೇಳಿದಳಂತೆ. ಸ್ತ್ರೀಯರ ಪುರುಷರ ನಡುವಿನ ಸ್ವೇಚ್ಛಾ ವರ್ತನೆಯನ್ನು ಲೇಖಕರು ಗಮನಿಸದೆ ಬಿಟ್ಟಿಲ್ಲ. ಈ ಬಗೆಯ ವರ್ತನೆ ಐರೋಪ್ಯ ದೇಶದಲ್ಲಿ ರೂಢಿಯಲ್ಲಿ ಬಂದು ಬಿಟ್ಟಿದೆ ಎಂಬ ತೀರ್ಮಾನಕ್ಕೆ ಬಂದುದನ್ನು ಹೇಳುತ್ತಾರೆ. ಜರ್ಮನಿಯ ಹಬ್ಬಗಳನ್ನು ಕುರಿತು ಐದಾರು ಪುಟಗಳ ವಿವರ ಇದೆ. ಅವರು ತಂಗಿದ್ದ ಮನೆಯ ಯಜಮಾನಿ ಶ್ರೀಮತಿ ಕಾರ್ಡಿಯವರ ಕುಟುಂಬ ವರ್ಗದವರೊಡನೆ ಲೇಖಕರು ಕ್ರಿಸ್ಮಸ್ ಹಬ್ಬದಲ್ಲಿ ಭಾಗಿಯಾಗುತ್ತಾರೆ. ಕ್ರೈಸ್ತರ ಬಹು ದೊಡ್ಡ ಹಬ್ಬ ಕ್ರಿಸ್ಮಸ್. ಅದನ್ನು ಜರ್ಮನರು ಆಚರಿಸುವ ಬಗೆ, ಜನರ ಮೋಜು ಈ ವಿವರಣೆಗಳಲ್ಲಿ ಸಾಗುವ ಲೇಖನದಲ್ಲಿ ಅವರು ಕ್ರಿಸ್ಮಸ್ ಹಬ್ಬದಲ್ಲಿ ಭಾಗಿಯಾದುದು ಗಮನಾರ್ಹ. ಉಳಿದ ಪುಟಗಳು ಜರ್ಮನಿಯ ಕೈಗಾರಿಕೆಗಳು, ಅಲ್ಲಿನ ಯಾಂತ್ರಿಕ ನಿಪುಣತೆ: ಜರ್ಮನಿಯ ಶಾಲೆಗಳು, ಭಾರತ ಜರ್ಮನಿ ಇವುಗಳ ಸಂಬಂಧ, ಜರ್ಮನಿಯ ಪಟ್ಟಣಗಳು ಮುಂತಾದುವಕ್ಕೆ ಮೀಸಲಾಗಿವೆ. ಈ ಬರವಣಿಗೆಯಲ್ಲೂ ಪರಿಪಕ್ವತೆಯನ್ನು ಕಾಣುತ್ತೇವೆ. ಯಾವುದೇ ವಿವರಣೆಯನ್ನು ನೀಡುವಾಗಲೂ ಲೇಖಕರು ಕ್ರಮ ತಪ್ಪುವುದಿಲ್ಲ. ಒಂದು ಚೊಕ್ಕ ಬರವಣಿಗೆಯಾದ ಈ ಹೊತ್ತಿಗೆಯ ಮುಖ್ಯ ಭಾಗ ಪಶ್ಚಿಮ ಜರ್ಮನಿಯಲ್ಲಿ ತಮಗಾದ ಅನುಭವಗಳಿಗೆ ಮೀಸಲಾದರೆ, ಆಮೇಲಿನ ಪುಟಗಳಲ್ಲಿ ಐರೋಪ್ಯ ದೇಶದ ಪ್ರವಾಸದ ವಿವರಗಳಿದ್ದು ಒಂದು ವೈವಿಧ್ಯತೆಯನ್ನು ಕಾಣಬಹುದಾಗಿದೆ. ಎರಡನೆಯ ಮುದ್ರಣದಲ್ಲಿ ಲೇಖಕರು ಎರಡನೆಯ ಬಾರಿ ಜರ್ಮನಿಗೆ ಹೋಗಿ ಬಂದುದರ ಬಗ್ಗೆ ಕಿರು ಪರಿಚಯ ಕೊಟ್ಟಿದ್ದಾರೆ. ಆ ಸಂದರ್ಭದಲ್ಲಿ ತಾವು ಹಿಂದಿನ ಪ್ರವಾಸದ ಕಾಲದಲ್ಲಿ ಪರಿಚಯ ಮಾಡಿ ಕೊಂಡಿದ್ದವರ ಹಾಗೂ ತಂಗಿದ್ದ ಮನೆ ಯಜಮಾನಿ ಇವರನ್ನು ನೆನೆಯುತ್ತಾರೆ. ತಾವು ಹಿಂದೆ ಇದ್ದ ಮನೆ ಯಜಮಾನಿ ಕಾರ್ಡಿಯವರನ್ನು ಭೇಟಿಮಾಡಿ ಬರುತ್ತಾರೆ. ಹೇಗೋ ಆಗಲೀ ಅವರು ಸ್ವದೇಶಕ್ಕೆ ವಾಪಸಾಗುವಾಗ ತಾವು ಒಂದು ವರ್ಷಕಾಲ ಜೊತೆಯಲ್ಲಿದ್ದ ಒಂದು ಕುಟುಂಬದವರನ್ನು ಬಿಟ್ಟು

ಬರಲು ತುಸು ಕಷ್ಟವೇ ಆಯಿತಂತೆ. ಮಾನವೀಯ ಪ್ರಭಾವ ಬಹುಮುಖ್ಯ ಎಂದು ಕಡೆಯಲ್ಲಿ ಹೇಳುತ್ತಾರೆ. ಆದರೆ ಎಷ್ಟು ದಿನ ಅಲ್ಲಿರಲಾದೀತು. ಊರಿಗೆ ಬರುತ್ತಾರೆ. ಹೀಗೆ ನಾ ಕಂಡ ಜರ್ಮನಿ ಗ್ರಂಥ ಒರಿ ಜರ್ಮನಿಯನ್ನಷ್ಟೇ ನಮಗೆ ಕೊಡುವುದಿಲ್ಲ. ಜರ್ಮನರನ್ನು ಕೊಟ್ಟಿದೆ ಎನ್ನಬಹುದು. ಇದೊಂದು ರೀತಿಯ ಫಾರಿನ್ ಎಕ್ಸೇಂಜ್. ಮಾನವೀಯ ಮೌಲ್ಯಗಳ ವಿನಿಮಯ. ಲೇಖಕರು ತಾವು ಸಾಹಿತಿಯಲ್ಲ ಎಂದಿದ್ದರೂ ಸಾಹಿತ್ಯದ ಎಲ್ಲ ಲಕ್ಷಣಗಳನ್ನು ಕೃತಿಯಲ್ಲಿ ಕಾಣುತ್ತೇವೆ. ಇಂಥ ಪ್ರವಾಸ ಸಾಹಿತ್ಯ ಕೃತಿಗಳು ವಿರಳ. ಓದಿಯೇ ಸವಿಯಬೇಕು.

## ಶ್ರೀಲಂಕಾ

ಲಂಕೆಯ ವರ್ಣನೆಯನ್ನು ವಾಲ್ಮೀಕಿ ರಾಮಾಯಣವನ್ನು ಓದಿ ತಿಳಿಯಬೇಕು. ಶ್ರೀರಾಮನ ಕಾಲದ ಲಂಕೆ, ರಾವಣಾಸುರನ ನಗರ. ಬಹುಶಃ ಆ ಲಂಕೆಯ ವೈಭವವನ್ನು ನಾವು ಪುಸ್ತಕಗಳಲ್ಲಿ ಓದಿ ತಿಳಿಯಬೇಕಷ್ಟೆ. ಆಧುನಿಕ ಸಮಾಜದಲ್ಲಿ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಹೋಗುವುದು ಕಷ್ಟದ ಮಾತೇನಲ್ಲ. ಹೋಗಿ ಬರಬಹುದು. ಆದರೆ ಆ ಭಾಗ್ಯ ಎಲ್ಲರಿಗೂ ಬರುವುದಿಲ್ಲ. ಶ್ರೀನಿವಾಸಯ್ಯನವರು ಕಾರ್ಖಾನೆಯ ಕೆಲಸದ ಸಲುವಾಗಿ ಎರಡು ಬಾರಿ ಲಂಕೆಗೆ ಅಂದರೆ ಶ್ರೀಲಂಕಾ ಇಲ್ಲವೇ ಸಿಲೋನಿಗೆ ಹೋಗಿ ಬರುವ ಅವಕಾಶ ಸಿಕ್ಕಿತು. ಹೋಗಿ ಬಂದ ಮೇಲೆ ತಮ್ಮ ಅನುಭವಗಳನ್ನು ದಾಖಲಿಸುವ ಪ್ರಯತ್ನವೇ ಈ ಪುಟ್ಟ ಪುಸ್ತಕದ ರಚನೆಗೆ ಕಾರಣ ವಾಯಿತು. ಈ ಕೃತಿ 'ನಾ ಕಂಡ ಜರ್ಮನಿ' ಯಷ್ಟು ವಿಸ್ತೃತವಾದ ಬರವಣಿಗೆ ಯಿಂದ ಕೂಡಿಲ್ಲದಿದ್ದರೂ ಶ್ರೀಲಂಕೆಯನ್ನು ಸ್ಥೂಲವಾಗಿ ಪರಿಚಯಿಸುವಲ್ಲಿ ಯಶಸ್ಸು ಕಂಡಿದೆ. ವಾಸ್ತವ ವಿಷಯಗಳನ್ನು ಮಾತ್ರ ಇಲ್ಲಿ ಹೇಳಿರುವುದು ಈ ಚಿಕ್ಕ ಪುಸ್ತಕದ ಹಿರಿಮೆ. ಜರ್ಮನಿಯನ್ನು ಕುರಿತ ಪುಸ್ತಕದಂತೆ ಇದೂ ಕೂಡ ಗೈಡ್ ಆಗಿ ಉಳಿ ಯದೆ ಲೇಖಕ ಅನುಭವಗಳನ್ನು ಹಂಚಿಕೊಳ್ಳುವಂತೆ ಓದುಗರನ್ನಾಕರ್ಷಿಸುತ್ತದೆ. ಶ್ರೀನಿವಾಸಯ್ಯನವರು ಕೈಗಾರಿಕೋದ್ಯಮಿಗಳಾದುದರಿಂದ ಸಿಲೋನಿನ ವ್ಯಾಪಾರ, ಕೈಗಾರಿಕೆಗಳನ್ನು ಕೆಲವು ವಿವರಗಳನ್ನು ಕೊಡುತ್ತಾರೆ. ಕೈಗಾರಿಕೆಗಳಲ್ಲಿ ಸಿಲೋನ್ ಹಿಂದುಳಿದ ಪ್ರದೇಶವೇ, ಕೈಗಾರಿಕೆಗಳು ದೊಡ್ಡ ಪ್ರಮಾಣದವಲ್ಲ. ಸರ್ಕಾರ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವ ಆಸೆ ಹೊತ್ತಿದೆ. ಬೆಳ್ಳಿ, ಚಿನ್ನ, ರತ್ನಗಳ ವ್ಯಾಪಾರದಲ್ಲಿ ಸಿಂಹಳೀಯರು ಮುಂದು. ಬಳಕೆ ವಸ್ತುಗಳನ್ನು ಹೆಚ್ಚಾಗಿ ಆಮದು ಮಾಡಿಕೊಳ್ಳುವುದು ಇಲ್ಲಿನ ಪ್ರವೃತ್ತಿ. ಲಂಕೆ ಭಾರತಕ್ಕಿರುವ ದಕ್ಷಿಣಕ್ಕಿರುವ ದೇಶ ಸಿಲೋನ್ ಎಂದರೆ ಬಹುಬೇಗ ತಿಳಿಯುವ ಈ ದೇಶ ಪುರಾಣದಿಂದಲೂ ಪ್ರಸಿದ್ಧ, ಕೊಲಂಬೊ ಇಲ್ಲಿನ ಮುಖ್ಯಪಟ್ಟಣ. ಸಿಂಹಳಿ ಇಲ್ಲಿನ ಮುಖ್ಯ ಭಾಷೆ. ತಮಿಳು ಭಾರತೀಯರು ತುಂಬಿದ್ದಾರೆ. ಹಳ್ಳಿಗಳಲ್ಲಿಯೇ ಹೆಚ್ಚು ಜನ ವಾಸಿಸುತ್ತಾರೆ. ಇಲ್ಲಿನ

ಹಬ್ಬಗಳು ಒಂದು ವಿಶೇಷ. ಮತಭೇದಗಳನ್ನು ಕಾಣಲಾಗದ ಸಿಲೋನಿನಲ್ಲಿ ಜನ ಚಟುವಟಿಕೆಯುಳ್ಳವರು. ಶ್ರೀನಿವಾಸಯ್ಯನವರು ಈ ಎಲ್ಲ ವಿವರಗಳನ್ನು ತಮ್ಮದೇ ಆದ ತಿಳಿಯಾದ ಶೈಲಿಯಲ್ಲಿ ಮನಮುಟ್ಟುವಂತೆ ಹೇಳಿದ್ದಾರೆ. ಸಿಂಹಳ ದೇಶದ ಜನಸಂಖ್ಯೆ, ಮುಖ್ಯ ಬೆಳೆ, ನಿಸರ್ಗಸಂಗತ್ತು, ರಾಜ್ಯದ ಪೂರ್ವೇತಿಹಾಸ ಇವೆಲ್ಲವನ್ನು ಸಂಕ್ಷಿಪ್ತವಾಗಿ ತಿಳಿಸುವುದರ ಜೊತೆಗೆ ತಮಗೆ ಅಲ್ಲಿ ಆದ ವಿಚಿತ್ರ ಅನುಭವಗಳನ್ನು ಪ್ರಸಂಗಗಳ ರೂಪದಲ್ಲಿ ಕೊಟ್ಟಿದ್ದಾರೆ.

## ಪ್ರಕೃತಿ ಜೀವನ ಏನು ? ಹೇಗೆ ?

ಶ್ರೀನಿವಾಸಯ್ಯನವರು ಗಾಂಧೀ ತತ್ವಪ್ರತಿಪಾದಕರು. ತಮ್ಮ ವೈಯಕ್ತಿಕ ಜೀವನದಲ್ಲಿ ಸಾಮಾಜಿಕ ಜೀವನದಲ್ಲೂ ಅದನ್ನು ಅನುಷ್ಠಾನಕ್ಕೆ ತಂದವರು. ಸಸ್ಯಾಹಾರಿಗಳು. ಹೀಗಾಗಿ ಗಾಂಧೀಜೀಯವರ ಒಲವಿನ ಪ್ರಕೃತಿ ಜೀವನ ಹಾಗೂ ಪ್ರಕೃತಿ ಚಿಕಿತ್ಸೆ (Nature cure) ಅವರ ಒಲವಿನ ವಿಷಯಗಳೂ ಆದವು. ಗಾಂಧೀ ಸಾಹಿತ್ಯ ಸಂಘದ ಹಿರಿಯ ಮಿತ್ರ, ಶ್ರೀ ನೀಲತ್ತಹಳ್ಳಿ ಕಸ್ತೂರಿಯವರು ಅಭಿಪ್ರಾಯಪಟ್ಟಂತೆ ಶ್ರಿನಿವಾಸಯ್ಯ ತುಂಬ ಛಲವಾದಿ. ಪ್ರಕೃತಿ ಜೀವನಮಾರ್ಗ ಸರಿ ಎಂದು ಅವರಿಗೆ ಅನಿಸಿತು. ಮೊದಲು ಅದನ್ನು ಅನುಸರಣೆಮಾಡಿದರು. ಅನಂತರ ಅದಕ್ಕೆಂದೇ ಕೇಂದ್ರ ಕಟ್ಟಿದರು. ಬರಹ ಕಲೆಯನ್ನು ಮೈಗೂಡಿಸಿಕೊಂಡುದರ ಫಲವಾಗಿ ಪ್ರಕೃತಿ ಚಿಕಿತ್ಸೆ ಕುರಿತ ಗ್ರಂಥಗಳ ಪ್ರಕಟನೆಗೆ ತೊಡಗಿದರು. ಪ್ರಕೃತಿ ಜೀವನ ಎಂಬತ್ರೈಮಾಸಿಕ ಪತ್ರಿಕೆಯ ಆರಂಭಕ್ಕೆ ಕಾರಣರಾದರು. ಪ್ರಕೃತಿ ಜೀವನ ಏನು? ಹೇಗೆ? ಎಂಬ ಪುಟ್ಟ ಪುಸ್ತಕವನ್ನು ಬರೆದರು. ಪ್ರಕೃತಿಯ ನಿಯಮಗಳಿಗೆ ವಿರೋಧವಾಗಿ ನಡೆದುಕೊಂಡ ಯಾರೇ ಆಗಲಿ ಸುಖಜೀವಿಗಳಾಗಲು ಸಾಧ್ಯವಿಲ್ಲ. ನಿಸರ್ಗ ದೈವದತ್ತವರ. ಆರೊಗ್ಯ 'ಭಾಗ್ಯ' ವಾದರೆ ಅನಾರೋಗ್ಯ ಜೀವನದಲ್ಲಿ ದುರದೃಷ್ಟ ಪರಿಸ್ಥಿತಿ. ಆರೊಗ್ಯವನ್ನು ಮನುಷ್ಯ ತಾನೇ ಸಂಪಾದಿಸಿಕೊಳ್ಳಬಲ್ಲ. ಕಾಪಾಡಿಕೊಳ್ಳಲೂ ಬಲ್ಲ. ಪ್ರಕೃತಿಯೋ ಚಿಕಿತ್ಸಕ. ಅದರ ಲಾಭವನ್ನು ಪಡೆಯುವುದು ಹೇಗೆ? ಇಂತಹ ವಿಷಯಗಳನ್ನು ಅವರು ಸರಳವಾಗಿ ನಿರೂಪಿಸಿದ್ದಾರೆ. ಆಹಾರ, ಅದರ ಮಹತ್ವ, ಅದು ಜೀರ್ಣವಾಗುವ ರೀತಿ, ಸೂರ್ಯನ ಬೆಳಕು ಎಂದರೇನು ? ಉಪವಾಸದ ಅಗತ್ಯತೆ, ವಿಶ್ರಾಂತಿಗಾಗಿ ಏನು ಮಾಡಬೇಕು ಈ ಎಲ್ಲದರ ವಿವರಗಳು ಇಲ್ಲಿ ಅಡಕವಾಗಿವೆ. ಪ್ರಕೃತಿ ಜೀವನ ಮಾನವನಿಗೆ ಆರೋಗ್ಯ, ಸುಖ ಮತ್ತು ಸಂತೋಷಗಳನ್ನು ಒದಗಿಸುತ್ತದೆ. ಲೇಖಕರ ಈ ಪುಸ್ತಕ ಇಂಗ್ಲೀಷ್ ಭಾಷೆಯಲ್ಲೂ ಪ್ರಕಟವಾಗಿದೆ. ಪ್ರಕೃತಿ ಜೀವನದಲ್ಲಿ ಅವರು ಇಟ್ಟಿರುವ ನಿಷ್ಠೆಗೆ ಇದೊಂದು ಕುರುಹು.

## ಮಕ್ಕಳಿಗೆ ಪ್ರವಾಸಸಾಹಿತ್ಯ

ತಾವು ನೋಡಿಬಂದ ಜರ್ಮನಿ ಮತ್ತು ಶ್ರೀಲಂಕಾವನ್ನು ಕುರಿತು ದೊಡ್ಡವರಿ

ಗಾಗಿ ಬರೆದಹಾಗೆ ಮಕ್ಕಳಿಗೂತಿಳಿಸುವ ಸಲುವಾಗಿ ಎರಡು ಪುಟ್ಟ ಕೃತಿಗಳನ್ನು ರಚಿಸಿರುವುದು ಮಕ್ಕಳಸಾಹಿತ್ಯರಚನೆಯಲ್ಲಿ ಅವರಗಿರುವ ಒಲವನ್ನು ಸೂಚಿಸುತ್ತದೆ. ಜರ್ಮನಿ ಪ್ರವಾಸವನ್ನು ಅವರು 'ಶಶಿಕಂಡ ಜರ್ಮನಿ' ಎಂದೂ ಲಂಕೆಯ ಪ್ರವಾಸವನ್ನು 'ಸಿಂಹಳದಲ್ಲಿ ಶಶಿ' ಎಂಬ ಶೀರ್ಷಿಕೆಗಳಲ್ಲಿ ಹೊರತಂದಿದ್ದಾರೆ.

'ಶಶಿ ಕಂಡ ಜರ್ಮನಿ" ಯಲ್ಲಿ ಶಶಿ ತನ್ನಗೆಳತಿ ಗೀತಾಳಿಗೆ ಸುಮಾರು ಒಂಬತ್ತು ಪತ್ರಗಳಲ್ಲಿ ಜರ್ಮನಿಯ ಪ್ರವಾಸವನ್ನು ವಿವರಿಸುತ್ತಾಳೆ. ಲೇಖಕರು ಈ ವಿಧಾನವನ್ನು ಬಳಸಿರುವುದು ಔಚಿತ್ಯ ಪೂರ್ಣವಾಗಿಯೇ ಇದೆ. ನೀಡಲಾಗಿರುವ ವಿವರಣೆಗಳೂ ಅಷ್ಟೆ. ಮಕ್ಕಳಿಗೆ ಯಾವುದು ಹಿಡಿಸಬಲ್ಲುದೋ ಅಂತಹ ವಿವರಣೆಗಳನ್ನು ಕಾಣುತ್ತೇವೆ. 'ನಾ ಕಂಡ ಜರ್ಮನಿ' ಯಲ್ಲಿ ಹೇಳಿದಂತೆಯೇ ಹೇಳಲಾಗಿದ್ದರೂ ಅವು ಪತ್ರರೂಪದಲ್ಲಿದ್ದು ಮಕ್ಕಳಿಗೆ ಪ್ರಿಯವಾಗುತ್ತವೆ. ಜರ್ಮನರು ನೈರ್ಮಲ್ಯ ಪ್ರಿಯರು, ಸರಳರು, ನುಡಿದಂತೆ ನಡೆಯುವ ಜನ, ಸದಾ ಚಟುವಟಿಕೆಯುಳ್ಳವರು, ಮಾತೃ ಭಾಷೆಗೆ ವಿಶೇಷಗಮನ ನೀಡುವರು ಇಂತಹ ಆದರ್ಶಗಳನ್ನು ಒತ್ತಿ ಹೇಳಿರುವುದು ಮಕ್ಕಳಲ್ಲಿ ಆಭಾವನೆಗಳನ್ನು ಪ್ರೇರಿಸಲು ಸಹಾಯವಾಗಿದೆ. ಮಕ್ಕಳಿಗೆ ಪ್ರೇಮವಾದ ಆಟಗಳು, ಹಬ್ಬಗಳ ಆಚರಣೆ, ವಿದ್ಯಾಭ್ಯಾಸ, ಮಕ್ಕಳು ತಾಯಿ ತಂದೆಯರಲ್ಲಿ ನಡೆದು ಕೊಳ್ಳುವ ಬಗೆ ಇವು ಇನ್ನಿತರ ಮಕ್ಕಳ ಮನಸ್ಸನ್ನು ಮುಟ್ಟಬಲ್ಲ ವಿಷಯಗಳು.

'ಸಿಂಹಳದಲ್ಲಿ ಶಶಿ' ಪುಸ್ತಕ ತಂದೆ ಮಗಳ ಸಂಭಾಷಣೆಯಿಂದ ಆರಂಭವಾಗುತ್ತದೆ. ಮಗಳು ಶಶಿ ಸಿಲೋನಿಗೆ ಹೋಗುವ ತನ್ನ ಬಯಕೆಯನ್ನು ತಂದೆಗೆ ತಿಳಿಸುತ್ತಾಳೆ. ಪ್ರವಾಸಿ ಸಂಸ್ಥೆಯೊಂದರ ನೆರವಿನಿಂದ ತಂದೆ ಮಗಳು ಶಶಿಕಲಾಳಿಗೆ ಸಿಲೋನಿನ ಪ್ರವಾಸ ಭಾಗ್ಯವನ್ನು ಕರುಣಿಸುತ್ತಾರೆ. ಅವರೊಡನೆ ಇನ್ನಿತರ ಪ್ರಯಾಣಿಕರೂ ಇರುತ್ತಾರೆ. ತಂದೆ ಒಮ್ಮೆ ಸಿಲೋನನ್ನು ನೋಡಿ ಬಂದಿರುತ್ತಾರೆ. ಹೀಗಾಗಿ ಸಿಲೋನಿನ ಪರಿಚಯ ತಕ್ಕ ಮಟ್ಟಿಗೆ ಇರುತ್ತದೆ. ಪ್ರವಾಸ ಕಾಲದಲ್ಲಿ ಮಗಳು ತಂದೆಗೆ ಪ್ರಶ್ನೆ ಹಾಕುತ್ತಾಳೆ. ತಂದೆ ಅದಕ್ಕೆ ಸೂಕ್ತ ಉತ್ತರನೀಡುತ್ತಾ ಸಿಲೋನನ್ನು ಪರಿಚಯಿಸುತ್ತಾರೆ. ಆಗಾಗ್ಗೆ ಇತರ ಯಾತ್ರಿಕರು ತಮ್ಮ ಸಂದೇಹಗಳನ್ನು ನಿವಾರಿಕೊಳ್ಳಲು ತಂದೆ ಮಗಳ ಸಂಭಾಷಣೆ ನೆರವಾಗುತ್ತದೆ. ಸಿಲೋನಿನಲ್ಲಿ ಸಂಚರಿಸುವಾಗ ಶ್ರೀಲಂಕಾ 'ಆಕಾಶವಾಣಿ' ಯನ್ನು ಸಂದರ್ಶಿಸುತ್ತಾರೆ. ಅಲ್ಲಿ ಕನ್ನಡ ಕಾರ್ಯಕ್ರಮನಡೆಸುವಾಕೆಯನ್ನು ಭೇಟಿಮಾಡಿ ಬರುತ್ತಾರೆ. ಹೊರದೇಶದಲ್ಲಿದ್ದಾಗಲೂ ತಮ್ಮ ಕನ್ನಡದೊಲವನ್ನು ತೋರಿಸುವ ಆಸೆ ಮೆಚ್ಚುವಂತದು. ಸಿಲೋನಿನ ಭಾಷೆ, ಹಬ್ಬಗಳ ಆಚರಣೆ, ಕೊಲಂಬೊ ನಗರ ವಿವರಣೆ, ಖಟುರಗಾಮ ಪ್ರವಾಸ, ಪಲದಮಲಗಾವ ದೇವಸ್ಥಾನ ಮೊದಲಾದ ಸಿಲೋನಿನ ಪ್ರವಾಸ ವಿವರಗಳು ಇಲ್ಲಿ

ಸವುಗೆ ಲಭ್ಯ. ಮಕ್ಕಳಿಗೆ ಇದು ಪ್ರಿಯವಾಗುವಂತೆ ಕಠಿಣಪದಗಳ ಜೋಡಣೆಗಳಿಲ್ಲದ ವಾಕ್ಯ ವೃಂದಗಳಿಂದ ರಚನೆಯಾದ ಪುಟ್ಟಗ್ರಂಥ. ಇದ್ದುದನ್ನು ಇದ್ದಹಾಗೆ ಹೇಳು ವಲ್ಲಿ ಚಾತುರ್ಯ ತೋರಿದ್ದಾರೆ ಲೇಖಕರು.

## ಜೀವನಚರಿತ್ರೆಗಳು

ಇಬ್ಬರು ಸಾತ್ವಿಕ ಜೀವಿಗಳ ಜೀವನ ವೃತ್ತಾಂತ ಶ್ರೀಯುತರ ಲೇಖನಿಯಿಂದ ಮೂಡಿ ಬಂದಿದೆ. ಅದು ಅವರ ಸಾತ್ವಿಕತೆಯ ಕುರುಹುಕೂಡ. 'ಪ್ರಕೃತಿ ಚಿಕಿತ್ಸಾ ಚಾರ್ಯ ಕೆ. ಲಕ್ಷ್ಮಣಶರ್ಮ" ಮತ್ತು ಶಿಸ್ತಿನ ಸೇವಕ ಡಾ|| ಹರ್ಡೀಕರ್ ಎಂಬ ಎರಡು ಜೀವನ ಚರಿತ್ರೆಗಳನ್ನು ಶ್ರೀನಿವಾಸಯ್ಯನವರು ಬರೆದು ಪ್ರಕಟಿಸಿದ್ದಾರೆ.

ಗಾಂಧೀ ವಾದಿಗಳೂ, ಖ್ಯಾತಲೇಖಕರು ಆದ ಶ್ರೀ ಸೀಲತ್ತಹಳ್ಳಿ ಕಸ್ತೂರಿ ಅವರ ಮುನ್ನುಡಿಯನ್ನು ಹೊತ್ತ "ಪ್ರಕೃತಿ ಚಿಕಿತ್ಸಾ ಚಾರ್ಯ ಕೆ. ಲಕ್ಷ್ಮಣಶರ್ಮ" ಕಿರುಗ್ರಂಥದಲ್ಲಿ ಆಚಾರ್ಯ ಲಕ್ಷ್ಮಣಶರ್ಮರ ಪ್ರಕೃತಿ ಚಿಕಿತ್ಸೆ ಕುರಿತ ಸಾಧನೆಯ ಹಾಗೂ ಸೇವಾಕಾರ್ಯವನ್ನು ಸಂಕ್ಷೇಪವಾಗಿ ಮಾಡಿಕೊಡಲಾಗಿದೆ. ಆರಂಭಕ್ಕೆ ಅವರ ಜೀವನ ವೃತ್ತಾಂತವೂ ಇದೆ. ಲೇಖಕರು ಲಕ್ಷ್ಮಣಶರ್ಮರನ್ನು ಪ್ರಕೃತಿ ಜೀವಿ ಎಂದು ಹೇಳುತ್ತಾರೆ. ಲಕ್ಷ್ಮಣಶರ್ಮರು ಹುಟ್ಟು ಸಾಧಕರು. ಹುಟ್ಟಿದ್ದು ಪುದು ಕೋಟೆ. ಬಾಲ್ಯದಿಂದಲೂ ಪುಸ್ತಕಪ್ರಿಯ. ಅಸಾಧಾರಣ ಪಾಂಡಿತ್ಯ. ಪದವೀಧರ ರಾದ ಮೇಲೆ ಪುದುಕೋಟೆಯ ರಾಜಾ ಕಾಲೇಜಿನಲ್ಲಿ ಉಪನ್ಯಾಸಕರಾದರು. ರಾಜ ಕೀಯ ಕ್ಷೇತ್ರದಲ್ಲೆ ಭಾಗವಹಿಸಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡರು. ತಮ್ಮ ಗೆಳೆಯ ಹಾಗೂ ಕ್ರಾಂತಿಕಾರ ವಿ. ವಿ. ಎಸ್. ಅಯ್ಯರ್‌ರವರು ಕಾಲವಾದ ಮೇಲೆ ಪಾಂಡಿಚೆರಿಗೆ ಬಂದು ಪ್ರಕೃತಿ ಚಿಕಿತ್ಸೆಯ ಬಗೆಗೆ ಅಧ್ಯಯನ ನಡೆಸಿದರು. ಹಲವಾರು ಪುಸ್ತಕಗಳನ್ನು ರಚಿಸಿದರು. ಇಂಗ್ಲೀಷಿನಲ್ಲಿ The life Nalural ಪತ್ರಿಕೆಯನ್ನಾ ರಂಭಿಸಿದರು. ಪ್ರಕೃತಿ ಚಿಕಿತ್ಸೆಗಾಗಿ ಒಂದು ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸಿ ಅನೇಕ ತರಗತಿಗಳನ್ನು ನಡೆಸಿದರು. ಹೀಗೆ ಇಡೀ ಜೀವನವನ್ನು ಪ್ರಕೃತಿ ಚಿಕಿತ್ಸೆಗಾಗಿ ಮೀಸಲಿಟ್ಟು ಕೊನೆಗೆ ತತ್ವಜ್ಞಾನವನ್ನು ಅಭ್ಯಾಸಮಾಡಿದರು. ಸಂಸ್ಕೃತದಲ್ಲಿ ಸುಮಾರು 1500 ಶ್ಲೋಕಗಳುಳ್ಳ ಸ್ವಾಸ್ಥ್ಯ ಮಹಾವಿದ್ಯಾ ಎಂಬ ಪುಸ್ತಕ ರಚಿಸಿ ದರು. ಇಂದಿಗೂ ಅದು ಒಂದು ಪ್ರಮಾಣ ಗ್ರಂಥವಾಗಿದೆ. ಅವರು ರಚಿಸಿದ ಮತ್ತೊಂದು ಗ್ರಂಥ "The way Back to Health". ಇದು 'Practical Nature Cure' ಎಂಬ ಹೆಸರಿನಲ್ಲಿ 12 ಮುದ್ರಣಗಳನ್ನು ಕಂಡು ಜನಪ್ರಿಯ ವಾಗಿದೆ. ಲಕ್ಷ್ಮಣಶರ್ಮರ ಮಕ್ಕಳು ಇಂದಿಗೂ ತಮ್ಮ ತಂದೆಯವರು ಹಾಕಿಕೊಟ್ಟ ಪಥದಲ್ಲಿ ಮುಂದುವರಿಯುತ್ತಿದ್ದಾರೆ. ಲಕ್ಷ್ಮಣಶರ್ಮರದು ಸಾಧಕನ ಜೀವನ. ಇಂತಹ ವ್ಯಕ್ತಿಯ ಜೀವನವನ್ನು ಸರಳವಾದ ಶೈಲಿಯಲ್ಲಿ ಶ್ರೀನಿವಾಸಯ್ಯನವರು

ಕೊಟ್ಟಿರುವುದು ಈ ಬಗೆಯ ಸಾಹಿತ್ಯಕ್ಕೆ ಅವರು ಕೊಟ್ಟಿರುವ ಉತ್ತಮ ಕಾಣಿಕೆ ಪುಸ್ತಕ ಚಿಕ್ಕದಿರಬಹುದು. ಆದರೆ ಇದು ಗುಣ ತುಂಬಿಕೊಂಡ ಒಂದು ಹೊಸ ವಿಷಯದತ್ತ ಜನರ ಮನಸ್ಸನ್ನು ತಿರುಗಿಸುವ ಶಕ್ತಿ ಪಡೆದಿರುವ ಗ್ರಂಥ. ಪುಸ್ತಕದಲ್ಲಿ "ಸ್ವಾಸ್ಥ್ಯಮಹಾ ವಿದ್ಯಾ" ಗ್ರಂಥದ ಶ್ಲೋಕಗಳನ್ನು ಆರಿಸಿಕೊಟ್ಟಿರುವುದು ಗಮನಾರ್ಹ. ಅದರ ಅನುವಾದ ಸಮಂಜಸವಾಗಿದ್ದು ಪ್ರಕೃತಿ ಚಿಕಿತ್ಸಾಪ್ರಿಯರಿಗೆ ಮೆಚ್ಚುಗೆಯಾಗುತ್ತದೆ.

ಶ್ರೀನಿವಾಸಯ್ಯನವರಿಗೆ ಬಾಲ್ಯದಲ್ಲಿ ಭಾರತ ಸೇವಾದಲದಲ್ಲಿ ಸ್ವಯಂಸೇವಕನಾಗಿ ದುಡಿಯುವ ಅವಕಾಶ ದೊರೆತದ್ದು ಮತ್ತು ಸೇವಾದಲದ ಸಂಸ್ಥಾಪಕ. ಡಾ॥ ಎನ್. ಎಸ್. ಹರ್ಡೀಕರ್ ಅವರ ಸಂಪರ್ಕವಿದ್ದದ್ದು ಹರ್ಡೀಕರರ ಕುರಿತು ಗ್ರಂಥವನ್ನು ಬರೆಯಲು ಪ್ರೇರಣೆಯಾಯಿತೆನ್ನಬಹುದು. ಕರ್ನಾಟಕದವರೇ ಆದ ಹರ್ಡೀಕರರ ಜೀವನ ಸೇವಾಮಯ ಜೀವನ. ಭಾರತದ ಸ್ವಾತಂತ್ರ್ಯ ಸಂಗ್ರಾಮದ ಕಾಲ ಅದು. ಎಲ್ಲೆಲ್ಲೂ ದೇಶಪ್ರೇಮವನ್ನು ಜಾಗೃತಗೊಳಿಸುವ ಮಹಾನಾಯಕರ ಮುಂದಾಳತ್ವದಲ್ಲಿ ಚಳುವಳಿಗಳು, ಸೇವಾಕರ್ತರ ಶಿಸ್ತಿನ ಕಾರ್ಯಕ್ರಮಗಳು, ಇಂತಹ ಸಮಯದಲ್ಲಿ ಹರ್ಡೀಕರರ ಬಿಡುವಿಲ್ಲದ ದುಡಿತ, ದೇಶಸೇವೆಗೆ ಜೀವನ ಮುಡಿಪು ಅವರ ಗುರಿ. ಅವರು ನಡೆಸಿದ ಜೀವನ ಸಾಧಕನ ರೀತಿಯದು. ಲೇಖಕರು ಹರ್ಡೀಕರರ ಜೀವನ ಪರಿಚಯವನ್ನು ಶಿಸ್ತಿನಸೇವಕ ಡಾ॥ ಹರ್ಡೀಕರ್ ಎಂದು ಆರಂಭಿಸುತ್ತಾರೆ. ಬೆಳಗಾಂನಲ್ಲಿ ಕಾಂಗ್ರೆಸ್ ಅಧಿವೇಶನ ನಡೆದ ಸಂದರ್ಭದಲ್ಲಿ ಹರ್ಡೀಕರರು ಶಿಸ್ತನ್ನು ಕಾಪಾಡಲು ವಹಿಸಿದ ಪಾತ್ರವನ್ನು ಯಾರೂ ಮರೆಯುವಂತಿಲ್ಲ. ಅವರು ಬಡತನದ ಕುಟುಂಬದಲ್ಲಿ ಹುಟ್ಟಿದರು. ಬಾಲ್ಯದಲ್ಲೇ ತಂದೆಯ ಸಾವು. ಬಂಧುಗಳ ನೆರವಿನಿಂದ ಜೀವನ ಮುಂದುವರಿಯಿತು. ಹಿಂದೂಸ್ಥಾನದಲ್ಲಿ ಬ್ರಿಟಿಷರ ಆಳ್ವಿಕೆಯ ಕಾಲ. ಮಹಾರಾಷ್ಟ್ರದಲ್ಲಿ ತಿಲಕರ ನಾಯಕತ್ವದಲ್ಲಿ ಸ್ವಾತಂತ್ರ್ಯ ಚಳುವಳಿ ನಡೆಯಿತು. ಹುಬ್ಬಳ್ಳಿಯಲ್ಲಿ ವಿದ್ಯಾರ್ಥಿಯಾಗಿದ್ದ ಹರ್ಡೀಕರರಿಗೆ ತಿಲಕರ ವಿಚಾರಗಳು ಹಿಡಿಸಿದವು. ದೇಶಾಭಿಮಾನ ಜಾಗೃತವಾಗಿ ತಾವೂ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಭಾಗವಹಿಸ ತೊಡಗಿದರು. ವ್ಯಾಯಾಮ ಅವರಿಗೆ ಬಹುಪ್ರಿಯವಾದ ವಿಷಯ, ಯುವಕರಿಗೆ ಶಿಕ್ಷಣಕೊಡುವಷ್ಟು ತಮ್ಮ ಶರೀರ ಬಲವನ್ನು ಬೆಳೆಸಿಕೊಂಡಿದ್ದರು. ಇವರು ನಡೆಸಿದ ಆಂದೋಳನದ ಬಗೆಗೆ ಬ್ರಿಟಿಷರಿಗೂ ವರದಿಯಾಗಿತ್ತು. ಹರ್ಡೀಕರರು ಅಮೆರಿಕ ಪ್ರವಾಸ ಕೈಕೊಂಡರು. ಕ್ರಿಶ್ಚಿಯನ್ ಮಿಶನರಿಗಳು ಭಾರತದಲ್ಲಿ ನಡೆಸುತ್ತಿದ್ದ ಸೇವಾವ್ರತವನ್ನು ಕಂಡು ತಾವೂ ಅವರಂತೆ ಏಕೆ ಜನಸೇವೆ ಮಾಡಬಾರದು ಎಂದೆನಿಸಿತು ಅವರಿಗೆ. ವೈದ್ಯಶಾಸ್ತ್ರದಲ್ಲಿ ಪರಿಣತಿಗಾಗಿ ವಿದೇಶಯಾತ್ರೆ ಅಗತ್ಯವಾಯಿತು. ಸಂಘಟನೆ ಮಾಡುವುದಂತೂ ಮೊದಲಿಂದಲೂ ಹರ್ಡೀಕರರ ಬಹು ಇಚ್ಛೆಯ ಕಾರ್ಯ. ಅಮೇರಿಕಾದಲ್ಲೂ ಈ ಕೆಲಸ

ವನ್ನು ಮುಂದುವರಿಸಿದರು. ಶಿಕ್ಷಣ ಪಡೆದು ವೈದ್ಯರಾದರು. ಚಿಕಾಗೋ ನಗರದಲ್ಲಿ ಒಮ್ಮೆ ಲಾಲಾಲಜಪತ್‌ರಾಯರ ಭಾಷಣ ಕೇಳುವ ಸುಯೋಗ ಒದಗಿತು. ಅದನ್ನು ಅವರೇ ಏರ್ಪಡಿಸಿದ್ದರು ಕೂಡ, ಲಾಲಾಜಿಯವರ ಭಾಷಣ ಇವರ ಜೀವನ ಪಥವನ್ನು ಬದಲಿಸಿತು. ಮುಂದೆ ಭಾರತದಲ್ಲಿ ಅವರು ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡು ದುಡಿದರು. ತಮ್ಮ ಕಾರ್ಯ ಕ್ಷೇತ್ರವನ್ನಾಗಿ ಹುಬ್ಬಳ್ಳಿಯನ್ನು ಆರಿಸಿಕೊಂಡರು. ನಾಗಪುರದಲ್ಲಿ 1933ರಲ್ಲಿ ನಡೆದ ಧ್ವಜಸತ್ಯಾಗ್ರಹದಲ್ಲಿ ಭಾಗವಹಿಸಿ ಸೆರೆಮನೆ ಸೇರಿದರು. ಕೆಲಕಾಲಾನಂತರ ಬಿಡುಗಡೆಯಾಯಿತು. ಸೇವಾಸಂಸ್ಥೆಯನ್ನು ಸ್ಥಾಪಿಸಿದರು. ಯುವಕರ ಸಂಘಟನೆ ಮಾಡಿದರು. 'ವಾಲಂಟಿಯರ್' ಎಂಬ ಪತ್ರಿಕೆ ಆರಂಭಿಸಿದರು. ಹಲವಾರು ಕಾಂಗ್ರೆಸ್ ಅಧಿವೇಶನಗಳಲ್ಲಿ ಹರ್ಡೀಕರರು ಸ್ವಯಂಸೇವಕರಾಗಿ ದುಡಿದರು. ಮಹಾತ್ಮಾ ಗಾಂಧೀಜಿಯವರಿಗೆ ಹರ್ಡೀಕರರೆಂದರೆ ಬಲುಪ್ರಿಯ. ಅವರ ಸೇವಾನಿಷ್ಠೆಯೇ ಅದಕ್ಕೆ ಕಾರಣವಾಗಿತ್ತು. ಲೇಖಕರು ಹರ್ಡೀಕರರ ಸಾಧನೆಗಳನ್ನು ಯಥಾವತ್ತಾಗಿ ಚಿತ್ರಿಸುವುದು ಗಮನಾರ್ಹ. ಎಲ್ಲಿಯೂ ಅತಿಯಾದ ವಿವರಣೆಗಳನ್ನು ನಾವು ಕಾಣುವುದಿಲ್ಲ. ಹರ್ಡೀಕರರ ಸೇವಾಮಯ ಜೀವನ ಎಂತಹವನನ್ನಾದರೂ ಬೆರಗುಗೊಳಿಸುವಂತಹುದು. ಭಾರತಕ್ಕೆ ಸ್ವಾತಂತ್ರ್ಯ ಬಂದ ಮೂರು ವರ್ಷಗಳಲ್ಲಿ ಹರ್ಡೀಕರರಿಗೆ 60ವರ್ಷ ತುಂಬಿತ್ತು. ಅವರಿಗೆ ಒಂದು ಸನ್ಮಾನ ನಡೆದು ಅದರಲ್ಲಿ ಅವರು ಭಾಗವಹಿಸಿ ತಮಗೆ ಸಮಿತಿಯು ನೀಡಿದ 61000 ರೂಗಳ ನಿಧಿಯನ್ನು ಸ್ವೀಕರಿಸಿದರು. ಆದರೆ ಅದನ್ನು ವಿತರಿಸಿದ ರೀತಿಯೇ ಬೇರೆ. ತಮಗಾಗಿ ಇಟ್ಟುಕೊಳ್ಳದೆ ಜನತೆಯ ಸೇವೆಗಾಗಿ ಮೀಸಲಿಟ್ಟರು. ಟ್ರಸ್ಟ್ ಒಂದಕ್ಕೆ ಕೊಟ್ಟರು. ತಮ್ಮ ಕೊನೆಯ ದಿನಗಳನ್ನು ಘಟಪ್ರಭಾದಲ್ಲಿನ ಕರ್ನಾಟಕದ ಆರೋಗ್ಯ ಧಾಮದಲ್ಲಿ ಕಳೆದರು. ರೋಗಿಗಳ ಶುಶ್ರೂಷೆ ನಡೆಸಿದರು. 'ಆರೋಗ್ಯಧಾಮದ ಅಜ್ಜ' ಎಂಬ ಪ್ರೀತಿಯ ಕರೆಗೆ ಪಾತ್ರರಾದರು. ಅವರು ಹೇಳಿರುವಂತೆ 'ಸೇವಾದಲವೆಂದರೆ ಅರಸನ ಸೈನ್ಯವಲ್ಲ, ಕಾರ್ಯಕರ್ತರ ಸಂಸ್ಥೆ'. ಕಡೆಯವರೆಗೂ ಯೋಗಿಯಂತೆ ಬಾಳಿದ ಹರ್ಡೀಕರರ ಜೀವನ ಚರಿತ್ರೆಯನ್ನು ಶ್ರೀನಿವಾಸಯ್ಯನವರು ಸಂಕ್ಷಿಪ್ತವಾಗಿ ಹೇಳಿದ್ದಾರೆ. ಪ್ರತಿಅಧ್ಯಾಯದಲ್ಲೂ ಸಾಧ್ಯವಾದಲ್ಲೆಲ್ಲ ಕೆಲವು ಆಖ್ಯಾಯಿಕೆ [Anecdotes] ಗಳನ್ನು ಉದಾಹರಿಸುವುದು ಔಚಿತ್ಯಪೂರ್ಣವಾಗಿದೆ. ಇಬ್ಬರು ವಿವಿಧ ರೀತಿಯ ಸಾಧಕರ 'ಜೀವನ ಚರಿತ್ರೆ' ಬರೆಯಲು ಶ್ರೀನಿವಾಸಯ್ಯನವರು ಆರಿಸಿಕೊಂಡಿದ್ದು ಅವರ ಸೇವಾಮಯ ಜೀವನಕ್ಕೆ ದ್ಯೋತಕವಾಗಿದೆ. ಇಬ್ಬರನ್ನು ತಮ್ಮ ಬಾಳಿನಲ್ಲಿ ಕಂಡಿದ್ದರು. ಅವರುಗಳು ಹಾಕಿಕೊಟ್ಟ ಮಾರ್ಗದಲ್ಲಿ ನಡೆಯಲು ತಾವೇ ಕೆಲವು ಕಾರ್ಯಕ್ರಮಗಳನ್ನು ರೂಪಿಸಿಕೊಂಡರು. ಕೆಲವನ್ನು ಪಾಲಿಸಿದರು. ಹೀಗೆ ಈ ಎರಡೂ ಜೀವನ ಚರಿತ್ರೆಯ ಪುಟ್ಟಗ್ರಂಥಗಳು

ಒಳ್ಳೆಯ ಹಿನ್ನೆಲೆಯಲ್ಲಿ ಬರೆಯಲ್ಪಟ್ಟಿದ್ದು ಅವರ ಸಾಹಿತ್ಯದ ಒಲವನ್ನು ಸಮರ್ಥಿಸುತ್ತದೆನ್ನಬಹುದಾಗಿದೆ.

## ಅ] ಲೇಖನಗಳು

ಶ್ರೀನಿವಾಸಯ್ಯನವರು ಜರ್ಮನಿಗೆ ಹೋಗುವ ಮೊದಲು ಜರ್ಮನ್ ಭಾಷೆಯ ಸ್ವರೂಪವೇನೆಂಬುದನ್ನು ತಿಳಿದಿದ್ದರು. ಇಂಗ್ಲಿಷ್ ಭಾಷೆಯ ಜ್ಞಾನ ಚೆನ್ನಾಗಿಯೇ ಇತ್ತು. ಕನ್ನಡವಂತೂ ಮನೆಮಾತು. ಹೀಗಾಗಿ ಅವರ ಲೇಖನಗಳು ಈ ಮೂರು ಭಾಷೆಯನ್ನು ದುಡಿಸಿಕೊಂಡವು. ಜರ್ಮನ್ ಭಾಷೆಯಲ್ಲೂ ಅವರು ಕೆಲವು ಲೇಖನಗಳನ್ನು 1956-58ರ ಕಾಲದಲ್ಲಿ ಬರೆದಿರುವುದು ಗಮನಾರ್ಹ. ವೃತ್ತಿಯಿಂದ ಇಂಜಿನಿಯರರಾದ ಅವರ ವಿಶೇಷ ಜ್ಞಾನ ಅವರು ಕೆಲಸ ಮಾಡುವ ಭಾರತ್ ಅರ್ತ್ ಮೂವರ್ಸ್ ಲಿಮಿಟೆಡ್ (ಮೊದಲು ಹಿಂದೂಸ್ಥಾನ ವಿಮಾನ ಕಾರ್ಖಾನೆ) ಸಂಸ್ಥೆಯ ಉತ್ಪಾದನೆಗಳಲ್ಲೊಂದಾದ ರೈಲುಗಾಡಿಗಳ ನಿರ್ಮಾಣ ಕುರಿತದ್ದು. ಜರ್ಮನಿಗೆ ಹೋದದ್ದು ಅದನ್ನು ಸಂಪಾದಿಸಲೆಂದೆ. ಅವರು ಮೊದಲಿಗೆ ಬರೆದ ಲೇಖನಗಳಲ್ಲಿ ರೈಲು ಗಾಡಿಗಳನ್ನು ಮತ್ತು ಅವುಗಳ ನಿರ್ಮಾಣ ಕುರಿತಾದ ವಿವರಗಳನ್ನು ಕಾಣುತ್ತೇವೆ. ಇಂಡಿಯನ್ ರೈಲ್ವೆ ಇಂಜಿನಿಯರ್, ಆಟೋ ಮೊಬೈಲ್ ನ್ಯೂಸ್, ಜರ್ಮನಿಯ ನರ್ನ್‌ಬರ್ಗ್‌ರ್ ನಾಶ್ರಿಶೆನ್, ಬೆಂಗಳೂರು ಇಂಜಿನಿಯರಿಂಗ್ ಕಾಲೇಜಿನ ಅಲಮ್ನಿ ಅಸೋಸಿಯೇಶನ್ನಿನ ಜರ್ನಲ್, ವಿಮಾನ ಸಮಾಚಾರ್, ಹಾಗೂ ಕನ್ನಡದ ಸಂಯುಕ್ತ ಕರ್ನಾಟಕ ಈ ಪತ್ರಿಕೆಗಳಲ್ಲಿ ಶ್ರೀಯುತರು ಲೇಖನಗಳನ್ನು ಬರೆದಿದ್ದಾರೆ. ಇವು ಪ್ರಕಟವಾಗಿ ವರ್ಷಗಳೇ ಆದರೂ ಆ ಲೇಖನಗಳಲ್ಲಿ ಅವರು ಮೂಡಿಸಿರುವ ತಾಂತ್ರಿಕ ಜ್ಞಾನ ಹಳೆಯದಾಗುವುದಿಲ್ಲ. ಜರ್ಮನಿಯಲ್ಲಿ ತಯಾರಾಗುವ ರೈಲ್ವೆ ಕೋಚ್‌ಗಳ ನಿರ್ಮಾಣ ವಿಧಾನ, ಪಶ್ಚಿಮ ಜರ್ಮನಿಯ ಕೆಲಸಗಾರ, ರೈಲುಗಾಡಿಗಳ ರಚನೆಯ ಸಾಹಸ, ಹಾನೋವರ್‌ನಲ್ಲಿ ಕೈಗಾರಿಕಾ ಮೇಳ ಇವೇ ಮೊದಲಾದ ವಿಷಯಗಳನ್ನು ಕುರಿತು ಅವರು ಬರೆದ ಲೇಖನಗಳು ವಿಚಾರಪೂರಿತವೂ ಸರಳ ಶೈಲಿಯವೂ ಆಗಿವೆ. ಉದಾಹರಣೆಗೆ ಜರ್ಮನಿಯ ಆಧುನಿಕ ರೈಲುಗಾಡಿಯೊಂದರ ವಾಯು ನಿಯಂತ್ರಣ ವ್ಯವಸ್ಥೆಯನ್ನು ಹೀಗೆ ವರ್ಣಿಸುತ್ತಾರೆ.

"The air conditioning system has been designed to keep filtered air with an adequate proportion of fresh air from the outside in constant circulation through heat nsulated conducts between the ceiling and the roof

*with fully automatic control, this system warms the air in winter and cools and dehydrates it in summer".

ದಿನಾಂಕ 6-5-1962ರ ಸಂಯುಕ್ತ ಕರ್ನಾಟಕ ಪತ್ರಿಕೆಯ ಉದ್ಯಮ ಮತ್ತು ವಾಣಿಜ್ಯ ಪುರವಣಿಯಲ್ಲಿ "ರೈಲುಗಾಡಿಗಳ ರಚನೆಯ ಸಾಹಸ" ಎಂಬ ಒಂದು ಲೇಖನದಲ್ಲಿ ರೈಲುಗಾಡಿಗಳ ರಚನೆಯಲ್ಲಿ ಆದ ನವೀನತೆಯನ್ನು ಕುರಿತು ಬರೆಯುತ್ತಾ ಹೀಗೆಂದಿದ್ದಾರೆ.

"ಭಾರತದಲ್ಲಿ ಮೊದಲು ರೈಲುಗಾಡಿಗಳು ಓಡಿದ್ದು ಅಂದರೆ 1853ರಲ್ಲಿ ಬೊಂಬಾಯಿಯಿಂದ ಠಾಣಾಕ್ಕೆ. ಆಗಿನಿಂದಲೂ ಇದುವರೆಗೆ ಭಾರತಾದ್ಯಂತ ಅನೇಕ ರೈಲುಗಾಡಿಗಳು ಓಡುತ್ತಿವೆ. ಇವುಗಳಲ್ಲಿ ಅನೇಕವು ಹಳೆಯ ಕಾಲದ ರಚನೆ ಉಳ್ಳದ್ದು ಮತ್ತು ಹೊರದೇಶದಲ್ಲಿ ಕೊಂಡದ್ದು. ಎರಡನೇ ಮಹಾಯುದ್ಧವಾದವಾದ ಮೇಲೆ 3ನೇ ತರಗತಿ ಪ್ರಯಾಣಿಕರಿಗೆ ಹೆಚ್ಚು ಅನುಕೂಲ, ಸುಖ ಸೌಲಭ್ಯಗಳನ್ನು ಕೊಡಲು ಪ್ರಯತ್ನ ನಡೆಯುತ್ತಿದೆ. ಈ ಪ್ರಯತ್ನದಲ್ಲಿ ಹಿಂದುಸ್ಥಾನ ವಿಮಾನ ಕಾರ್ಖಾನೆಯ ರೈಲುಗಾಡಿ ಕಟ್ಟುವ ವಿಭಾಗದ ಪಾತ್ರವೂ ಇದೆ. ಸುಮಾರು 2000 ಮೂರನೆ ತರಗತಿಯ ಗಾಡಿಗಳನ್ನು ಕಟ್ಟಿ ಹೆಚ್ಚು ಸೌಕರ್ಯಗಳನ್ನು ಒದಗಿಸಿ ರೈಲು ಗಾಡಿಗಳಲ್ಲಿ ಒಂದು ಕ್ರಾಂತಿಯನ್ನೆ ತಂದಿದೆ".

ಜರ್ಮನಿಗೆ ಹೋಗಿ ಬಂದ ಮೇಲೆ ತಾವು ತಿಳಿದುಕೊಂಡ ವಿಷಯವನ್ನು ಜನ ಸಾಮಾನ್ಯರಿಗೆ ತಂತ್ರಜ್ಞರಿಗೆ ತಿಳಿಸಲು ಲೇಖಕರು ವಹಿಸಿದ ಶ್ರಮ ಗಮನಾರ್ಹ. ವಿದೇಶಗಳಲ್ಲಿ ಶಿಕ್ಷಣ ಪಡೆದು ಬಂದವರು ಹೀಗೆ ತಿಳಿಸಿಕೊಡುವುದಿರಲಿ ಅವರು ಪಡೆದು ಬಂದದ್ದನ್ನು ಭಾರತದ ಕಾರ್ಖಾನೆಗಳಿಗೆ ಅನ್ವಯಿಸಿ ತಾಂತ್ರಿಕತೆಯ ಜ್ಞಾನವನ್ನು ಹೆಚ್ಚಿಸುವವರೂ ವಿರಳ, ಅಂತಹ ಪರಿಸ್ಥಿತಿಯಲ್ಲಿ ಶ್ರೀನಿವಾಸಯ್ಯನವರು ವಹಿಸಿದ ಪಾತ್ರ ಸ್ವಲ್ಪವೇನಲ್ಲ.

ಸಾಮಾಜಿಕ ಜೀವನದಲ್ಲಿ ಸೇವಾಕಾರ್ಯಗಳಲ್ಲಿ ಭಾಗವಹಿಸಲು ತೊಡಗಿದ ಶ್ರೀಯುತರಿಗೆ ಆ ರಂಗದಲ್ಲೂ ವಿಶೇಷ ಪರಿಶ್ರಮ ಉಂಟಾಗಿದ್ದು ಸಹಜವೇ ಆಗಿದೆ. ಗಾಂಧೀಜಿಯವರು ಹಿಡಿದ ಪ್ರಕೃತಿ ಚಿಕಿತ್ಸೆಯನ್ನು ತಾವೂ ಅಭ್ಯಸಿಸಿದರು. ಅದನ್ನು ಜನರಲ್ಲಿ ಬಿತ್ತಲು ಒಂದು ಸಂಘವನ್ನೆ ಕಟ್ಟಿದರು. ಅದೇ ಪ್ರಕೃತಿ ಜೀವನ ಕೇಂದ್ರ

---

*Modern articulated train of Germany; By Sreenivasaiah Indian Railway Engineer, July 1955.

ಎಂಬ ಹೆಸರಿನಲ್ಲಿ ಸ್ಥಾಪಿತವಾಯಿತು. 'ಪ್ರಕೃತಿ ಜೀವನ' ಎಂಬ ತ್ರೈಮಾಸಿಕ ಪತ್ರಿಕೆಯನ್ನು ಹೊರಡಿಸಲು ಯೋಚಿಸಿದರು. 1970ರಿಂದ ಆ ಪತ್ರಿಕೆ ನಡೆದುಕೊಂಡು ಬರುತ್ತಿದೆ. ಅದರ ಮುನ್ನಡೆಗಾಗಿ ತಾವೇ ಕೆಲವು ಲೇಖನಗಳನ್ನು ಬರೆದರು. ಇತರರಿಂದ ಲೇಖನಗಳನ್ನು ಬರೆಸಿದರು. ಆ ಪತ್ರಿಕೆಗೆ ಅವರು ಬರೆದ ಲೇಖನಗಳಲ್ಲಿ 'ಮಲಿನಗಾಳಿ' ಮತ್ತು 'ಮಲಿನ ನೀರು' ಕುರಿತವು ಮಹತ್ವಪೂರ್ಣವಾಗಿವೆ. ಮಲಿನ ಗಾಳಿ (Polluted Air) ಎಂಬ ಲೇಖನದ ಕೊನೆಗೆ ಅವರು ಕೊಡುವ ಎಚ್ಚರಿಕೆಯ ಮಾತುಗಳನ್ನು ಗಮನಿಸಬಹುದಾಗಿದೆ. ಅವು ಹೀಗಿವೆ.

"ಮೈಸೂರು ಸರಕಾರದ ರಸ್ತೆ ಸಾರಿಗೆ ಇಲಾಖೆಗೆ ಸೇರಿದ ಒಬ್ಬ ಅಧಿಕಾರಿಗಳು ಇಂಡಿಯಾ ದೇಶದಲ್ಲಿ ಅಮೇರಿಕಾ ದೇಶದಲ್ಲಿನ ಮಲಿನ ಗಾಳಿ ಸಮಸ್ಯೆಯಷ್ಟು ಇರುವುದಿಲ್ಲ ಎಂದು ರೋಟರಿ ಕ್ಲಬ್ಬಿನಲ್ಲಿ ಮಾತನಾಡುತ್ತಾ ಹೇಳಿದರು. ಈಗಿನಿಂದಲೇ ಅದನ್ನು ತಡೆಯದಿದ್ದರೆ, ಹೆಚ್ಚಾದ ಮೇಲೆ ತಡೆಯುವುದು ಕಷ್ಟ; ಅಸಾಧ್ಯ. ಈಗ ವಿಪರೀತವಾಗಿರುವ, ಪರದೇಶಗಳಲ್ಲಿ ಇದಕ್ಕಾಗಿ ಖರ್ಚು ಮಾಡುತ್ತಿರುವುದನ್ನು ನೋಡಿದರೆ ಸಮಸ್ಯೆ ಬರುವವರೆಗೂ ಏಕೆ ಕಾಯಬೇಕು? ಈಗಿನಿಂದಲೇ ಎಚ್ಚರವಾಗಿರಬೇಕು ಎಂದು ವಿಚಾರಿಸಬೇಕಾಗಿದೆ". ಹತ್ತು ವರ್ಷಗಳ ಕೆಳಗೆ ಈ ಕರೆ ಕೊಟ್ಟದ್ದು. ಮಲಿನ ಗಾಳಿಯ ಸಮಸ್ಯೆ ಈಗ ಬೃಹದಾಕಾರವಾಗಿದೆ. ಬೊಂಬಾಯಿ ಕಲ್ಕತ್ತಗಳಲ್ಲಿ ಇದು ವಿಪರೀತವಾಗಿದ್ದರೆ ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿ ಕಡಿಮೆಯೇನಿಲ್ಲ. ಈಗಲಾದರೂ ಪರಿಸ್ಥಿತಿ ಸುಧಾರಿಸಲಾದೀತೆ?" ಶ್ರೀಯುತರು 'ಪ್ರಕೃತಿ ಜೀವನ' ಪತ್ರಿಕೆಯ ಮೂಲಕ ಇಂತಹ ಹಲವಾರು ಲೇಖನಗಳನ್ನು ಬರೆದು ಬರೆಯಿಸಿ ಜನರ ಆರೋಗ್ಯದತ್ತ ವಿಚಾರ ಮಾಡುತ್ತಾ ಬಂದಿದ್ದಾರೆ.

ಬೆಂಗಳೂರು ಆಕಾಶವಾಣಿಗಾಗಿ ಅವರು ಕೆಲವು ವಿಷಯಗಳನ್ನು ಕುರಿತು ಮಾತನಾಡಿದ್ದು ಉಂಟು. ಆಗ ಅದಕ್ಕಾಗಿ ತಯಾರಿಸಿಕೊಂಡಿದ್ದ ಬರವಣಿಗೆಯನ್ನು ಲೇಖನಗಳನ್ನಾಗಿ ಪ್ರಕಟಿಸಿದರು. ಕೈಗಾರಿಕೆಯಲ್ಲಿ ಆಮುದು ಬದಲಿಕೆ, ಕೈಗಾರಿಕೆ ಕ್ಷೇತ್ರದಲ್ಲಿ ತಾಂತ್ರಿಕ ವಿಜ್ಞಾನದ ಅವಶ್ಯಕತೆ, ಮಾನವೀಯತೆ ಮತ್ತು ಕಾರ್ಮಿಕ ಕೈಗಾರಿಕಾ ಕಾರ್ಮಿಕರು ಹೆಚ್ಚು ಉತ್ಪಾದನೆಯಲ್ಲಿ ವಹಿಸಬೇಕಾದ ಪಾತ್ರ, ಕಾರ್ಮಿಕ, ಮತ್ತು ಕನ್ನಡ, ಗಾಂಧೀ ಪ್ರಕೃತಿ ಚಿಕಿತ್ಸೆ ಹಾಗೂ ಗಾಂಧೀಜಿ ಮತ್ತು ಸ್ವದೇಶಿ ಎಂಬ ಈ ಲೇಖನಗಳನ್ನು ಇಲ್ಲಿ ಸಮೂದಿಸಬಹುದಾಗಿದೆ. ಅವರ ಕೆಲವು ವಿಚಾರಗಳನ್ನು ಹೀಗೆ ಪಟ್ಟಿ ಮಾಡಬಹುದಾಗಿದೆ.

1) ಕಾರ್ಮಿಕನೂ ಸಮಾಜ ಜೀವಿ. ಅವನ ನೆಮ್ಮದಿ ಮುಖ್ಯ. ಅಧಿಕಾರಿ ಕಾರ್ಮಿಕನನ್ನು ಮಾನವೀಯ ದೃಷ್ಟಿಯಿಂದ ನೋಡಬೇಕಲ್ಲದೆ ಅವನಿಗೆ ಒಳ್ಳೆಯ ವಾತಾವರಣವನ್ನು ಕಲ್ಪಿಸಿಕೊಡಬೇಕು. ಮನಸ್ಸಿನ ಉಲ್ಲಾಸಕ್ಕೆ ಬೇಕಾದ ಚಟು ವಟಿಕೆಗಳನ್ನು ಏರ್ಪಡಿಸಬೇಕು.

2) ಮಾನವನಿಗೆ ಯಂತ್ರದ ಸಂಪರ್ಕ ಹೆಚ್ಚಾಗಿರುವಲ್ಲಿ ಕೈಗಾರಿಕೆ ಪ್ರಗತಿ ಯಾಗಬೇಕಾದಲ್ಲಿ ತಾಂತ್ರಿಕ ಜ್ಞಾನ ಅವಶ್ಯಕ.

3) ಕಾರ್ಮಿಕರಿಗೆ ಬೇಕಾದ ತಾಂತ್ರಿಕ ಕೈಪಿಡಿ, ಕೈಗಾರಿಕಾ ಕೈಪಿಡಿಗಳು ಕನ್ನಡದಲ್ಲಿ ತಯಾರಾಗಬೇಕು.

4) ಸ್ವದೇಶಿ ವಸ್ತುಗಳಲ್ಲಿ ನಂಬಿಕೆ ಮೂಡಬೇಕು. ಆಗಲ್ಲೇ ಆಮದು ಮಾಡಿಕೊಳ್ಳುವುದು ನಿಲ್ಲುತ್ತದೆ.

ಶ್ರೀನಿವಾಸಯ್ಯನವರು ಖ್ಯಾತ ಪತ್ರಿಕೋದ್ಯಮಿ, ಗಾಂಧೀವಾದಿ ದಿವಂಗತ ಸಿದ್ಧವನಹಳ್ಳಿ ಕೃಷ್ಣಶರ್ಮರ ಮಾರ್ಗದರ್ಶನದಲ್ಲಿ ತಮ್ಮ ಜೀವನವನ್ನು ರೂಪಿಸಿ ಕೊಂಡವರು. ಅವರ ಸ್ಮರಣೆ ಅವರಿಗೆ ಪ್ರಿಯವಾದ ವಿಷಯ. ಅವರೊಡನೆ ಮೂವತ್ತು ವರ್ಷಗಳಷ್ಟು ಕಾಲ ಸಾಮಾಜಿಕ ಕ್ಷೇತ್ರದಲ್ಲಿ ದುಡಿದರು. ಸಿದ್ಧವನ ಹಳ್ಳಿ ಕೃಷ್ಣ ಶರ್ಮರಿಗೆ ಅರ್ಪಿಸಿದ 'ಸಿದ್ಧಹಸ್ತ' ಎಂಬ ಅಭಿನಂದನ ಗ್ರಂಥದಲ್ಲಿ ಶರ್ಮರನ್ನು ಸ್ಮರಿಸಿ ಒಂದು ಲೇಖನ ಬರೆದಿದ್ದಾರೆ. ಶರ್ಮರು ಸ್ಥಾಪಿಸಿದ ಮಲ್ಲೇ ಶ್ವರದ ಗಾಂಧೀ ಸಾಹಿತ್ಯ ಸಂಘ ಬೆಳೆದು ಬಂದ ಬಗೆ, ಶರ್ಮರು ದುಡಿಯುತ್ತಿದ್ದ ರೀತಿ ಯನ್ನು ಅಲ್ಲಿ ಬಣ್ಣಿಸಿದ್ದಾರೆ. ಇದೇ ರೀತಿ ಕನ್ನಡದ ಖ್ಯಾತ ಸಾಹಿತಿ, ಕವಿ ದಿವಂಗತ ರಾಜರತ್ನಂರವರ ನೆನಪಿಗಾಗಿ ಪ್ರಕಟವಾದ 'ರಾಜಮಾರ್ಗ' ಎಂಬ ಗ್ರಂಥದಲ್ಲಿ ರಾಜ ರತ್ನಂರವರು ಗಾಂಧೀ ಸಾಹಿತ್ಯ ಸಂಘದೊಡನೆ ಇಟ್ಟುಕೊಂಡಿದ್ದ ಭಾವನೆ, ಅಲ್ಲಿನ ಚಟುವಟಿಕೆಗಳಿಗೆ ಪ್ರೇರಕರಾಗಿಯೂ ಇರುತ್ತಿದ್ದ ರೀತಿಯನ್ನು ಕುರಿತು ಒಂದು ಲೇಖನ ಬರೆದಿದ್ದಾರೆ. ತಮ್ಮ ಕಾರ್ಖಾನೆಯ ತುಂಬು ಕೆಲಸಗಳ ನಡುವೆ ಹೀಗೆ ಸಾಹಿತ್ಯದ ಕೃಷಿಯನ್ನು ನಡೆಸಿಕೊಂಡು ಬರುತ್ತಿರುವುದು ಅವರ ಕಾರ್ಯ ದಕ್ಷತೆಗೆ ಕುರುಹಾಗಿದೆ. ಅವರಿಂದ ಇನ್ನು ಹಲವಾರು ತಾಂತ್ರಿಕ ವಿಷಯಗಳನ್ನು ಕುರಿತು ಬರವಣಿಗೆ ಸಾಗಬೇಕಾಗಿದೆ. ಅವರ ಕಾರ್ಯಕ್ಷೇತ್ರ ದೊಡ್ಡದು. ವಿಸ್ತಾರವಾದ ಅನು ಭವ ಸಹಜ. ಅನುಭವಗಳಿಗೆ ಬರಹದ ರೂಪಕೊಟ್ಟಲ್ಲಿ ಅದು ಎಲ್ಲರ ಪಾಲಿನದಾಗು ತ್ತದೆ. ಕಾಲ, ಅವಕಾಶ ಎರಡೂ ಒದಗಿಬರಲಿ ಎಂದು ಹಾರೈಸೋಣವೇ ?

# ನಮ್ಮ ಹೊ. ಶ್ರೀನಿವಾಸಯ್ಯ

ಬಿ. ಎಸ್. ಗುಂಡೂರಾವ್

‘ಹೊ’ ಎಂಬ ಮೊದಲ ಅಕ್ಷರ ಶ್ರೀನಿವಾಸಯ್ಯನವರ ಹೆಸರಿನ ಇನಿಷಿಯಲ್. ಅವರ ಪೂಜ್ಯ ತಂದೆಯವರು ಶ್ರೀ ಹೊನ್ನಪ್ಪನವರ ಹೆಸರಿನ ಮೊದಲ ಅಕ್ಷರ ಅದು. ಆ ಅಕ್ಷರವು ಶ್ರೀನಿವಾಸಯ್ಯನವರ ವ್ಯಕ್ತಿತ್ವವನ್ನು ಸೂಚಿಸುತ್ತದೆ. ಈ ರೀತಿಯ ಹೊಂದಾಣಿಕೆ ಅಪರೂಪ. ‘ಹೊ’ ಎಂಬಕ್ಷರ ‘ಹೊನ್ನು’ ಎನ್ನುವುದರ ಮೊದಲ ಅಕ್ಷರ ಬರೆಯುವಾಗ ಕಾಗುಣಿತ ತಪ್ಪಿದರೆ ‘ಹೂ’ ಎಂದಾಗುತ್ತದೆ. ‘ಹೂ” ಎಂದಾದರೂ ಅದವರ ಹೃದಯವೇ, ಹೀಗೆ ಆ ಅಕ್ಷರ ಸಾರ್ಥಕ, ಅನ್ವರ್ಥ.

ಚಿನ್ನಕ್ಕೆ ತುಕ್ಕುಹಿಡಿಯುವುದುಂಟೆ ? ಅದರ ಬಣ್ಣ ಮಲಿನವಾಗುವುದುಂಟೆ ? ಅದಕ್ಕೆ ಅದು ಲೋಹರಾಜ. ಶ್ರೀನಿವಾಸಯ್ಯನವರು ಅಪ್ಪಟ ಚಿನ್ನ. ಹೊನ್ನಪ್ಪನವರ ಮಗನಾಗಿ ಚಿನ್ನವಾಗಿ ಹುಟ್ಟಿದರು. ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ, ಡಾ|| ಜಿ. ಪಿ. ರಾಜರತ್ನಂ ಮುಂತಾದವರ ಸಂಪರ್ಕದಿಂದ, ಸ್ವಪ್ರಯತ್ನದಿಂದ ಅಪರಂಜಿಯಾಗಿ ಬೆಳೆದರು, ತಮ್ಮ ವ್ಯಕ್ತಿತ್ವದ ಬೆಳವಣಿಗೆಗೆ ಈ ಇಬ್ಬರು ಮಹಾನಾಯಕ ಪ್ರಭಾವವನ್ನು ಶ್ರೀನಿವಾಸಯ್ಯನವರು ಒಪ್ಪುತ್ತಾರೆ. ಆದರೆ ಅಂತಃ ಸತ್ವ ಇಲ್ಲದಿದ್ದರೆ ನಾನು ‘ಅಪರಂಜಿಯಾಗಬೇಕು” ಎಂಬುವ ಛಲವಿಲ್ಲದೆ ಹೋದರೆ ಆ ಕಥೆಯೇ ಬೇರೆ. ಈ ಸತ್ವ-ಛಲಗಳಿಂದ ಇಂದು ಶ್ರೀನಿವಾಸಯ್ಯನವರು ನಮ್ಮ ಪಾಲಿಗೆ ಅಪರಂಜಿ, ಅನರ್ಘ್ಯ ರತ್ನ ಅವರ ಶೀಲ ಚಾರಿತ್ರ್ಯಗಳು ಶುದ್ಧ. ಅವರ ನಡೆನುಡಿ ಸರಳ ಅವರ ಕಾರ್ಯ, ವಿಚಕ್ಷಣೆಯಿಂದ ಕೂಡಿದ್ದು, ಕೆಲಸದಲ್ಲಿ ಅವರು ಕರ್ಮಯೋಗಿ. ಹಾಗೆಯೇ ಜನರನ್ನು ಜತೆಗೆ ಸೇರಿಸಿಕೊಂಡು ಕೆಲಸಮಾಡಿಸುವುದರಲ್ಲಿ ಪಾರ್ಥಸಾರಥಿಯಾದ ಶ್ರೀನಿವಾಸನ ನೆನಪು ಮೂಡಿಸುವರು. ಅವರು ಕಟ್ಟಿದ ಸಂಘ ಸಂಸ್ಥೆಗಳೆಷ್ಟು ? ಗೆಳೆಯರ ಬಳಗವೇನು ? ಪ್ರಾರಂಭಿಸಿದ ಉದ್ಯಮಗಳೇನು ? ಅವರು ಕೆಲಸಮಾಡುತ್ತಿರುವ ರೈಲ್ ಕೋಚ್ ಕಾರ್ಖಾನೆಯ ಕಾರ್ಮಿಕ ವರ್ಗವೇನು ? ಈ ಎಲ್ಲ ಸಂಘಟನೆಯ ಹಿಂದೆ ಇರುವುದು ಶ್ರೀನಿವಾಸಯ್ಯನವರ ವ್ಯಕ್ತಿತ್ವದ ಛಾಪು. ಅವರು ನಮಗೆ-ಗಾಂಧೀ ಸಾಹಿತ್ಯ ಸಂಘದ ಗೆಳೆಯರಿಗೆ ಅಣ್ಣ. ಆದರೂ ಅಣ್ಣನ ದರ್ಪ ಇಲ್ಲ, ವಾತ್ಸಲ್ಯ ಇದೆ.

ಗುರಿ ಸಾಧನೆಯತ್ತ ನಿಷ್ಠೆಯಿಂದ ಮುಂದುವರಿಯುವುದು ಅವರ ಶೀಲ-ಸ್ವಭಾವ.

ಅದಕ್ಕೆ ಅವರ ಕೃತಿಯೇ ಸಾಕ್ಷಿ. ಅವರು ವೃತ್ತಿಯಿಂದ ಇಂಜನಿಯರು. ಪ್ರವೃತ್ತಿಯಿಂದ ಸಮಾಜ ಸೇವಕರು, ಸಾಹಿತಿಗಳು. ಈ ಕ್ಷೇತ್ರ ಮೂರರಲ್ಲೂ ಒಂದು ಜಾರುವದಾರಿ. ಇವರಲ್ಲಿ ನಡೆಯುವವನ ಕಾಲುಗಳಲ್ಲಿ ಪಾದದಿಂದ ತೊಡೆಯ ಸ್ನಾಯುಗಳವರೆಗೆ ಅಪಾರವಾದ ಕಸುವು ಇರಬೇಕು. ಅದನ್ನು ಶ್ರೀನಿವಾಸಯ್ಯನವರಿಗ ಒದಗಿಸುವುದು ಅವರ ಶೀಲ ಪ್ರಜ್ಞೆ, ಅದಕ್ಕೆ ಅವರು ನಡೆಸುವ ಅಧ್ಯಯನ ಶರ್ಮಾಜಿಯವರ ಕಾಲದಲ್ಲಿ, ಅವರೊಡನೆ ಕಳೆದ ದಿನಗಳ ಡೈರಿಯ ಸಮಾಲೋಕನ. ತಾವು ಬರೆದದ್ದನ್ನು ತಾವೇ ಪದೇ ಪದೇ ಪರೀಕ್ಷಿಸುವ ಆರೋಗ್ಯಕರ ಅಭ್ಯಾಸ ಇವು ಅವರಿಗೆ ಸಹಾಯ ಮಾಡಿವೆ. ಹಾಗಾಗಿ ಅವರ ಪ್ರವಾಸ ಕಥನವೇ ಇರಲಿ, ಪ್ರಕೃತಿ-ಜೀವನದ ಕೃತಿಯೇ ಇರಲಿ ಸಾಹಿತ್ಯವಾಗಿವೆ. ಈ ಮಾತಿನಿಂದ ಅವರ ಲೇಖನ ಸಾಮರ್ಥ್ಯವನ್ನು ನಾನು ಕಡಿಮೆಯೆಂದು ಹೇಳುತ್ತಿಲ್ಲ. ಅವರ ಎಚ್ಚರವನ್ನು ಹೇಳುತ್ತಿದ್ದೇನೆ.

ಅವರ ಶ್ರಮ, ಸಾಧನೆಯ ಪ್ರತೀಕವಾಗಿ ಅವರು ಕಟ್ಟಿದ ಸಂಘ ಸಂಸ್ಥೆಗಳಿವೆ. ಗೆಳೆಯರ ಬಳಗವಿದೆ.

ಶ್ರೀನಿವಾಸಯ್ಯನವರು ಒಂದು 'ಹೂ'. ಒಂದು ಸುಂದರವಾದ, ಪರಿಮಳಿಸುವ ಹೂ. ಅವರಲ್ಲಿ ರೂಪ, ಗುಣ, ಗಂಧಮೂರೂ, ಇವೆ. ಅವರ ಮುಖ ಸದಾ ನಗುವ ಹೂ. ಅವರು ಮಾತನಾಡಿದರೆ ಅದು ನಗುವೇ. ಮಾತಿನಲ್ಲಿಯೇ ಅಚ್ಚು-ಕಟ್ಟು. ಅವರು ಯಾವ ಸಮಾರಂಭಕ್ಕಾಗಲೀ ಪೂರ್ವಸಿದ್ಧತೆಯಿಲ್ಲದೇ ಹೋಗುವುದಿಲ್ಲ. ಅಲ್ಲಿ ಅವರ ಮಾತನ್ನು ಗಮನ ವಿಟ್ಟು ಕೇಳಿದವರಿಗೆ ಜೀವನ ಮಾರ್ಗ ಕಂಡಿತು. ನಮ್ಮ ಶಾಲೆಯ ವಾರ್ಷಿಕೋತ್ಸವಕ್ಕೆ ಅವರನ್ನು ಆಹ್ವಾನಿಸಿದೆ. ಫೋನಿನ ಮೂಲಕವೇ ಒಪ್ಪಿದರು ತಾವೇ ಬಂದರು ವಿದ್ಯಾರ್ಥಿಗಳು ಅಧ್ಯಯನ ಹೇಗೆ ಮಾಡಬೇಕು ಅರ್ಥಕೋಶಗಳನ್ನು ಹೇಗೆ ಬಳಸಬೇಕು, ವ್ಯಾಯಾಮ ಹೇಗೆ ಮಾಡಬೇಕು. ಆಹಾರ ಸೇವನೆ ಹೇಗೆ ? ಇತ್ಯಾದಿಗಳನ್ನು ವಿವರಿಸಿದರು. ಆಡುವ ಮಾತು ಕೇಳುವವರಿಗೆ ಉಪಯುಕ್ತ ಆಗಬೇಕು ಎನ್ನುವುದು ಅವರ ಆಸೆ.

ಈ ಗುಣ ಅವರು 'ಹೂ" ಎನ್ನುವುದನ್ನು ತೋರಿಸುತ್ತದೆ. Mine is but a flower's wish, to leave some seeds behind' ಎಂದ ಹಾಗೆ ನಿತ್ಯಜೀವನದಲ್ಲಿ ಅವರು ಧ್ಯೇಯವಾದಿ, ಕೆಲಸದಲ್ಲಿ ಅವರು ಕರ್ಮಯೋಗಿ. ಗೆಳೆಯರಿಗೆ ಅವರು 'ಹೊ" (ಎಂದರೆ ಹೊನ್ನ-ಚಿನ್ನ).

ಇಂತಹ ನಮ್ಮ ಶ್ರೀನಿವಾಸಯ್ಯನವರಿಗೆ ಅವರ ಗೆಳೆಯರು ಸಲ್ಲಿಸಲಿರುವ ಗೌರವದ ಪುಷ್ಪಹಾರಕ್ಕೆ ನನ್ನದೂ ಒಂದು ಚಿಕ್ಕ ಪುಷ್ಪವನ್ನು ಸೇರಿಸಲು ಸಾಧ್ಯವಾದುದಕ್ಕೆ ತುಂಬ ಸಂತೋಷವಾಗಿದೆ.

# ಶ್ರಮಜೀವಿ

---

**ಕೆ. ಹೆಚ್. ರಂಗಯ್ಯ**

ಶ್ರೀ ಹೊ. ಶ್ರೀನಿವಾಸಯ್ಯನವರನ್ನು ನಾನು ನೋಡಿದ್ದು ರೈಲ್ ಕೋಚ್ ಕಾರ್ಖಾನೆಯನ್ನು ಸೇರಿದ ಮೇಲೆ, 1965ರಲ್ಲಿ. ಅದೂ ನಾನು ಅವರು ಕೆಲಸ ಮಾಡುತ್ತಿದ್ದ ಡಿಸೈನ್ ಡಿಪಾರ್ಟ್‌ಮೆಂಟ್‌ಗೆ ನನ್ನನ್ನು ಪೋಸ್ಟ್ ಮಾಡಿದಾಗ ಒಂದು ತರಹ ಸಂತೋಷವಾಯಿತು. ಸುಮಾರು ಒಂದು ವರ್ಷ ಅವರ ಹತ್ತಿರ ಕೆಲಸ ಮಾಡಿದ ಮೇಲೆ ಒಂದು ದಿನ ನನ್ನನ್ನು ಕರೆದು, ಕೆಲಸದಿಂದ ಮನೆಗೆ ಹೋದಮೇಲೆ ಏನು ಮಾಡುತ್ತಿಯಾ? ಎಂದು ಕೇಳಿದರು. ಮನೆಗೆ ಹೋದಮೇಲೆ ಏನೂ ಕೆಲಸ ವಿಲ್ಲ ಎಂದಾಗ, ಮಲ್ಲೇಶ್ವರಂ ೮ನೇ ಕ್ರಾಸ್‌ನಲ್ಲಿ ಗಾಂಧೀ ಸಾಹಿತ್ಯ ಸಂಘ ಎಂಬ ಸಂಸ್ಥೆ ಇದೆ, ಸಾಯಂಕಾಲ ಆರು ಗಂಟೆಗೆ ಅಲ್ಲಿಗೆ ಬಾ ಎಂದು ಹೇಳಿದರು. ನಾನು ಅಲ್ಲಿಗೆ ಹೋದಾಗ ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮರು (ಈಗ ದಿವಂಗತರು), ಸೀಲತ್ತಹಳ್ಳಿ ಕಸ್ತೂರಿ, ಎಂ. ಜಿ. ಕೃಷ್ಣ, ಹಾಗೂ ರಮಾಕಾಂತ್ ಮುಂತಾದವರು ಏನೇನೋ ಮಾತನಾಡುತ್ತಿದ್ದರು. ನಾನು ಹೋದಮೇಲೆ ಶ್ರೀನಿವಾಸಯ್ಯನವರು ನನ್ನ ಪರಿಚಯ ಮಾಡಿ ಕೊಟ್ಟು ನಾಳೆಯಿಂದ ಈತ ಇಲ್ಲಿಗೆ ಬರುತ್ತಾನೆ, ಏನಾದರು ಕೆಲಸ ಕೊಡಿ ಎಂದು ಹೇಳಿದರು. ಅಂದಿನಿಂದ ಇಂದಿನವರೆಗೂ ನನಗೂ ಗಾಂಧೀ ಸಾಹಿತ್ಯ ಸಂಘಕ್ಕೂ ನಂಟು ಬೆಳೆದು ಬಂದಿದೆ, ಮತ್ತು ನಾನೀಗ ಅಲ್ಲಿಯೇ ವಾಸವಾಗಿದ್ದೇನೆ.

ಗಾಂಧೀ ಸಾಹಿತ್ಯ ಸಂಘದ ಅಂಗ ಸಂಸ್ಥೆಯಾದ 'ಪ್ರಕೃತಿ ಜೀವನ ಕೇಂದ್ರ'ದಲ್ಲಿ ಅವರ ಸಹ ಕಾರ್ಯದರ್ಶಿಯಾಗಿ ಸುಮಾರು ಹತ್ತು ವರ್ಷಗಳ ಕಾಲ ಕೆಲಸ ಮಾಡಿದ ಮೇಲೆ ಈಗ ಅದರ ಒಬ್ಬ ಧರ್ಮದರ್ಶಿಯೂ ಆಗಿದ್ದೇನೆ. ಇದಕ್ಕೆಲ್ಲ ಮೂಲ ಕಾರಣ ಶ್ರೀ ಹೊ. ಶ್ರೀನಿವಾಸಯ್ಯನವರು. ಅಂದು ಅವರು ನನ್ನನ್ನು ಈ ಸಂಘಕ್ಕೆ ಸೇರಿಸದಿದ್ದಿದ್ದರೆ ಇಂದು ನಾನೊಬ್ಬ ಉಂಡಾಡಿಗುಂಡನಾಗಿ, ಕೆಲಸಕ್ಕೆ ಬಾರದ ಮನುಷ್ಯನಾಗಿ 'ಕೂಪ ಮಂಡೂಕ' ದಂತೆ ಇದೇ ಪ್ರಪಂಚವೆಂದು ಕಾಲಹರಣ ಮಾಡುತ್ತಿದ್ದೆನೇನೋ? ನನ್ನನ್ನು ಬೆಳಕಿಗೆ ತಂದು ನಾಲ್ಕು ಜನಕ್ಕೆ ಪರಿಚಯಿಸಿ ಮಾರ್ಗದರ್ಶನ ನೀಡಿ ಮೇಲಕ್ಕೆ ತಂದವರು ಶ್ರೀ ಹೊ. ಶ್ರೀನಿವಾಸಯ್ಯನವರು. ಇವರ ಬಗ್ಗೆ ಒಂದು ಬೃಹತ್ ಗ್ರಂಥವನ್ನೇ ಬರೆಯ ಬಹುದು, ಅಷ್ಟು ದೊಡ್ಡದು ಅವರ ಕಾರ್ಯಕ್ಷೇತ್ರ. ಶ್ರೀಯುತರು ಬಡ ಕುಟುಂಬದಲ್ಲಿ ಹುಟ್ಟಿ ಕಷ್ಟದಿಂದ ವಿದ್ಯಾ

ಭ್ಯಾಸ ಮಾಡಿ ತಮ್ಮ ಸ್ವಂತ ಪ್ರತಿಭೆ ಹಾಗೂ ಶ್ರಮದಿಂದ ಮುಂದೆ ಬಂದು ಬೈಲ್ ಕೋಚ್ ಕಾರ್ಖಾನೆಯ ಡೆಪ್ಯುಟಿ ಜನರಲ್ ಮ್ಯಾನೇಜರ್ ಆಗಿದ್ದಾರೆ. ಕಾರ್ಖಾನೆಯಲ್ಲಿ ಅಷ್ಟು ಉನ್ನತ ಹುದ್ದೆಯಲ್ಲಿದ್ದರೂ ಒಬ್ಬ ಕೆಳವರ್ಗದ ಕಾರ್ಮಿಕನಿಂದ ಹಿಡಿದು ಮೇಲ್ಮಟ್ಟದ ಆಫೀಸರ್‌ವರೆಗೂ ಒಂದೇ ತೆರನಾದ ಆದರದ ಭಾವನೆ, ಸಹಕಾರ, ಸಹಾಯ. ಕಾರ್ಖಾನೆಯಲ್ಲಿ ಈಗಲೂ ಹಳಬರು ಇವರನ್ನು 'ಅಯ್ಯಾವರು', 'ಗಾಂಧೀ, ದೊರೆ' ಪೆರಿಯವರು (ತಮಿಳರು ಕರೆಯುವ ರೀತಿ) ಮುಂತಾಗಿ ಕರೆಯುತ್ತಾರೆ. ಅಂದರೆ ಎಲ್ಲಾ ಕಾರ್ಮಿಕರಿಗೂ ಅವರ ಮೇಲೆ ಅಷ್ಟೊಂದು ಪ್ರೀತಿ, ವಿಶ್ವಾಸ ಹಾಗೂ ಗೌರವ. ಕೆಲಸದಲ್ಲಿ ಪ್ರಾಮಾಣಿಕತೆ, ಶಿಸ್ತು, ಸಂಯಮ ಹಾಗೂ ರೀತಿ ನೀತಿಗಳನ್ನು ಕಲಿಯಬೇಕಾದರೆ ಶ್ರೀನಿವಾಸಯ್ಯನವರಲ್ಲಿ ಕಲಿಯಬೇಕು. ಬೆಳಿಗ್ಗೆ 9 ಗಂಟೆಗೆ ಕಾರ್ಖಾನೆಗೆ ಬಂದರೆ ಸಂಜೆ 5–30ರ ವರೆಗೂ ಬಿಡುವಿಲ್ಲದ ದುಡಿತ, ಶಿಸ್ತಿನ ಸಿಪಾಯಿ. ಒಂದು ನಿಮಿಷವನ್ನೂ ವ್ಯರ್ಥ ಮಾಡುವವರಲ್ಲ. ಸೋಮಾರಿತನ ಒಗ್ಗದು, ಕೆಲಸಕ್ಕೆ ಪ್ರಾಧಾನ್ಯತೆ, ಕಾರ್ಖಾನೆ ಪ್ರತಿಯೊಬ್ಬರಿಗೂ ಸೇರಿದ್ದು, ಕಾರ್ಮಿಕನೂ ಇದರ ಪಾಲುದಾರ, ಏನೇ ಒಳ್ಳೆಯದು, ಕೆಟ್ಟದ್ದು ಆದರೆ ಅದಕೆ ಅವನೂ ಸಮಭಾಗಿ. ಇದು ಅವರ ಸಂದೇಶ.

ಕಾರ್ಖಾನೆಯಿಂದ ಮನೆಗೆ ಬಂದರೆ ಆಹ್ವಾನಿತರ ಭೇಟಿ. ಯಾವ ವರ್ಗದ ಜನರೇ ಆಗಲಿ, ಎಲ್ಲರಿಗೂ ಒಂದೇ ತೆರನಾದ ಆಹ್ವಾನ. ಮೇಲು ಕೀಳೆಂಬ ಭೇದಭಾವವಿಲ್ಲ. ಯಾರು, ಏನಾಗಬೇಕು ಎಂದು ಕೇಳಿ ಕುಳ್ಳಿರಿಸಿ ಕಾಫೀ, ಟೀ, ಅಥವಾ ಯಾವುದಾದರೂ ಹಣ್ಣಿನ ರಸ ಕೊಟ್ಟು ಅವರ ಕಷ್ಟ ಸುಖಗಳನ್ನು ವಿಚಾರಿಸಿ ಕಳಿಸುವುದು ಇದು ಅವರ ದೊಡ್ಡಗುಣ. ಆಮೇಲೆ ಸಂಘ ಸಂಸ್ಥೆಗಳ ಕೆಲಸ. ಅದು ರಾತ್ರಿ 10 ಗಂಟೆಯಾದರೂ ಆಗಬಹುದು, 11 ಗಂಟೆಯಾದರೂ ಹೆಚ್ಚೇನಿಲ್ಲ. ಮಲ್ಲೇಶ್ವರದ ಗಾಂಧೀ ಸಾಹಿತ್ಯ ಸಂಘ 1942 ರಲ್ಲಿ ಸುಮಾರು 40 ಪುಸ್ತಕಗಳಿಂದ ಶ್ರೀಯುತರ ಮನೆಯಲ್ಲಿ ಸ್ಥಾಪಿತವಾಗಿ ಇಂದು ಇದು ಒಂದು ಬೃಹತ್ ಸಂಸ್ಥೆಯಾಗಿ ಸುಮಾರು 10 ಸಾವಿರಕ್ಕೂ ಹೆಚ್ಚು ಪುಸ್ತಕಗಳನ್ನು ಹೊಂದಿರುವ ಒಂದು ಸಾರ್ವಜನಿಕ ಸಂಸ್ಥೆಯಾಗಿದೆ. ಇದಕ್ಕೆ ಹೊ. ಶ್ರೀಯವರ ಕಾಣಿಕೆ ಅಪಾರ. ಶ್ರೀರಾಮ ಸಹಕಾರಿ ಬ್ಯಾಂಕ್, ಶ್ರೀ ಆಂಜನೇಯ ಸಹಕಾರಿ ಬ್ಯಾಂಕ್, ಪ್ರಕೃತಿಜೀವನ ಕೇಂದ್ರ, ಕರ್ನಾಟಕ ಪ್ರದೇಶ ಪ್ರಾಕೃತಿಕ ಚಿಕಿತ್ಸಾ ಪರಿಷತ್, ಆದಿ ಚುಂಚನಗಿರಿ ಮಠ, ಒಕ್ಕಲಿಗರ ಸಂಘ, ಬೆಂಗಳೂರು ಎಜುಕೇಶನ್ ಸೊಸೈಟಿ ಮುಂತಾದ ಸಂಸ್ಥೆಗಳ ಸ್ಥಾಪಿತರಲ್ಲೊಬ್ಬರಾಗಿ ಅವುಗಳ ಅಧ್ಯಕ್ಷ, ಉಪಾಧ್ಯಕ್ಷ, ಕೋಶಾಧಿಕಾರಿ ಮುಂತಾದ ಪದವಿಗಳಲ್ಲಿದ್ದು, ದಕ್ಷತೆಯಿಂದ ಆಡಳಿತ ನಡೆಸಿ ಅವುಗಳ ಪುರೋಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ. ಇನ್ನೂ ಧಾರ್ಮಿಕ ಸಂಸ್ಥೆಗಳ ವಿಚಾರದಲ್ಲಿ ಶ್ರೀಯುತರಿಗೆ ತುಂಬಾ ಗೌರವ ಮತ್ತು ಕಳಕಳಿ. ಜಕ್ಕಸಂದ್ರ ಶ್ರೀ ಕೋಡಿ ಆಂಜನೇಯ ಸ್ವಾಮಿ ದೇವಸ್ಥಾನ,

ಲಾಲ್‌ಬಾಗ್ ಶ್ರೀ ವೆಂಕಟರಮಣ ಸ್ವಾಮಿ ದೇವಸ್ಥಾನ, ಶ್ರೀ ಮಲ್ಲಿಕಾರ್ಜುನ ಸ್ವಾಮಿ ದೇವಸ್ಥಾನಗಳ ಧರ್ಮದರ್ಶಿ ಹಾಗೂ ಸಂಚಾಲಕರಾಗಿ ಅವುಗಳ ಜೀರ್ಣೋದ್ಧಾರಕ್ಕಾಗಿ ಶ್ರಮಿಸಿದ್ದಾರೆ. ಈಗಲೂ ಶ್ರಮಿಸುತ್ತಿದ್ದಾರೆ.

ಶ್ರೀಯುತರು ಕಟ್ಟಾ ಸಸ್ಯಾಹಾರಿಗಳು. ಪ್ರಕೃತಿಜೀವನ ಪ್ರೇಮಿಗಳು. ಬೆಳಿಗ್ಗೆ 5 ಗಂಟೆಗೆ ಎದ್ದು ಸುಮಾರು 2 ಮೈಲಿ ವಾಯು ವಿಹಾರ ಮುಗಿಸಿ ಸೂರ್ಯ ನಮಸ್ಕಾರ, ಯೋಗಾಸನಗಳನ್ನು ಮಾಡಿ ಸ್ನಾನ ಪೂಜೆ ಮಾಡಿ ಒಂದು ಲೋಟ ನಿಂಬೆ ಹಣ್ಣಿನ ರಸ ಕುಡಿದು ಕಾರ್ಖಾನೆಗೆ ಬಂದರೆ ಮತ್ತೆ 12-30 ಕ್ಕೆ ತಾವೇ ಮನೆಯಿಂದ ತರುವ ಊಟ, ಅದರಲ್ಲಿ 2 ಸುಕ್ಕಾ (ಒಣ) ಚಪಾತಿ, ಬೇಯಿಸಿದ ಹಾಗೂ ಹಸಿ ತರಕಾರಿ ಪಲ್ಯಗಳು, ಸೊಪ್ಪು ಹಾಗೂ ಒಂದು ಬಾಟಲ್ ಮಜ್ಜಿಗೆ, ಯಾವುದಾದರೂ ಒಂದು ಹಣ್ಣು. ಸಂಜೆ ಮನೆಗೆ ಬಂದರೆ ತಣ್ಣೀರಿನ ಸ್ನಾನ, ಊಟ ಮತ್ತು ಸಂಘ ಸಂಸ್ಥೆಗಳ ಕೆಲಸ, ಇದು ಅವರ ದಿನಚರಿ.

ಇವರು ಪುಸ್ತಕ ಪ್ರೇಮಿಗಳು, ಇವರ ಮನೆಯಲ್ಲಿ ಒಂದು ದೊಡ್ಡ ಪುಸ್ತಕ ಭಂಡಾರವೇ ಇವೆ. ಸಣ್ಣ ಮಕ್ಕಳಿಂದ ಹಿಡಿದು ದೊಡ್ಡವರೂ ಓದುವ ಪುಸ್ತಕಗಳು, ಕಥೆ, ಕಾದಂಬರಿ, ಗಾಂಧೀ ಸಾಹಿತ್ಯ, ತಾಂತ್ರಿಕ, ಪ್ರಕೃತಿ ಜೀವನಕ್ಕೆ ಸಂಬಂಧಿಸಿದ ಪುಸ್ತಕಗಳು ತುಂಬಿ ಇವೆ. ಅವುಗಳನ್ನು ಜೋಡಿಸಿರುವ ಜಾಣ್ಮೆ, ಅವುಗಳಿಗೆ ಕ್ರಮಸಂಖ್ಯೆ ನೀಡಿ ಹೆಸರಿನ ಪಟ್ಟಿ ತಯಾರಿಸಿರುವ ರೀತಿ ಇವುಗಳು ಯಾವ ಗ್ರಂಥಾಲಯಕ್ಕೂ ಕಮ್ಮಿ ಇಲ್ಲದಂತಿವೆ. ಯಾವುದಾದರೂ ಹೊಸ ಪುಸ್ತಕ ಪ್ರಕಟವಾದರೆ ಸಾಕು, ಅದು ಇವರ ಗ್ರಂಥ ಭಂಡಾರಕ್ಕೆ ಸೇರಲೇಬೇಕು. ಬೆಲೆ ಎಷ್ಟಾದರೂ ಸರಿ ಅದನ್ನು ಕೊಳ್ಳುವುದು ಇವರ ಹವ್ಯಾಸ.

ಶ್ರೀ ಹೊ. ಶ್ರೀನಿವಾಸಯ್ಯನವರಲ್ಲಿ ನಾನು ನೋಡಿದ ಮತ್ತೊಂದು ದೊಡ್ಡ ಗುಣ ಎಂದರೆ, ನಮ್ಮ ದೇಶಕ್ಕಾಗಿ ದುಡಿದ ಹಿರಿಯರ ವಿಚಾರದಲ್ಲಿ ಅವರು ಇಟ್ಟಿರುವ ಅಪಾರ ಗೌರವ. ಸರ್. ಎಂ. ವಿಶ್ವೇಶ್ವರಯ್ಯನವರ ಬಗ್ಗೆಯಂತೂ ಅವರಿಗೆ ತುಂಬಾ ಗೌರವ. ಹಿಂದೆ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಗಲಭೆಯಾಗಿ, ವಿದ್ಯಾರ್ಥಿಗಳು ಸರ್. ಎಂ. ವಿ.ಯವರ ಭಾವಚಿತ್ರವನ್ನು ಕೆಳಕ್ಕೆ ಎತ್ತಿಹಾಕಿ ಕಾಲಿನಲ್ಲಿ ತುಳಿದರು ಎಂಬ ವಿಚಾರವನ್ನು ಕೇಳಿ ಶ್ರೀಯುತರು ಕಣ್ಣೀರು ಹಾಕಿದ್ದನ್ನು ನಾನು ನೋಡಿದ್ದೇನೆ. ಈಗಲೂ ಕಛೇರಿಯ ಹಾಗೂ ಅವರ ಮನೆಯಲ್ಲಿ ಸರ್. ಎಂ. ವಿ.ಯವರ ಭಾವ ಚಿತ್ರಗಳಿಗೆ ಪ್ರಾಧಾನ್ಯತೆ. ನಾವೆಲ್ಲಾ ಪ್ರತಿವರ್ಷ ಬೆಂಗಳೂರಿನಿಂದ ಹೊರಗಡೆ ಯಾವುದಾದರೂ ಪುಣ್ಯ ಕ್ಷೇತ್ರಗಳಿಗೆ ಹೋಗಿ ಬರುವ ರೂಢಿ. ಹಾಗೆ ಹೋದಾಗ

ಊಟ, ತಿಂಡಿ ಮಾಡುವಾಗ ಎಲ್ಲರಿಗಿಂತ ಮೊದಲು ಇವರು ವಿಚಾರಿಸಿಕೊಳ್ಳುವುದು, ಬಸ್ಸಿನ ಡ್ರೈವರ್ ಹಾಗೂ ಕ್ಲೀನರ್‌ಗಳನ್ನು. ಅವರುಗಳು ಊಟಕ್ಕೆ ಕುಳಿತಿದ್ದಾರೆಯೆ ನೋಡಿ ಇಲ್ಲದಿದ್ದರೆ ಅವರನ್ನು ಮೊದಲು ಕರೆಯಿರಿ ಎಂದು ಹೇಳುವುದನ್ನು ನಾವು ನೋಡಿದ್ದೇವೆ.

ಶ್ರೀಯುತರು ಪ್ರಾಮಾಣಿಕತೆಗೆ ತುಂಬಾ ಬೆಲೆ ಕೊಡುತ್ತಾರೆ. ಸೋಮಾರಿತನ ಕಳ್ಳತನ, ಸುಳ್ಳು, ಚಾಡಿ ಹೇಳುವುದು ಇವುಗಳನ್ನು ಕಂಡರೆ ಅವರಿಗಾಗದು. ನಾವು ಮಾಡಿರುವುದು ತಪ್ಪು ಎಂದು ಕಂಡು ಬಂದಾಗ ಅದನ್ನು ಒಪ್ಪಿಕೊಂಡರೆ ಸಾಕು, ಸುಪ್ರೀತರಾಗುತ್ತಾರೆ. ಬುದ್ಧಿ ಹೇಳಿ ತಿದ್ದುತ್ತಾರೆ. ಹೊ. ಶ್ರೀಯವರು ಶ್ರಮ ಜೀವಿಗಳೇ. ಕೆಲಸ ಯಾವುದಾದರೂ ಇರಲಿ ಅದನ್ನು ಶ್ರಮವಹಿಸಿ ಪ್ರಾಮಾಣಿಕತೆಯಿಂದ ನಿರ್ವಹಿಸುವುದರಿಂದಲೇ ಅವರು ಎಲ್ಲರಂಗಗಳಲ್ಲಿಯೂ ಯಶಸ್ಸುಕಂಡಿದ್ದಾರೆ.



# ಸಹಕಾರ ರಂಗದಲ್ಲಿ ಹೊ. ಶ್ರೀ ರವರ ಸಕ್ರಿಯ ಪಾತ್ರ

ಬಿ. ಎಸ್. ಶಂಕರ್

ಜನತೆಯ ಆರ್ಥಿಕ ಕಲ್ಯಾಣ ಸಾಧನೆಗಾಗಿ ಸಹಕಾರವು ಪ್ರಮುಖ ಹಾಗೂ ಸುವರ್ಣ ಮಾರ್ಗ ಎಂಬುದನ್ನು ಪ್ರಾಯೋಗಿಕವಾಗಿ ಮನದಟ್ಟು ಮಾಡಿಸುವ ಸಲುವಾಗಿ ಶ್ರೀ ಹೊ. ಶ್ರೀನಿವಾಸಯ್ಯನವರು ಪೂಜ್ಯ ದಿವಂಗತ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮಾಜಿರವರ ನೇತೃತ್ವದಲ್ಲಿ ಒದಗಿಸಿಕೊಟ್ಟ ಎರಡು ಸುವರ್ಣ ಪಾರಿತೋಷಕ ಸಂಸ್ಥೆಗಳು ಎಂದರೆ ಶ್ರೀ ರಾಮ ಸಹಕಾರ ಬ್ಯಾಂಕ್ ನಿಯಮಿತ ಮತ್ತು ಶ್ರೀ ಆಂಜನೇಯ ಸಹಕಾರ ಬ್ಯಾಂಕ್ ನಿಯಮಿತ.

ಸಹಕಾರವು ನಮ್ಮ ಈ ಭಾರತದೇಶದಲ್ಲಿ ನಿಜ ಅರ್ಥದಲ್ಲಿ 1904 ರಲ್ಲಿ ಮೊಟ್ಟ ಮೊದಲು ಆರಂಭವಾಯಿತು. ಹಾಗೂ ಮೊಟ್ಟಮೊದಲು ಸಹಕಾರಿ ಸಂಸ್ಥೆ ಭಾರತದಲ್ಲಿ ಈ ನಮ್ಮ ಕರ್ನಾಟಕದಲ್ಲಿಯೇ ಗದಗಿನಲ್ಲಿನ ಕನಗಿನಹಾಳ ಎಂಬಲ್ಲಿ ಪ್ರಾರಂಭ ವಾಯಿತು. ಆದರೂ ಕೂಡಾ ನಮಗೆ ಸಹಕಾರದ ಬಗ್ಗೆ ಆಸಕ್ತಿಯು ಇರಲಿಲ್ಲ, ನಂಬಿಕೆಯು ಇರಲಿಲ್ಲ, ಆಸಕ್ತಿ-ನಂಬಿಕೆಗಿಂತ ಹೆಚ್ಚಾಗಿ ಸಹಕಾರ ಎಂಬುದು ನಮ್ಮ ಸಾಮಾನ್ಯ ಬಡ ಜನರಿಗೆ ತಿಳಿಯದೇ ಇರಲಿಲ್ಲ. ಏಕೆಂದರೆ ಇಲ್ಲಿನ ಸುತ್ತಮುತ್ತಲಿನ ಹೆಚ್ಚಿನ ಜನರು ನಿರಕ್ಷರಸ್ಥರು ಮತ್ತು ಅನನುಭವಿಗಳು. ಈ ಸಾಮಾನ್ಯ ಜನರು ತಮ್ಮ ಬಡತನ, ಅನಕ್ಷರಸ್ಥತೆ ಮತ್ತು ಅನನುಭವದಿಂದಾಗ ತಮ್ಮ ದಿನ ನಿತ್ಯದ ಜೀವನವನ್ನು ಸಾಗಿಸುವ ಸಲುವಾಗಿ ಬಂಡವಾಳಗಾರರಲ್ಲಿಯೂ ಮತ್ತು ಖಾಸಗೀ ಲೇವಾದೇವಿಗಾರರಲ್ಲಿನ ಹಿಡಿತಕ್ಕೆ ಸಿಕ್ಕಿಸೊರಗುತ್ತಿದ್ದರು. ಈ ವೈಶಿಷ್ಟ್ಯವನ್ನು ಸೂಕ್ಷ್ಮವಾಗಿ ಗಮನಿಸಿದ ನಮ್ಮ ಶ್ರೀ ಹೊ. ಶ್ರೀನಿವಾಸಯ್ಯನವರು ಜನ ಜೀವನದ ಆರ್ಥಿಕ ಪರಿಸ್ಥಿತಿಯು ಸುಧಾರಿಸಬೇಕಾದರೆ ಪ್ರಜಾಪ್ರಭುತ್ವದ ತಳಹದಿಯಲ್ಲಿರುವ ಸಹಕಾರದಿಂದಲೇ ಸಾಧ್ಯ ಎಂಬುದನ್ನು ಸುಲಭವಾಗಿ ಶ್ರೀ ರಾಮ ಸಹಕಾರ ಬ್ಯಾಂಕ್ ಮತ್ತು ಶ್ರೀ ಆಂಜನೇಯ ಸಹಕಾರ ಬ್ಯಾಂಕ್ ಮೂಲಕವಾಗಿ ಗೋಚರಿಸಿದರು.

ಎಲ್ಲರೂ ಜೊತೆಗೂಡಿ ಎಲ್ಲರ ಏಳಿಗಾಗಿ ಮಾಡುವ ವ್ಯವಹಾರವೇ ಸಹಕಾರ. ಒಂಟಿತನಕ್ಕಿಂತ ಕೂಡಿ ಬದುಕುವ ಸಹಜೀವನವೇ ಸಂಘ ಜೀವನ.

ಇದೇ ಸಹಕಾರ, ಇಂಥ ಸುವರ್ಣಮಾರ್ಗದ ಹಾದಿಯಲ್ಲಿ ನಮ್ಮ ಈ ಬಡಜನರನ್ನು ನಡೆಸಿ ತಂದವರು ನಮ್ಮ ನೆಚ್ಚಿನ ಹೊ. ಶ್ರೀನಿವಾಸಯ್ಯನವರು. ನಮಗೆ ಈ ರೀತಿ ಮಾರ್ಗದರ್ಶಕರಾದ ಇವರಿಗೆ ನಾವು ಸದಾ ಚಿರಋಣಿಗಳು.

ಇದೆಲ್ಲಕ್ಕೂ ಮಿಗಿಲಾಗಿ ಮತ್ತು ಆಶ್ಚರ್ಯಕರವಾಗಿಯೂ ಹೇಳುವುದಾದರೆ ನಮ್ಮ ಶ್ರೀನಿವಾಸಯ್ಯನವರು ತಾಂತ್ರಿಕ ತಜ್ಞರು ಹಾಗೂ ಇವರ ಸಂಪೂರ್ಣ ಆಸಕ್ತಿ ತಾಂತ್ರಿಕ ವಿಷಯದಲ್ಲಿ ಹಾಗೂ ಇವರು ವೃತ್ತಿಯಲ್ಲಿರುವುದೂ ಕೂಡ ಘನ ಸರ್ಕಾರದಿಂದ ಸ್ಥಾಪಿತವಾದ ಸಂಸ್ಥೆ (Public Sector undertaking), ಆದರೂ ಕೂಡ ಇವರು ಸಹಕಾರದಲ್ಲಿ ಆಸಕ್ತಿಯಿಂದ ಮಹತ್ವವನ್ನು ತೋರಿಕೊಟ್ಟಿರುತ್ತಾರೆ. ಏತಕ್ಕೆ ಇವರು ಸಹಕಾರ ಚಳುವಳಿಯ ಅಭಿವೃದ್ಧಿಗೆ ಮಹತ್ವ ಕೊಟ್ಟಿದ್ದಾರೆ, ಕಾರಣವೇನು? ಎಂದು ಆಳವಾಗಿ ಯೋಚಿಸಿದರೆ ಮಾತ್ರ ಉತ್ತರ ತಿಳಿಯುತ್ತದೆ. ಶ್ರೀ ಶ್ರೀನಿವಾಸಯ್ಯನವರು ಏಕೆ ಸಹಕಾರಕ್ಕೆ ಮಹತ್ವವನ್ನು ಕೊಟ್ಟರೆಂದರೆ ಸಹಕಾರದಲ್ಲಿನ ಸಮಾನತೆ ಅಂದರೆ ಮೇಲು, ಕೀಳು, ಜಾತಿ-ವಿಜಾತಿ, ಬಡವ-ಬಲ್ಲಿದ ಎಂಬ ಭೇದಭಾವವಿಲ್ಲದಿರುವಿಕೆ, ಲಾಭದಾಸೆ ಇಲ್ಲದಿರುವಿಕೆ, ಸ್ನೇಹ, ಪರಸ್ಪರ ಸಹಾಯ (Mutual help) ನಿಸ್ವಾರ್ಥತೆ, ಸ್ವಸಹಾಯ (Self helf) ಬಡ ಜನರ ಮತ್ತು ದೀನ ದಲಿತರ ಏಳಿಗೆಗಾಗಿ ಮತ್ತು ಅದರ ಆರ್ಥಿಕ ಸಾಮಾಜಿಕ ಪುರೋಭಿವೃದ್ಧಿಗಾಗಿ ಈ ತತ್ವಗಳು ಅಡಗಿರುವುದಕ್ಕಾಗಿ ಸಹಕಾರ ತತ್ವವನ್ನು ಪ್ರಾಯೋಗಿಕವಾಗಿ (Practical) ಬಿತ್ತರಿಸಿದರು.

ನಮ್ಮ ನೆಚ್ಚಿನ ಶ್ರೀನಿವಾಸಯ್ಯನವರು ಬೆಂಗಳೂರಿನ ಮಲ್ಲೇಶ್ವರಂ ಹಾಗೂ ಸುತ್ತ ಮುತ್ತಲಿನ ಬಡಾವಣೆಗಳಲ್ಲಿನ ಬಡಜನತೆಗೆ ಆರ್ಥಿಕ ಅಭಿವೃದ್ಧಿಗಾಗಿ ಶ್ರೀರಾಮ ಸಹಕಾರ ಬ್ಯಾಂಕ್ ಸ್ಥಾಪಿಸುವ ಸಲುವಾಗಿ ದಿನಾಂಕ 16-10-1952ರಲ್ಲಿ ಅಂದಿನ ಬೆಂಗಳೂರು ಡಿವಿಜನ್ನಿನ ಡೆಪ್ಯೂಟಿ ರಿಜಿಸ್ಟ್ರಾರ್‌ರವರಲ್ಲಿ ತಾವೇ ಸ್ವತಹ ರುಜು ಮಾಡಿ ಕೇಳಿಕೊಂಡ ಅರ್ಜಿಯು ಅವರ ಸಹಕಾರ ಮನೋಭಾವನೆಗೆ ಇಂದಿಗೂ ಅಚ್ಚಳಿಯದೆ ಸಾಕ್ಷಿಯಾಗಿ ನಿಂತಿದೆ. 1952ರಲ್ಲಿ ಶ್ರೀನಿವಾಸಯ್ಯನವರು ಅವರ ಸ್ನೇಹಿತರುಗಳನ್ನೊಳಗೂಡಿ ಪ್ರಾರಂಭದಲ್ಲಿ ಬ್ಯಾಂಕಿಗೆ ಸುಮಾರು 294 ಜನರನ್ನು ಸದಸ್ಯರನ್ನಾಗಿ ಮಾಡಿ ಒಟ್ಟುಗೂಡಿಸಿದರು. ಇದರಲ್ಲಿ ಬಹು ಪಾಲು ರುಜು ಮಾಡಲು ಸಹ ಬರದ ಹೆಬ್ಬೆಟ್ಟು ಒತ್ತುವ ಬಡ ಜನರೇ ಇದ್ದರು ಎಂಬುದನ್ನು ಕಣ್ಣಾರೆ ಕಾಣಬಹುದು. ಇದರ ಮುಖ್ಯ ಉದ್ದೇಶವೇನೆಂದರೆ ಅಂಥ ಬಡ ಜನರನ್ನು ಸಹಕಾರದ ಸುವರ್ಣ ಮಾರ್ಗದಲ್ಲಿ ನಡೆಸಿತಂದು ಅವರಲ್ಲಿ ಸ್ನೇಹ, ಪರಸ್ಪರ ಸಹಾಯ, ನಿಸ್ವಾರ್ಥತೆ ಸ್ವಸಹಾಯಗಳನ್ನು ಸಹಕಾರ ಮನೋಭಾವದಿಂದ ಬೆಳೆಸಬೇಕೆಂದು

ಶ್ರೀನಿವಾಸಯ್ಯನವರ ಪೂರ್ಣ ಅಭಿಲಾಶೆಯಾಗಿತ್ತು ಎಂಬುದನ್ನು ಗುರ್ತಿಸಬಹುದು.

ಶ್ರೀನಿವಾಸಯ್ಯನವರು ಸಹಕಾರ ಚಳುವಳಿಯ ಅಭಿವೃದ್ಧಿಯನ್ನು ಕೇವಲ ಬ್ಯಾಂಕಿನ ಸ್ಥಾಪನೆಗಾಗಿ ದುಡಿದುದ್ದಲ್ಲದೆ ಬ್ಯಾಂಕಿನ ಪ್ರಗತಿಗಾಗಿಯೂ ಮತ್ತು ಎಲ್ಲಾ ಸದಸ್ಯರುಗಳ ಸಮಾನತೆಗಾಗಿ ಸ್ವಯಂ ಸೇವಕರಾಗಿಯೂ ಕೂಡ ಸಂಭಾವನೆ ಪಡೆಯದ ಬ್ಯಾಂಕಿನಲ್ಲಿ ಹಲವು ಹುದ್ದೆಗಳಲ್ಲಿ (ಕ್ಯಾಷಿಯರ್, ರಶೀತಿ ಕ್ಲಾರ್ಕ್) ಹಾಗೂ ಇನ್ನಿತರೆ ರೀತಿಯಲ್ಲಿ ನಿಸ್ವಾರ್ಥ ಸೇವೆಯನ್ನು ಸಲ್ಲಿಸಿರುತ್ತಾರೆ. ಇದೂ ಅಲ್ಲದೆ ಶ್ರೀನಿವಾಸಯ್ಯನವರು ಶ್ರೀರಾಮ ಸಹಕಾರ ಬ್ಯಾಂಕಿನಲ್ಲಿ ಗೌರವಾರ್ಥವಾಗಿ 1953-54, 1961-65ರಲ್ಲಿ ಬ್ಯಾಂಕಿನ ಉಪಾಧ್ಯಕ್ಷರಾಗಿಯೂ ಮತ್ತು 1956-60 ಮತ್ತು 1952-63ರಲ್ಲಿ ಗೌರವ ಕಾರ್ಯದರ್ಶಿಗಳಾಗಿಯೂ ಸೇವೆಯನ್ನು ಸಲ್ಲಿಸಿರುತ್ತಾರೆ.

ಶ್ರೀಯುತರು ಶ್ರೀ ಆಂಜನೇಯ ಸಹಕಾರ ಬ್ಯಾಂಕಿನ ಸಂಸ್ಥಾಪಕರೂ ಹಾಗೂ ಇವರು ಇದೇ ಬ್ಯಾಂಕಿನ ಗೌರವಾರ್ಥವಾಗಿ 1964.1968 ರವರೆವಿಗೂ ಸತತವಾಗಿ 5 ವರ್ಷಗಳ ಕಾಲ ಅಧ್ಯಕ್ಷರಾಗಿ ತಮ್ಮ ಅಪೂರ್ವ ಸೇವೆಯನ್ನು ಸಲ್ಲಿಸಿರುತ್ತಾರೆ ಮತ್ತು 1971-72ರಲ್ಲಿ ಪ್ರಗತಿ ಸಹಕಾರ ಬ್ಯಾಂಕಿನಲ್ಲಿಯೂ ಸ್ಥಾಪಕರಾಗಿಯೂ ಮತ್ತು 1971-73ರಲ್ಲಿ ಇದೇ ಬ್ಯಾಂಕಿನಲ್ಲಿ ಉಪಾಧ್ಯಕ್ಷರಾಗಿಯೂ ಸೇವೆಯನ್ನು ಸಲ್ಲಿಸಿರುತ್ತಾರೆ. ಇದೂ ಅಲ್ಲದೆ ಇನ್ನೂ ಹಲವಾರು ಸಹಕಾರ ಸಂಸ್ಥೆಗಳಲ್ಲಿ ಪ್ರಮುಖ ಸದಸ್ಯರಾಗಿ ಸಹಕಾರ ಚಳುವಳಿಯ ಯಶಸ್ವಿಗಾಗಿ ದುಡಿದಿರುತ್ತಾರೆ ಮತ್ತು ದುಡಿಯುತ್ತಿದ್ದಾರೆ. ಇವರು ಸಹಕಾರಿ ಸಂಸ್ಥೆಗಳ ಕಾರ್ಯಕಾರಿ ಸಮಿತಿ ಸದಸ್ಯರಾಗಿ ದುಡಿದುದಲ್ಲದೆ ಅನೇಕ ಸಹಕಾರಿ ಸಂಘಗಳ ಉಪಸಮಿತಿ ಸದಸ್ಯರಾಗಿಯೂ ಕೂಡ ಸಹಕಾರ ಚಳುವಳಿ ಸಾಧನೆಯ ಬಿಂಬವನ್ನು ಬೀರಿದ್ದಾರೆ. ಇಂದಿಗೂ ಕೂಡ ಅವರು ಸಹಕಾರ ರಂಗಕ್ಕೆ ಅನೇಕ ರೀತಿಯಲ್ಲಿ ಸೇವೆಯನ್ನು ಸಲ್ಲಿಸುತ್ತಿರುತ್ತಾರೆ.

ಇವರ ಇನ್ನೊಂದು ವಿಶೇಷವೆಂದರೆ ಇವರು ಇಂಜನಿಯರಿಂಗ್ ವಿದ್ಯಾಭ್ಯಾಸ ಮಾಡಿದರೂ ಸಹ ವಾಣಿಜ್ಯ ವಿದ್ಯಾಭ್ಯಾಸ ಮಾಡಿದವರಿಗಿಂತ ಹೆಚ್ಚಾಗಿ ಸಹಕಾರಿ ಲೆಖ್ಖಗಳನ್ನು ಅಂದರೆ ಜಮಾ-ಖರ್ಚು, ಲಾಭ-ನಷ್ಟ ತಖ್ತೆಗಳನ್ನು ಮತ್ತು ಆಸ್ತಿ ಜವಾಬ್ದಾರಿ ತಂಖ್ತೆಗಳನ್ನು ತಯಾರು ಮಾಡುವುದರಲ್ಲಿ ಮತ್ತು ಸಹಕಾರಿ ಲೆಖ್ಖಗಳನ್ನು ತಪಾಸಣೆ ಮಾಡುವುದರಲ್ಲಿ ಬಹಳ ನೈಪುಣ್ಯತೆಯನ್ನು ಪಡೆದಿರುತ್ತಾರೆ.

ಹೀಗೆ ಉತ್ತಮ ಸಹಕಾರಿ ಶ್ರೀನಿವಾಸಯ್ಯ.



# ಸರಳತೆಯ 'ಶ್ರೀ'

**ಸ. ಗ. ಪ್ರಧಾನ್**

ಈಗ್ಗೆ ಹತ್ತುವರ್ಷದ ಹಿಂದಿನ ಮಾತು. ನಾನು ಭಾರತ್ ಅರ್ತ್ ಮೂವಿಸ್ ಕಾರ್ಖಾನೆಗೆ ಸೇರಿದ ಹೊಸತು. ಕಾರ್ಖಾನೆಯ ಹಿರಿಯ ತಂತ್ರಜ್ಞ ಅಧಿಕಾರಿಯೊಬ್ಬರ ಬಳಿ ಕಛೇರಿಗೆ ಸಂಬಂಧಪಟ್ಟ ಯಾವುದೋ ವಿಷಯ ಚರ್ಚಿಸುತ್ತಿದ್ದೆ. ಮಾತು ಆಕಸ್ಮಾತ್ ಸಾಹಿತ್ಯದ ಕಡೆಗೂ, ಅದೂ ಕನ್ನಡ ಸಾಹಿತ್ಯದ ಕಡೆ ಅದೂ ಪ್ರವಾಸ ಸಾಹಿತ್ಯದ ಕಡೆಗೆ ಹೊರಟಿತು. ನಾನು ಸ್ವಾಭಾವಿಕವಾಗಿಯೇ ಆ ಹಿರಿಯ ಅಧಿಕಾರಿಗಳಿಗೆ ಕನ್ನಡ ಭಾಷೆಯಲ್ಲಿ ಪ್ರವಾಸ ಸಾಹಿತ್ಯ ಬಹಳ ಕಡಿಮೆ, ಇಲ್ಲವೇ ಇಲ್ಲ ಎಂದು ಹೇಳಬಹುದು ಎಂದು ಹೇಳಿದೆ. ಹಿರಿಯರಾದ ಆ ತಂತ್ರಜ್ಞರು ನನ್ನ ಕಡೆ ನೋಡಿ ನಕ್ಕು ''ಏಕೆ ಹಾಗೇ ಹೇಳುತ್ತೀರಿ'' ಎಂದರು. ''ಹಾಗೆ ಹೇಳದೆ ಮತ್ತೇನು ಕನ್ನಡದಲ್ಲಿ ಹೇಳಿಕೊಳ್ಳುವಂತಹಾ ಪ್ರವಾಸ ಸಾಹಿತ್ಯ ಯಾವುದಿದೆ'' ಎಂದೆ. ಆ ತಂತ್ರಜ್ಞರು ನಕ್ಕು ''ನಿಮಗೆ ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಬೇಕೆನಿಸಿದರೆ ನಾನು ಕೊಡುತ್ತೇನೆ' ಎಂದು ಹೇಳಿ ಹೊರಟು ಹೋದರು. ಏನೋ ಸಮಾಧಾನಕ್ಕೆ ಹೇಳುತ್ತಿದ್ದಾರೆ ಎಂದು ಸುಮ್ಮನಾದೆ.

ಮೂರನೆಯ ದಿನ ನನಗೆ ಆಶ್ಚರ್ಯ ಕಾದಿತ್ತು. ಬೆಳಿಗ್ಗೆ 9 ಗಂಟೆಗೆ ಸರಿಯಾಗಿ ಆ ತಂತ್ರಜ್ಞರ ಆಪ್ತ ಕಾರ್ಯದರ್ಶಿ ಪುಸ್ತಕವೊಂದನ್ನು ಕೊಟ್ಟು ಹೋದ. ಪುಸ್ತಕದ ಕಟ್ಟು ಬಿಚ್ಚಿದರೆ ಇನ್ನೂ ಹೆಚ್ಚಿನ ಆಶ್ಚರ್ಯ ಕಾದಿತ್ತು. ಅದು ಕನ್ನಡದಲ್ಲಿ ಪ್ರವಾಸ ಸಾಹಿತ್ಯದ ಬಗ್ಗೆ ಹಿಂದಿನ ದಿನ ನನ್ನ ಜೊತೆ ಮಾತನಾಡಿದ್ದ ತಂತ್ರಜ್ಞರೆ ಬರೆದಿರುವ ಪುಸ್ತಕ. ಯಂತ್ರ ಶಿಲ್ಪಿಯೊಬ್ಬರು ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಬರೆಯುತ್ತಾರೆನ್ನುವುದು ನನ್ನ ಕಲ್ಪನೆಗೂ ನಿಲುಕದ ವಿಷಯವಾಗಿತ್ತು ಪುಸ್ತಕದ ಹೆಸರಿನ ಕಡೆ ಕಣ್ಣಾಡಿಸಿದೆ. ಸುಂದರವಾದ, ಸರಳವಾದ ಹೆಸರು 'ನಾ ಕಂಡ ಜರ್ಮನಿ". ಪುಸ್ತಕದ ಬೆಲೆ ಕೂಡ ಹೆಚ್ಚಿಲ್ಲ, ಕೇವಲ ಮೂರು ರೂಪಾಯಿಗಳು ಮಾತ್ರ. ಸಂಜೆ ಮನೆಗೆ ಮರಳಿದ ಮೇಲೆ ಪುಸ್ತಕ ತಿರುವಿಹಾಕಿದೆ. ಉತ್ತಮವಾದ ಹಾಲು ಕಾಗದ, ಅಂದವಾದ ಮುದ್ರಣ. ಪುಸ್ತಕ ಓದಲು ಆರಂಭಿಸಿದೊಡನೆಯೇ ನನ್ನನ್ನು ಸೆಳೆದಿದ್ದು ಲೇಖಕರ ಶೈಲಿ. ಯಾವ ಶಬ್ದಾಡಂಬರವೂ ಇಲ್ಲದ ಆದರೆ ಸರಳವಾದ ಮನಮುಟ್ಟುವ ವಾಕ್ಯಗಳು. ಶಾಲಾ ಮಕ್ಕಳಿಂದ ಹಿಡಿದು ನಡುವಯಸ್ಸಿನ

ಯಾವುದೇ ಓದುಗರನ್ನಾದರೂ ಆಕರ್ಶಿಸುವಂತಹ ವಿಚಾರ ಸಾಮಗ್ರಿ ನನ್ನ ಮನಸ್ಸನ್ನು ಹಿಡಿಯಿತು. ಶೈಲಿ ಸರಳವಾಗಿದೆಯೆಂದ ಮಾತ್ರಕ್ಕೆ ಪುಸ್ತಕ ಸಾಗಾ ಲೋಟದಿಂದ ತಿರುವಿ ಹಾಕಿ ಪಕ್ಕಕ್ಕೆ ಇಡುವಂತಹ ಜಳ್ಳುವಸ್ತುವಿನಿಂದ ಕೂಡಿರಲಿಲ್ಲ. ಸಾವಕಾಶವಾಗಿ ಓದಿ ಜೀರ್ಣಿಸಿಕೊಳ್ಳುವಂತಹ ವಿಪುಲವಾದ ವಿಚಾರ ಸಂಪತ್ತಿನಿಂದ ಕೂಡಿತ್ತು. ಲೇಖಕರು ನಮ್ಮನ್ನೆಲ್ಲಾ ತಮ್ಮೊಡನೆ ಯುರೋಪು ಖಂಡಕ್ಕೆ ಕೊಂಡೊಯ್ದರು. ಅಲ್ಲಿನ ಜನ ಜೀವನ, ಆಚಾರ ವ್ಯವಹಾರ, ಮನರಂಜನೆ, ಧರ್ಮ, ಇತಿಹಾಸ ಎಲ್ಲವನ್ನೂ ತೋರಿಸಿ ಮರಳಿ ಭಾರತಕ್ಕೆ ಕರೆತಂದರು. ಈ ಲೇಖಕರ ಯಾರೆಂದು ಹೇಳುವ ಅಗತ್ಯವೇ ಇಲ್ಲ. ಅವರು ಕನ್ನಡ ಜನತೆಗೆ ಸುಪರಿಚಿತರಾದ ಹೊ. ಶ್ರೀನಿವಾಸಯ್ಯ ಅಥವಾ ಆಪ್ತರಿಗೆ ಶ್ರೀ.

ನನ್ನ ಹಾಗೂ ಶ್ರೀಮಾನ್ ಶ್ರೀನಿವಾಸಯ್ಯನವರ ಪರಿಚಯ ಕೇವಲ ಹತ್ತು ವರ್ಷಗಳಷ್ಟು ಎಳೆಯದಾದರೂ ಅವರ ಸ್ನೇಹ, ಕಪಟವರಿಯದ ಸರಳ ವ್ಯವಹಾರ, ಕೃತಕತೆಯಿಲ್ಲದ ನೇರ ಮಾತುಕತೆ, ಡಂಭಾಚಾರವಿಲ್ಲದ ದಿಟ್ಟ ವ್ಯವಹಾರ ನನ್ನ ಹಾಗೂ ಅವರ ಬಾಂಧವ್ಯ ಅನುಗಾಲದಿಂದ ಇವೆಯೇನೋ ಎನಿಸುತ್ತದೆ. ಇದು ನನ್ನೊಬ್ಬನ ಅನುಭವ ಮಾತ್ರ ಇರಲಾರದೆಂದು ನನ್ನ ಖಚಿತವಾದ ನಂಬಿಕೆ-

ಬಿ. ಇ. ಎಂ. ಎಲ್. ರೈಲ್‌ಕೋಚ್ ವಿಭಾಗದಲ್ಲಿ ಉತ್ಪಾದನಾ ಪ್ರಮುಖರಾಗಿರುವ ಶ್ರೀಮಾನ್ ಶ್ರೀನಿವಾಸಯ್ಯನವರಿಗೆ ಬಿಡುವಿಲ್ಲದಷ್ಟು ಕೆಲಸ ಕಾರ್ಖಾನೆಯ ಆವರಣದಲ್ಲಿ ಸುತ್ತಾಟ, ತಾಂತ್ರಿಕ ಸಮಸ್ಯೆಗಳು, ಉತ್ಪಾದನಾ ಸಮಸ್ಯೆಗಳು, ಲೆಖ್ಖವಿಲ್ಲದಷ್ಟು ಸಾರಿ ಬರುವ ದೂರವಾಣಿ ಕರೆಗಳಿಗೆ ಉತ್ತರ, ಮೇಜಿನ ಮೇಲೆ ವಿಲೇವಾರಿ ಆಗಬೇಕಾಗಿರುವ ಕಾಗದ ಪತ್ರಗಳ ರಾಶಿ ಇವೆಲ್ಲಾ ಸಮಸ್ಯೆಗಳ ನಡುವೆಯು ಸ್ವಲ್ಪವೂ ಬಳಲಿಕೆ ತೋರಿಸದೆ ಎಲ್ಲಾ ಸಮಸ್ಯೆಗಳನ್ನು ಸಮಾಧಾನಕರವಾಗಿ ಗಮನಿಸುವುದು ಅವರ ಕಾರ್ಯವಿಧಾನ.

ಕೆಲವು ವರ್ಷಗಳ ಹಿಂದೆ ಶ್ರೀಮಾನ್ ಶ್ರೀನಿವಾಸಯ್ಯನವರ ಜೊತೆ ಪ್ರವಾಸ ಮಾಡುವ ಸುಯೋಗ ನನಗೆ ಲಭಿಸಿತು. ಉತ್ತರ ಕರ್ನಾಟಕದ ಗದುಗಿನಲ್ಲಿ ಶ್ರೀನಿವಾಸಯ್ಯನವರ ಮಿತ್ರರ ಮನೆಯಲ್ಲಿ ನಮ್ಮ ಬಿಡಾರ. ಅವರ ಮಿತ್ರರು ನಮ್ಮನ್ನು ಸ್ವಾಗತಿಸಿ ತಾವು ಅನೇಕ ವರ್ಷಗಳಿಂದ ಅನುಭವಿಸುತ್ತಿದ್ದ ಸಿಹಿಮೂತ್ರ ವ್ಯಾಧಿಯಿಂದ ಶ್ರೀನಿವಾಸಯ್ಯನವರು ಸೂಚಿಸಿದ ಪ್ರಕೃತಿಚಿಕಿತ್ಸೆಯಿಂದ ಬಹು ಮಟ್ಟಿಗೆ ಮುಕ್ತರಾಗಿರುದರೆಂದು ಹೇಳಿ ತಮ್ಮ ಧನ್ಯವಾದಗಳನ್ನು ಅರ್ಪಿಸಿದರು. ಶ್ರೀನಿವಾಸಯ್ಯನವರು ಸೂಚಿಸಿದ್ದ ಪ್ರಕೃತಿ ಚಿಕಿತ್ಸೆ ಬಹಳ ಸರಳವಾದದ್ದು. ನಮ್ಮ ನಡುವೆ ಇರುವ ತರಕಾರಿ ಸೊಪ್ಪು ಇವುಗಳಲ್ಲಿ ಎಂತಹ ಪರಿಣಾಮಕಾರಿ ಶಕ್ತಿ ಇದೆ

ಎಂಬ ವಿಷಯ ನನ್ನ ಗಮನಕ್ಕೆ ಆಗ ಬಂತು. ನೋಡುತ್ತಿದ್ದಂತೆಯೇ ತಂತ್ರಜ್ಞ ಸಾಹಿತಿ ಶ್ರೀನಿವಾಸಯ್ಯನವರು ವೈದ್ಯರಾದರು. ಅವರ ಗದುಗಿನ ಮಿತ್ರರ ಮನೆಯಲ್ಲಿ ಶ್ರೀನಿವಾಸಯ್ಯನವರ ಬಳಿ ವೈದ್ಯಕೀಯ ಸಲಹೆ ಕೇಳಲು ಜನರ ಒಂದು ಗುಂಪೇ ಸೇರಿತು. ಪ್ರಯಾಣದ ಪ್ರಯಾಸದಿಂದ ದಣಿದಿದ್ದರೂ ಅದನ್ನು ಗಮನಕ್ಕೆ ತಾರದೇ ಎಲ್ಲರ ಸಂಕಷ್ಟವನ್ನು ಸಮಾಧಾನದಿಂದ ಕೇಳಿ ಸಾಧ್ಯವಾಗಬಹುದಾದ ಪರಿಹಾರ ರೂಪವನ್ನು ಸೂಚಿಸಿದರು. ಎಲ್ಲಕ್ಕಿಂತಲೂ ಹೆಚ್ಚಾಗಿ ಅವರ ಮಾತಿನ ಚಮತ್ಕಾರ ಬಂದವರ ಅರ್ಧ ಸಂಕಷ್ಟವನ್ನು ಗುಣಪಡಿಸಿತೆನ ಬಹುದು.

ಅಲ್ಲಿಂದ ಮುಂದೆ ನಮ್ಮ ಪ್ರವಾಸ ಹೊಸಪೇಟೆಯತ್ತ ಸಾಗಿತು. ಇದಕ್ಕೆ ಮುಂಚೆ ಕೆಲವು ಮಿತ್ರರ ಜೊತೆ ಹೊಸಪೇಟೆ-ಹಂಪೆ ಇತ್ಯಾದಿ ಸ್ಥಳಗಳಿಗೆ ಭೇಟಿ ಕೊಟ್ಟಿದ್ದೆ. ಹಂಪೆಯಲ್ಲಿ ನಾನು ನೋಡಿದ್ದ ಹಾಳುಬಿದ್ದ, ಬೀಳುಬಿದ್ದ ಭಗ್ನಾವಶೇಷ ಗಳು. ಶ್ರೀನಿವಾಸಯ್ಯನವರ ಜೊತೆಯಲ್ಲಿ ನೋಡಿದ್ದು ಹಾಳು ಹಂಪೆಯಲ್ಲ, ಬೆಳೆದು ಬಾಳಿದ ವಿಜಯನಗರ ಸಾಮ್ರಾಜ್ಯದ ವೈಭವವನ್ನು. ವೈದ್ಯ ಶ್ರೀನಿವಾಸಯ್ಯನವರು ಇತಿಹಾಸಕಾರ ಶ್ರೀನಿವಾಸಯ್ಯನವರಾದರು. ಅವರ ಮಾತಿನ ಮೋಡಿಯಲ್ಲಿ, ವಿಚಾರ ನಿರೂಪಣೆಯಲ್ಲಿ ನಾನು ಮೈಮರೆತು ವಿಜಯನಗರ ಸಾಮ್ರಾಜ್ಯದ ವೈಭವ ದಲ್ಲಿ ವಿಜೃಂಭಿಸಿದೆ.

ಇತ್ತೀಚೆಗೆ ಶ್ರೀನಿವಾಸಯ್ಯನವರು ಬಂಗ್ಲಾದೇಶ ಮತ್ತು ಶ್ರೀಲಂಕಾ ಇವುಗಳಿಗೆ ಭೇಟಿ ಕೊಟ್ಟ ಮೇಲೆ ಹಿಂದೆ ಅವರ ಪಶ್ಚಿಮರಾಷ್ಟ್ರಗಳ ಪ್ರವಾಸದ ಸವಿಯ ರಸಗವಳ ವನ್ನು ಉಂಡಿದ್ದ ನಾನು ಈ ಎರಡು ರಾಷ್ಟ್ರಗಳ ಬಗ್ಗೆ ಸಹಾ ಏನಾದರೂ ಬರೆಯಿರಿ ಎಂದು ದುಂಬಾಲು ಬಿದ್ದೆ. ಬಿಡುವಿಲ್ಲದಷ್ಟು ಕೆಲಸಗಳ ಮಧ್ಯೆ ಸಹಾ ತಮ್ಮ ವಿಶ್ರಾಂತಿಯ ಸಮಯವನ್ನು ಸಹಾ ಬದಿಗೊತ್ತಿ ಶ್ರೀಲಂಕಾ ಪ್ರವಾಸದ ಬಗ್ಗೆ ಸುಂದರ ವಾದ ಪುಸ್ತಕ ಬರೆದರು. ಮುದ್ರಣವಾಗುವವರೆಗೂ ಕಾಯುವ ತಾಳ್ಮೆ ನನ್ನಲಿಲ್ಲ ದುದರಿಂದ ಕರಡು ಪ್ರತಿಯನ್ನು ಓದಿದ್ದೆ. ಭವ್ಯ ಶ್ರೀಲಂಕಾದ ದರ್ಶನ ಪಡದೆ.

ಶ್ರೀಮಾನ್ ಶ್ರೀನಿವಾಸಯ್ಯನವರ ಬಹುಮುಖ ಪ್ರತಿಭೆ ಸೌಜನ್ಯ, ಸರಳತೆಗಳ ಬಗ್ಗೆ ಇನ್ನೂ ಬರೆಯಬೇಕೆಂಬ ಹಂಬಲವಿದ್ದರೂ ನನ್ನ ಸಾಮರ್ಥ್ಯದ ಇತಿ ಮಿತಿಗಳ ದೃಷ್ಟಿ ಯಿಂದ ನನ್ನ ಲೇಖನವನ್ನು ಇಲ್ಲಿಗೆ ನಿಲ್ಲಿಸುತ್ತೇನೆ.



# ಸಂಸ್ಕೃತಿ ಸಂಪನ್ನ

---

**ಸಾ. ವೆಂಕಟಾಚಲ**

ನಾವು ಹುಟ್ಟಿ ದೇಶಕ್ಕೆ ಏನು ಪ್ರಯೋಜನ ಎಂದು ಯೋಚನೆ ಮಾಡುವವರು ಎಷ್ಟು ಮಂದಿ? ಉತ್ತರ ಬಹುಕಷ್ಟ. ಬೆರಳೆಣಿಕೆಗೂ ಸಿಗದಷ್ಟು ಎನ್ನಬಹುದೇನೋ.

ಸಮಾಜ ಸೇವೆ ಮಾಡುವವರು ಭಾರತದಲ್ಲಿ ಬಹುಮಂದಿ. ನಿಸ್ವಾರ್ಥದಿಂದ ಜನಸೇವೆ ಮಾಡುವವರು ವಿರಳ. ನಮ್ಮ ಹೊ. ಶ್ರೀ ಯವರು ಇಂತಹ ವಿಶೇಷ ವರ್ಗಕ್ಕೆ ಸೇರಿದವರು.

ಸಾಮಾಜಿಕವಾಗಿ ಎಲ್ಲ ಹಂತಗಳಲ್ಲಿಯೂ ಹೊಣೆ ಹೊತ್ತು ಅದನ್ನು ಯಶಸ್ವಿಯಾಗಿ ನಿರ್ವಹಿಸುವುದಕ್ಕೆ, ಮಾನವನಿಗೆ ವಿಶೇಷವಾದ ಕಾರ್ಯ ಪ್ರಜ್ಞೆ ದತ್ತವಾಗಿರಬೇಕು. ಕೆಲವು ವೇಳೆ ವ್ಯಾಪ್ತಿ ಬಾಹುಳ್ಯದಿಂದ ತನ್ನ ಎಲ್ಲ ಕಾರ್ಯಗಳಲ್ಲಿಯೂ ಸಮನಾದ ಆಸಕ್ತಿ ವಹಿಸಲು ಸಾಧ್ಯವಾಗದಿರಬಹುದು. ಒಮ್ಮೊಮ್ಮೆ ಕೆಲಸದ ಮಹತ್ವವನ್ನನುಸರಿಸಿ, ಅದಕ್ಕೆ ನೀಡಬೇಕಾದ ಗಮನದ ಅಳತೆಯನ್ನು ನಿರ್ಧರಿಸಬೇಕಾಗುತ್ತದೆ. ಜೀವನ ರಂಗದಲ್ಲಿ ಮಾಡಬಹುದಾದ ಮುಖ್ಯ ಕಾರ್ಯಗಳೆಲ್ಲಕ್ಕೂ ಸಮಾನ ಒತ್ತುಕೊಡಲು ಅನುಭವ ಅಗತ್ಯ.

ಭಾವನೆಗಳು ಮಾನವನಿಗೆ ಮೂಡುವುದು ಸಹಜ. ಮೂಡುವ ಭಾವನೆಗಳಿಗೆ ಕೆಲವರು ಅಸ್ಪಷ್ಟ ರೂಪುಕೊಡಲು ಯತ್ನಿಸುತ್ತಾರೆ. ಭಾವನೆಗಳಿಗೆ ಉದಾತ್ತ ಸ್ವರೂಪ ಕೊಟ್ಟು ಕಾರ್ಯರೂಪಕ್ಕೆ ತರಲು ಪ್ರಯತ್ನಿಸುವವರು ಕೆಲವರು. ಕಾರ್ಯರೂಪಕ್ಕೆ ತರುವಲ್ಲಿ ಯಶಸ್ವಿಯಾಗುವವರು ಮಾತ್ರ ಹೆಚ್ಚಿನ ಗೌರವಕ್ಕೆ ಅರ್ಹರಾಗುವರು. ಈ ಎಲ್ಲ ಅಪೂರ್ವ ಗುಣಗಳ ಸಮ್ಮಿಳನವೇ ನಮ್ಮ ಹೊ. ಶ್ರೀ. ಯವರು.

ಹುಟ್ಟಿನಿಂದ ಬಡವರಾಗಿ, ಕಷ್ಟಪಟ್ಟು ವಿದ್ಯಾಭ್ಯಾಸ ಮಾಡಿ ಸ್ವಸಾಮರ್ಥ್ಯದಿಂದ ಬಾಳಿನ ಮಜಲುಗಳನ್ನೇರಿ, ಸರಳ ಜೀವನವನ್ನಾರಿಸಿಕೊಂಡು ಸಾರ್ಥಕ ಜೀವನವನ್ನು ನಡೆಸುತ್ತಿರುವ ಶ್ರೀನಿವಾಸಯ್ಯನವರು ಗಾಂಧೀಜೀಯವರ ಅನುಯಾಯಿಗಳು.

ಪ್ರಸ್ತುತ ಭಾರತ್ ಅರ್ತ್ ಮೂವರ್ಸ್ ಕೈಗಾರಿಕೆಯ ರೈಲ್ವೆಕೋಚ್ ವಿಭಾಗದ

ಉತ್ಪಾದನಾ ಮುಖ್ಯಸ್ಥ (Chief of Production)ರಾಗಿರುವ ಹೊ. ಶ್ರೀ. ಯವರಿಗೆ ಕಾರ್ಖಾನೆಯ ಉತ್ಪಾದನಾ ವಸ್ತುಗಳ ಗುಣಮಟ್ಟದ ಬಗ್ಗೆ, ಕಾರ್ಮಿಕರ ಆರ್ಥಿಕ ಸ್ಥಿತಿಯ ಬಗ್ಗೆ ವಿಶೇಷ ಕಾಳಜಿ ಕಾರ್ಖಾನೆಯು ಹೇಗೆ "ಜಡಜೋಗೀಗೌಡ ಎಂದು ತನ್ನ ಜಡತನದ ರೇಖೆಯಿಂದ ಮೇಲೆ ಬರುವುದು" ಎಂಬುದರ ಬಗ್ಗೆ ಚಿಂತಿಸಲು ತನ್ನ ಪರಿಸರವನ್ನೇ ಎಬ್ಬಿಸುವ ಸಂಘಟನೆ.

ಗಾಂಧಿ ಸಾಹಿತ್ಯ ಸಂಘ, ಶ್ರೀರಾಮ ಕೋ ಆಪರೇಟಿವ್ ಬ್ಯಾಂಕ್, ಆಂಜನೇಯ ಕೋ ಆಪರೇಟಿವ್ ಬ್ಯಾಂಕ್, ಒಕ್ಕಲಿಗರ ಸಂಘ ಹೀಗೆ ಇನ್ನೂ ಮುಂತಾದ ಹಲವಾರು ಸಂಘ ಸಂಸ್ಥೆಗಳನ್ನು ಸ್ಥಾಪಿಸಿ ಅದರ ಸರ್ವಾಂಗೀಣ ಅಭಿವೃದ್ಧಿಗೆ ಹೊ. ಶ್ರೀ ಯವರ ಪರಿಶುದ್ಧ ಕಾಯಕದ ಲಕ್ಷ್ಯ. ಯಾವುದೇ ಸಂಘ ಸಂಸ್ಥೆಗಳ ಕೆಲಸವನ್ನು ತೆಗೆದು ಕೊಳ್ಳುವ ಎಚ್ಚರಿಕೆ ಅನುಕರಣೀಯ. ತಾವು ಮೊದಲು ಕೆಲಸ ಮಾಡಿ ಇತರರ ಮಡಿವಂತಿಕೆಯನ್ನು ಹೊಡೆದೋಡಿಸುವಷ್ಟು ಕಾಯಕದಲ್ಲಿ ತಲ್ಲೀನತೆ.

ವಿಶೇಷ ಅನುಭವಕ್ಕಾಗಿ ವಿದೇಶ ಪ್ರವಾಸ. ಅಲ್ಲಿಯ ನೈಪುಣ್ಯತೆಯನ್ನು ಇಲ್ಲಿಯೂ ಗಳಿಸುವ ಯತ್ನ. ಅಲ್ಲಿ ನೋಡಿದ ಕುತೂಹಲವೆನಿಸಿದ ಪ್ರತಿಯೊಂದು ವಿಷಯಗಳನ್ನೂ ಟಿಪ್ಪಣಿ ಮಾಡಿ ನಂತರ ಪುಸ್ತಕ ಪ್ರಕಟಣೆ.

"ಹೊಸ ಚಿಗುರು ಹಳೆಬೇರು ಕೂಡಿರಲು ಮರ ಸೊಬಗು
ಹೊಸಯುಕ್ತಿ ಹಳೆ ತತ್ವ ದೊಡಗೂಡೆ ಧರ್ಮ
ಋಷಿ ವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ
ಜಸವು ಜನಜೀವನಕೆ ಮಂಕುತಿಮ್ಮ"

ಈ ಮಾರ್ಗದಲ್ಲೇ ತಮ್ಮ ಬಾಳನ್ನು ನಡೆಸುತ್ತಿರುವ ಹೊ. ಶ್ರೀ ಯವರು ತಮ್ಮ 58ನೇ ವಯಸ್ಸಿನಲ್ಲಿಯೂ ಇನ್ನೂ ಹರೆಯದವರಂತೆ ಕಾರ್ಯಮಗ್ನ.

ಇಂತಹ ಸಂಸ್ಕೃತಿ ಸಂಪನ್ನರಿಗೆ ಸಲ್ಲಿಸುವ ಗೌರವ ನಾಡಿನ ಜನರ ಸಾಂಸ್ಕೃತಿಕ ಪ್ರಜ್ಞೆಯ ದರ್ಶನ ಈ ರೀತಿಯ ಸತ್ಸಂಪ್ರದಾಯಗಳ ಆಚರಣೆ ಕಿರಿಯರಿಗೆ ಮಾರ್ಗದರ್ಶನ.



# ಬಹುಮುಖ ಪ್ರತಿಭಾನ್ವಿತ

---

ವಿದ್ವಾನ್ ಅಶ್ವತ್ಥಯ್ಯ

ಸಮಾಜದ ಬಹು ಉನ್ನತ ಮಟ್ಟದ ಹುದ್ದೆಯಲ್ಲಿದ್ದರೂ ಅದರಿಂದ ಹುಟ್ಟುವಂತಹ 'ಅಹಂ' ಗೆ ದೂರ ನಿಂತವರು. "ಅನವರತ ಕಾಯಕ ಪ್ರೇಮ ದೇಶದ ಮುನ್ನಡೆಗೆ ಸಹಕಾರಿ" ಇದನ್ನು ಪಾಲಿಸಲು ದೀಕ್ಷಾಬದ್ಧರು. ಸರಳ ಜೀವನವು ಮನುಷ್ಯನನ್ನು ಸುಖವಾಗಿಡುತ್ತದೆ. ಇದನ್ನು ಜನ್ಮತಃ ಆರಂಭಿಸಿದವರು, ಬಡವರನ್ನು ದೇವರೆಂದು ಭಾವಿಸಿ ಸೇವಿಸಿದ ಶ್ರೀ ಶ್ರೀನಿವಾಸಯ್ಯನವರು ಉತ್ತಮ ಚಿಕಿತ್ಸಕರು. ಸ್ವಯಂ ನಿಂತು ಸರಳ ಮಾರ್ಗದಲ್ಲಿ ಖಾಯಿಲೆಗಳನ್ನು ಹೋಗಲಾಡಿಸುವಂತವರು. ಇವರ ಸಂಜೀವಿನಿ ಹಸ್ತ ರೋಗಿಗಳಿಗೊಂದು ಅಮೃತ ಕುಂಭ.

ಇವರು ಉಪದೇಶ ಮೊದಲು ಎಂಬುದನ್ನು ಒಪ್ಪುವವರಲ್ಲ. ತಾವು ಕಾರ್ಯ ಮಾಡಿ ಸಫಲರಾಗಿ ನಂತರ ಆ ದಾರಿಯಲ್ಲಿ ಮುನ್ನಡೆದರೆ ಶ್ರೇಯಸ್ಸಾಗುವುದೆಂಬ ವಿಶ್ವಾಸದ ಮಾರ್ಗದರ್ಶಕರು. ಇಂದಿಗೂ ತಮ್ಮ ನಿವಾಸದ ಮುಂದಿನ ಸ್ಥಳದ ಶುಭ್ರತೆಯನ್ನು ಕಾಪಾಡಿಕೊಂಡು ಬರುತ್ತಿರುವುದು ಅವರ ಸ್ವಯಂ ಪರಿಪಾಕವನ್ನು ಮಾರ್ಗದರ್ಶನವನ್ನು ಹಾಗೂ ಶುಚಿತ್ವವೇ ದೈವತ್ವಕ್ಕೆ ಆಧಾರ ಎಂಬ ತತ್ವವನ್ನು ಪ್ರಕಾಶಪಡಿಸುತ್ತದೆ.

ಬಡವರನ್ನು ಕಂಡಾಗ ಅನುಕಂಪ ಇವರ ಹುಟ್ಟುಗುಣ. ಯಾರಾದರಾಗಲಿ ದೊಡ್ಡ ಸಂಸ್ಥೆಯಿಂದ ಬಡವನವರೆಗೆ ಅವರ ಬಳಿ ಹೋಗಿ ಬರೀ ಕೈಯಲ್ಲಿ ಹಿಂದಿರುಗಿದ್ದೆ ಇಲ್ಲ. ಆಯಾಯ ಸಂಸ್ಥೆಗಳ ಅಭಿವೃದ್ಧಿಗನುಸಾರವಾಗಿ ಇವರೊಡನೆ ತೋಡಿಕೊಂಡ ಕಷ್ಟಸ್ಥಿತಿಯನ್ನು ಆಧರಿಸಿ ಅದರ ನಿವಾರಣೆಗಾಗಿ ಸಹಾಯ. ಬಡವನಿಗೆ ಅಂದಿನ ಆಹಾರವಷ್ಟೇ ಸಾಲದೆಂದು ಅವನಿಗೆಂದು ಮಾರ್ಗಸೂಚಿ. ಹೀಗೆ ಬಹು ವಿಧವಾಗಿ ಇವರ ಅನುಕಂಪ ದಾನ ರೂಪದಲ್ಲಿ ಸಂದು ಇಡೀ ದೇಶದಲ್ಲಿಯೇ ಅನೇಕ ಸಂಸ್ಥೆಗಳು ಮುಂದೆ ಬಂದು ಅಭಿವೃದ್ಧಿಯನ್ನು ಹೊಂದಿ ನಾಡಿನ ಜನರಿಗೆ ಉಪಕೃತವಾಗಿವೆ.

ಇವರಿಗೆ ಚಿಕ್ಕಂದಿನಿಂದಲೂ ಓದಿನ ಬಗ್ಗೆ ಬರವಣಿಗೆಯ ಬಗ್ಗೆ ಅಸಾಮಾನ್ಯವಾದ ಅಭಿರುಚಿ. ಇದು ಕಾರ್ಖಾನೆಯ ನಿರ್ಜೀವ ವಸ್ತುಗಳನ್ನು ಮಾತನಾಡಿಸುವಷ್ಟು

ಜಾಗೃತವಾಗಿದೆ. ಇವರ ಕಾರ್ಯಸುಧೆ ಒಂದು ಅಮೃತ ಸೋಪಾನ. ಇದನ್ನು ಹತ್ತಬೇಕೆಂದು ಇಚ್ಛಿಸುವವರಿಗೆ ಮುಕ್ತಿ ಲಭ್ಯ, ಅರ್ಥಾತ್ ಆ ಕಾರ್ಯ ಅವರನ್ನು ಅಷ್ಟು ತಲ್ಲೀನಗೊಳಿಸುತ್ತದೆ.

ಭಾರತೀಯ ಸಂಸ್ಕೃತಿಯನ್ನು ಆಲಿಂಗಿಸಿ ನಿಜವಾಗಿ ಸುಖಿಸುತ್ತಿರುವವರು ಇವರು. ಗೃಹಸ್ಥರಾಗಿದ್ದರೂ ಆಶ್ರಮ ಧರ್ಮಕ್ಕನುಗುಣವಾಗಿ ನಿಂತವರು. ಇವರೆಷ್ಟು ಸಮಾಜ ಸುಧಾರಕರೋ ಅಷ್ಟೇ ಸಹಾಯ ಶೀಲರು. ದಂಪತಿಗಳ ಬದುಕು ಮಾನವ ಲೋಕೋದ್ಧಾರಕ್ಕಾಗಿಯೇ ಮೀಸಲಾಗಿದೆ.

ಇವರು ಶತಾಯುಷಿಗಳಾಗಿ ದೇಶೋದ್ಧಾರದ ಕಾರ್ಯದಲ್ಲಿ ಇತೋಪ್ಯತಿಶಯವಾಗಿ ಮುಂದುವರೆಯುವ ಶಕ್ತಿಯನ್ನು ಭಗವಂತ ನೀಡಬೇಕೆಂದು ಪ್ರಾರ್ಥಿಸುತ್ತೇನೆ.

–oOo–

# ಹೊನ್ನ ಪ್ರಕಾಶದ ಹೊಂಬಿಸಿಲು

---

ಮಾತಂಗಿ

ಮಾನವೀಯ ಮೌಲ್ಯಗಳನ್ನೊಳಗೊಂಡ ವ್ಯಕ್ತಿ ಶ್ರೀ ಹೊ. ಶ್ರೀನಿವಾಸಯ್ಯ ಅಪ್ಪಟ ಗಾಂಧಿವಾದಿ. ಶ್ರೀಯುತರು ಗಾಂಧೀ ತತ್ವವನ್ನು ತಮ್ಮ ಜೀವನದುದ್ದಕ್ಕೂ ನಿಷ್ಠೆಯಿಂದ ಉಳಿಸಿ, ಬೆಳೆಸಿಕೊಂಡು ಬಂದಿರುವ ವ್ಯಕ್ತಿ. ತಮ್ಮ ವ್ಯವಹಾರದಲ್ಲಿ ಅಪ್ಪಟ ಭಾರತೀಯತೆಯನ್ನು ಮೈಗೂಡಿಸಿಕೊಂಡು ವೃತ್ತಿಯಲ್ಲಿ ಎಂಜಿನೀಯರ್ ಆಗಿ, ಪ್ರವೃತ್ತಿಯಲ್ಲಿ ಸಾಹಿತ್ಯಾಭಿಮಾನಿಗಳಾಗಿದ್ದಾರೆ. ಬೆಂಗಳೂರಿನ ಭಾರತ್ ಅರ್ತ್ ಮೂವರ್ಸ್‌ನಲ್ಲಿ ಉತ್ಪಾದನಾ ಮುಖ್ಯಸ್ಥರಾಗಿರುವ ಶ್ರೀಯುತರು ರೈಲು ಗಾಡಿಗಳ ಯೋಜನೆ ಮತ್ತು ನಿರ್ಮಾಣದಲ್ಲಿ ದೇಶ ವಿದೇಶಗಳಿಂದ ಮನ್ನಣೆ ಪಡೆದ ವ್ಯಕ್ತಿ. ಸಿಲೋನ್ ಮತ್ತು ಬಾಂಗ್ಲಾ ದೇಶಗಳಿಗೆ ರೈಲು ಗಾಡಿಗಳನ್ನು ತಯಾರಿಸಿಕೊಡಲು ಅವರು ಆ ದೇಶಗಳೊಂದಿಗೆ ನಡೆಸಿದ ಸಮಗ್ರ ವ್ಯವಹಾರ ಅವರ ಕಾರ್ಯ ನೈಪುಣ್ಯತೆಯನ್ನು ಸಾರುತ್ತದೆ. ಜರ್ಮನಿಯಲ್ಲಿ ಉನ್ನತ ಶಿಕ್ಷಣ ಪಡೆದ ಇವರ ಸೇವೆ ಉಲ್ಲೇಖಾರ್ಹ, ಸ್ಮರಣಾರ್ಹ. ಅಂತೆಯೇ ಇಂಡಿಯಾದ ಎಂಜಿನಿಯರ್‌ಗಳ ಸಂಸ್ಥೆಯಲ್ಲಿ ಸಹ ಸದಸ್ಯರು, ಜರ್ಮನ್ ಎಂಜಿನಿಯರ್ ಸಂಸ್ಥೆಯಲ್ಲಿ ಸದಸ್ಯರು (ಪಶ್ಚಿಮ ಜರ್ಮನಿ), ಸ್ಟ್ಯಾಂಡರ್ಡ್ಸ್ ಎಂಜಿನಿಯರ್‌ಗಳ ಸಂಸ್ಥೆಯಲ್ಲಿ ಸದಸ್ಯತ್ವ.

1925 ರ ಜನವರಿ ನಾಲ್ಕರಂದು ಜನಿಸಿದ ಇವರು ಬಿ. ಇ, (ಮೆಕ್ಯಾನಿಕ್) ಪದವಿ ಪಡೆದು, ಕೇಂದ್ರೀಯ ಕೈಗಾರಿಕಾ ಕಾರ್ಖಾನೆಯ ಕಾರ್ಯಾಲಯದಲ್ಲಿ ತರಬೇತಿ ಪಡೆದು, ಹಿಂದೂಸ್ಥಾನ್ ಏರ್‌ಕ್ರಾಫ್ಟ್ ಲಿಮಿಟೆಡ್ ಅಧೀನದಲಿದ್ದ ರೈಲ್ ಕೋಚ್ ವಿಭಾಗಕ್ಕೆ ಕಾರ್ಯ ನಿರ್ವಾಹಕರಾಗಿ ಸೇರಿದುದು 1949 ರಲ್ಲಿ. ಇಂಡೋ ಜರ್ಮನ್ ಇಂಡಸ್ಟ್ರಿಯಲ್ ಕೋ ಆಪರೇಟೀವ್ ಸ್ಕೀಂ (ಹೆಚ್. ಎ. ಎಲ್. ಮೂಲಕ) ಮೇರೆಗೆ ಒಂದು ವರ್ಷಕಾಲ ಪಶ್ಚಿಮ ಜರ್ಮನಿಯಲ್ಲಿ, ರೈಲ್ವೆ ಕೋಚ್ ನಮೂನೆಯಲ್ಲಿ ಹಾಗೂ ಅದರ ಅಡಿಪಾಯದ ಬಗ್ಗೆ ತರಬೇತಿ. ಹೆಚ್. ಎ ಎಲ್. ಕಾರ್ಖಾನೆಯ ಮೂಲಕ 13 ತಿಂಗಳು ಪಶ್ಚಿಮ ಜರ್ಮನಿಗೆ ಹೋಗಿದ್ದು ಅಂದರೆ 1957ರಲ್ಲಿ ಹೆಚ್. ಎ. ಎಲ್. ನ ಸಹಕಾರ ಮೂಲಕ ಕೋಚ್, ಡಿಸೈನ್ ಮತ್ತು ಅದರ ಅಡಿಪಾಯದ ಬಗ್ಗೆ ತರಬೇತಿ ಪಡೆದರು. 1974 ಮತ್ತು 1976ರಲ್ಲಿ ಬಾಂಗ್ಲಾ ದೇಶಕ್ಕೆ ರೈಲು ಗಾಡಿಗಳ ರಫ್ತು ವಿಚಾರದಲ್ಲಿ ಭೇಟಿ, ಇತ್ಯಾದಿ.

ತಾಂತ್ರಿಕ ಪ್ರಕಟನೆಗಳಿಗೆ ಸಂಬಂಧಪಟ್ಟಂತೆ ಹ್ಯಾನೋವರ್ ಇಂಡಸ್ಟ್ರಿಯಲ್ ಫೇರ್ (1954) ಜರ್ಮನಿಯ ಯಾಂತ್ರಿಕ ನಿಪುಣತೆ ಮತ್ತು ಕೈಗಾರಿಕೆ (1977) ಮೊದಲಾದ ಒಟ್ಟು ಹದಿನಾಲ್ಕು ಲೇಖನಗಳು, ಸಾಮಾನ್ಯ ಪ್ರಕಟನೆಗಳಿಗೆ ಸಂಬಂಧಪಟ್ಟಂತೆ ಒಟ್ಟು ಇಪ್ಪತ್ತಾರು ಲೇಖನಗಳು, ಅವುಗಳಲ್ಲಿ ಜರ್ಮನಿಯ ಅನುಭವ, ಅಲ್ಲಿಯ ಸ್ನೇಹಿತರ ಪರಿಚಯ, ಇಂಡಿಯಾಗೆ ಮರಳುವ ಹಾದಿಯಿಂದ, ಗಾಂಧಿ ಸರಳ ಜೀವಿ, ನಮ್ಮ ಶರ್ಮಾಜಿ. ನಾಕಂಡ ಶರ್ಮಾಜಿ, ಗಾಂಧಿ ಸಾಹಿತ್ಯ ಸಂಘದ ಶಿಲ್ಪಿ ಸಿದ್ಧವನಹಳ್ಳಿ ಕೃಷ್ಣಶರ್ಮ ಹಾಗೂ ಶರ್ಮಾಜಿಯೊಡನೆ ಮೂವತ್ತು ವರ್ಷಗಳು ಇವೇ ಮುಂತಾದ ಪ್ರಕಟನೆಗಳು ಅವರ ಕನ್ನಡದ ಒಲವನ್ನು ಸಾರುತ್ತದೆ.

ಜರ್ಮನಿಯಲ್ಲಿ ಇವರ ಇನ್ನಿತರ ಸುಮಾರು ಒಂಭತ್ತು ಲೇಖನಗಳು ಪ್ರಕಟಗೊಂಡು ಕನ್ನಡನಾಡಿನ ಒಂದು ಸ್ಮರಣೆಯನ್ನು ಜನತೆಗೆ ತಂದು ಕೊಟ್ಟ ಒಂದು ಹೆಮ್ಮೆ 'ನಾಕಂಡ ಜರ್ಮನಿ" ವಿದ್ಯಾರ್ಥಿಗಳಿಗೆ ಅಭ್ಯಾಸಯೋಗ್ಯವಾದ ಒಂದು ಪ್ರವಾಸ ಕಥನ ಹಾಗೂ ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ಬಹುಮಾನ ದೊರಕಿಸಿಕೊಂಡ, ಕನ್ನಡ ಜನರ ಮನ್ನಣೆ ಪಡೆದ ಕೃತಿ. "ಇವ ಯಾರವ, ಇವ ಯಾರವ ಎನಿಸದಿರಯ್ಯ ಇವ ನಮ್ಮವ ಎನಿಸಯ್ಯ" ಎನ್ನುವ ಬಸವವಾಣಿಯಂತೆ, ತಾಂತ್ರಿಕ ಕ್ಷೇತ್ರದಲ್ಲಿ ದುಡಿದರೂ, ಸಾಹಿತ್ಯ ಕ್ಷೇತ್ರದ ಕುಸುಮವಾಗಿ ಸೂಸಿರುವ ಸೌರಭ. ಅಪಾರ, ಅನನ್ಯ. ಎರಡೂ ಕ್ಷೇತ್ರದಲ್ಲೂ ಅವಿನಾಭಾವ ಸಂಬಂಧ ಹೊಂದಿರುವ 'ಹೊನ್ನ ಪ್ರಕಾಶ' ದ (ಮನೆಯ ಹೆಸರು) ಈ ಯಾಂತ್ರಿಕನಿಗೆ ಶುಭವನ್ನು ಕೋರುವ ಮೂಲಕ ನನ್ನ ನಮನಗಳನ್ನು ಸಲ್ಲಿಸುವೆ.



# ಗೆಳೆತನದ ನೆನಹು

ಸೀ. ಶ್ರೀ. ರಂಗಾಚಾರ್

ಆಗಸ್ಟ್ 1942, ಗಾಂಧೀಜಿ ದೇಶಕ್ಕೆ ಹೋರಾಟದ ವೀಳೆಯ ಇತ್ತಿದ್ದರು. ನಾಯಕರೆಲ್ಲರ ಬಂಧನವಾಗಿ, ಯುವಕರು, ವಿದ್ಯಾರ್ಥಿಗಳು, ಚಳುವಳಿಯ ನಾಯಕರಾಗುತ್ತಿದ್ದ ಪರ್ವಕಾಲ. ಮೈಸೂರು ರಾಜ್ಯದಲ್ಲೂ ಈ ಚಳುವಳಿಯು ಪ್ರಭಾವ ಜೋರಾಗಿತ್ತು. ಬಂಧಿತರಾದ ನಾಯಕರಲ್ಲಿ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ ಒಬ್ಬರು. ಅವರಾಗ ಬೆಂಗಳೂರಿನಲ್ಲಿ ವಾಸ. ಅವರ ಸುತ್ತ ಒಂದು ಯುವಕರ ತಂಡ ತಯಾರಾಗಿತ್ತು. ಅವರ ವ್ಯಕ್ತಿತ್ವ, ವಾಕ್‌ಶಕ್ತಿ, ಧೀಮಂತತೆಗಳಿಗೆ ಮಾರು ಹೋಗಿದ್ದವರು ಕೆಲಸದಲ್ಲಿರುವವರು ವಿದ್ಯಾರ್ಥಿಗಳು-ಹೀಗೆ.

ಆ ವರ್ಷ ಗಾಂಧೀ ಜಯಂತಿಯನ್ನು ಮಲ್ಲೇಶ್ವರದಲ್ಲಿ ಭಾರೀ ಉತ್ಸಾಹದಿಂದ ನಡೆಸಿದರು ಈ ಯುವಕರ ತಂಡ. ಮನೆ ಮನೆಗೂ ತಿರುಗಿ, ಕಾಣಿಕೆ ಚಂದಾ ಎತ್ತಿ ಕಾರ್ಯಕ್ರಮ ನಡೆಸಿದರು. ಜನರ ಉತ್ಸಾಹ ಸರ್ಕಾರದ ದಮನದ ವಿರುದ್ಧ ಎದ್ದಿದ್ದ ಒಂದು ಅಲೆ ಈ ಕಾರ್ಯಕ್ರಮದಲ್ಲಿ ತನ್ನ ಛಾಯೆ ನೀಡಿತು. ಗಾಂಧೀ ಜಯಂತಿ ನಡೆದಾದ ಮೇಲೆ ಈ ಗುಂಪಿನ ಹತ್ತಿರ ಸ್ವಲ್ಪ ಹಣ ಉಳಿಯಿತು. ಮತ್ತು ಮಲ್ಲೇಶ್ವರದ ಜನರ ಉತ್ಸಾಹಕ್ಕೆ ಒಂದು ಸ್ಥಿರ ಸ್ವರೂಪ, ರೂಪ ಕೊಡಬೇಕೆಂಬ ಒಂದು ಆಕಾಂಕ್ಷೆಯೂ ಬಲಗೊಂಡಿತು. ಶರ್ಮಾಜಿ ಇನ್ನೂ ತುರಂಗದಲ್ಲೇ ಇದ್ದರು ಮತ್ತು ಯಾವ ರಾಜಕೀಯ ಚಟುವಟಿಕೆ ನಡೆಸಲೂ ಸ್ವಲ್ಪ ಭಯಾನಕ ವಾತಾವರಣವೇ. ಈ ಸನ್ನಿವೇಶದಲ್ಲಿ ನಮ್ಮ ಗಾಂಧೀ ಸಾಹಿತ್ಯ ಸಂಘ ಜನ್ಮತಾಳಿತು. ಗಾಂಧೀ ಸಾಹಿತ್ಯದ ಸಂಗ್ರಹಣೆ, ಪುಸ್ತಕ ವಿತರಣೆ, ಪ್ರಚಾರ ಇತ್ಯಾದಿಯು ರೂಪರೇಷೆಗಳನ್ನು ಚೌಕಟ್ಟಾಗಿ ಇಟ್ಟುಕೊಂಡಿತು. ಸಂಘಕ್ಕೆ ನಾಮಕರಣವೇನೊ ಆಯಿತು. ಆದರೆ ಜಾಗ? ಶುರು ಮಾಡಿದ ಪ್ರಭೃತಿಗಳೆಲ್ಲ ಉತ್ಸಾಹಿಗಳೇ, ಮುಗಿಲೆತ್ತರದ ಆಕಾಂಕ್ಷೆ ಉಳ್ಳವರೇ! ಅವರ ತಲೆಗಳೆಲ್ಲ ಮೋಡದೆತ್ತರಕ್ಕಿದ್ದರೂ ತಳಊರಲು ಜಾಗದ ಅಭಾವ! ಆಗ ಮುಂದೆ ಬಂದ ಇಂಟರ್‌ಮಿಡಿಯಟ್ ಓದುತ್ತಿದ್ದ ವಿದ್ಯಾರ್ಥಿ ಶ್ರೀನಿವಾಸಯ್ಯ. ಮಲ್ಲೇಶ್ವರದ ಆರನೆಯ ಕ್ರಾಸಿನ ಮೂಲೆ ಮನೆ ಅಲ್ಲಿ ಇಲ್ಲಿ ಸ್ವಲ್ಪ ಅಲೆದಾಡಿ, ಕೊನೆಗೆ ಅವನ ಮನೆಯ ಕೋಣೆ ಯೊಂದರಲ್ಲಿ ಸಂಘ ನೆಲೆಗೊಂಡಿತು.

ಆಗ ನಾನು ತುಮಕೂರಿನಲ್ಲಿ ಓದುತ್ತಿದ್ದೆ. ಅಲ್ಲಿಗೇ ಹೀಗೆ ಬೆಂಗಳೂರಿನಲ್ಲಿ ಗಾಂಧೀ ಸಾಹಿತ್ಯ ಸಂಘ ಶುರುವಾಗಿದೆ ಎಂದು ಸುದ್ದಿ ಬಂತು. ಅದರಲ್ಲಿ ಪಾಲುಗೊಳ್ಳಬೇಕೆಂಬ ಉತ್ಸಾಹವನ್ನ ಎರಡು ವರ್ಷ ಅದುಮಿ ಹಿಡಿದು, ಆಮೇಲೆ 1944ರಲ್ಲಿ ನಾನು ಇಂಜನಿಯರಿಂಗ್ ಸೇರಲು ಬೆಂಗಳೂರಿಗೆ ಬಂದಾಗ, ಆ ಉತ್ಸಾಹ ಫಲಗೊಂಡಿತು.

ಮೊದಲ ಬಾರಿ ಶ್ರೀನಿವಾಸಯ್ಯನ ಭೇಟಿ ಆದದ್ದು ಈಗಲೂ ನೆನಪಿದೆ. ನಾನು ಬೆಂಗಳೂರಿಗೆ ಬರುವ ವೇಳೆಗೆ ಶರ್ಮಾಜಿ ಬಂಧನದಿಂದ ಬಂದಿದ್ದರು. ಮಲ್ಲೇಶ್ವರದ 11ನೆಯ ಕ್ರಾಸಿನಲ್ಲಿ ಅವರ ವಾಸ. ನಾನು ಬೆಂಗಳೂರಿಗೆ ಬಂದ ಮಾರನೆಯ ದಿನವೇ ಅವರ ಸಂದರ್ಶನಕ್ಕೆ ಹೋದೆ. ಶರ್ಮಾಜಿ ನನಗೆ ಬಹಳ ದಿನಗಳ ಪರಿಚಯ. ನಮ್ಮ ತಂದೆಯವರ ಕಾಲದ ಪರಿಚಯ. ಅಂತೇ ನನಗೆ ಯಾವ ಸಂಕೋಚವೂ ಇರಲಿಲ್ಲ. ನಾನು ಹೋದಾಗ ಶರ್ಮಾಜಿ ಅವರ ಮನೆಯ ಮುಂದಲ ಜಗಲಿಯಲ್ಲಿ ಕುಳಿತಿದ್ದರು. ಬೆಳಿಗ್ಗೆ 8 ಘಂಟೆಯ ಸಮಯ ಎದುರು ಮೂರು ಜನ ಕುಳಿತಿದ್ದರು. ಎಲ್ಲ ಖಾದಿಧಾರಿಗಳೇ, ಹೋಗಿ ನಮಸ್ಕಾರ ಮಾಡಿದಮೇಲೆ ಶರ್ಮಾಜಿ ಕೇಳಿದರು. "ಏನು ಇಂಜನಿಯರಿಂಗ್ ಕಾಲೇಜಿಗೆ ಸೇರಿಯಾಯಿತೆ ? ನೀನು ಬರುತ್ತೀ ಎಂದು ಶ್ರೀನಿವಾಸನ್‌ಗೆ (ಎನ್. ಎಸ್ ವಾಸನ್ ಕಂಪೆನಿ ಮಾಲೀಕರು ಓ. ಶ್ರೀನಿವಾಸನ್) ನಿಮ್ಮ ತಂದೆ ಹೇಳಿದ್ದರಂತೆ" ಎಂದರು. "ನಾಳೆ ನಾಳಿದ್ದರಲ್ಲಿ ಸೇರುತ್ತೇನೆ ಶರ್ಮಾಜಿ" ಎಂದೆ.

"ರಂಗಾಚಾರ್, ಇವರು ಗೋಪಾಲಕೃಷ್ಣ, ಇವರು ಶ್ರೀನಿವಾಸಯ್ಯ, ಇವರು ಕೃಷ್ಣಸ್ವಾಮಿ. ಶ್ರೀನಿವಾಸಯ್ಯ, ಈ ಹುಡುಗ ನನ್ನ ತುಂಬಾ ಹಳೆಯ ಸ್ನೇಹಿತ ಹಿರಿಯಣ್ಣನಂತಿರುವ ವೆಂಕಟಾಚಾರ್ಯರ ಮಗ" ಎಂದು ಶರ್ಮಾಜಿ ನಮಗೆ ಪರಿಚಯ ಮಾಡಿಸಿದರು. ಅಂದಿನ ಆ ಪರಿಚಯ ಮುಂದೆ ಗಾಢ ಗೆಳೆತನವಾಗಿ ಬೆಳೆದಿದೆ. ಅಂದು ಕಂಡ ಮೂವರಲ್ಲಿ ಒಬ್ಬರು ಈಗಿಲ್ಲ. ಗೆಳೆಯ ಗೋಪಾಲಕೃಷ್ಣರಾಯರು ಹಲವು ವರ್ಷಗಳ ಹಿಂದೆ ನಮ್ಮನ್ನು ಅಗಲಿದರು. ಕೃಷ್ಣಸ್ವಾಮಿ–ನಮಗೆಲ್ಲ ಕಿಟ್ಟಿ–ಪ್ರಜೆಯಲ್ಲಿದ್ದಾನೆ. ಶ್ರೀನಿವಾಸಯ್ಯ ಬೆಂಗಳೂರಿನಲ್ಲೇ ಉಳಿದು, ಇಂದು ತಾನೇ ಒಂದು ಸಂಸ್ಥೆ ಆಗಿದ್ದಾನೆ. ಆಲದ ಮರದಂತೆ!

ಸದಾ ಹಸನ್ಮುಖಿ ಕಾರ್ಯಕರ್ತ ಶ್ರೀನಿವಾಸಯ್ಯ ಒಂದೇ ಎರಡೇ, ನಾಲ್ಕಾರು ಸಂಘಗಳನ್ನು ಕಟ್ಟಿ ನಡೆಸಿದ ಧೀರ ಚೇತನ. ನಮ್ಮ ಗಾಂಧೀ ಸಾಹಿತ್ಯ ಸಂಘಕ್ಕಂತೂ ಆಧಾರಸ್ತಂಭ! ಅವನ ಇಂದಿನ ವಿಶ್ವರೂಪದ ಕುರುಹುಗಳನ್ನು ನಾನು ವಿದ್ಯಾರ್ಥಿ ದೆಸೆಯಲ್ಲೇ ಗುರುತಿಸಿದ್ದೆ. ಏಕೆಂದರೆ ಅವನ ಸತತವಾದ ಚಟುವಟಿಕೆ, ಬಹುಮುಖದ ಚುರುಕು ಆಗಲೇ ಗೊತ್ತಾಗಿತ್ತು. ನಮ್ಮ ಕಾಲೇಜು ಮುಗಿದಾದ ಮೇಲೆ ಒಂದು ತಿಂಗಳ ಕಾಲ ದೊಡ್ಡಬಳ್ಳಾಪುರದ ಹತ್ತಿರ ಐದು ಹಳ್ಳಿಗಳಲ್ಲಿ ಕ್ಯಾಂಪ್ ನಡೆಸಿದೆವು. ನೂರು ವಿದ್ಯಾರ್ಥಿಗಳನ್ನ ಸಂಗ್ರಹಿಸಿ, ಗ್ರಾಮ ನೈರ್ಮಲ್ಯ, ಅಕ್ಷರ ಪ್ರಚಾರ,

ಆರ್ಥಿಕ ಸಮೀಕ್ಷೆ ಎಲ್ಲ ನಡೆಸಿದೆವು. ಶರ್ಮಾಜಿ ಇವೆಲ್ಲದರ ಪ್ರೇಕ್ಷಕರು. ಈ ಎಲ್ಲ ಕೆಲಸವನ್ನ ನಿರ್ದಾಕ್ಷಿಣ್ಯವಾಗಿ ನಮ್ಮಿಂದ ತೆಗೆಯಲು ಈ ನಕ್ಷತ್ರಿಕ ಶ್ರೀನಿವಾಸಯ್ಯ ! ನಮ್ಮ ಇನ್ನೊಬ್ಬ ಗೆಳೆಯ ಸಿ. ಶ್ರೀನಿವಾಸನ್ ಶ್ರೀನಿವಾಸಯ್ಯನನ್ನ Sleve Driver "ಎಂದೇ ಕರೆಯುತ್ತಿದ್ದ ! ಆ Sleve Driver ಇಂದು ಒಂದು ತುಂಬು ಜೀವನ ನಡೆಸಿ ಬಹಳ ಜನಕ್ಕೆ ಚೇತನದ ದೀವಿಗೆಯಾಗಿದ್ದಾನೆ. ಈಗಲೂ ಅದೇ ಸರಳತೆ, ಅದೇ ನಗುಮುಖ, ಅದೇ ಚಟುವಟಿಕೆ ! ಕಳೆದ ವರ್ಷಗಳ ಕುರುಹು ಬರಿಯ ಕಲೆಯಲ್ಲಿ ಉಳಿದಿರುವ ನಾಲ್ಕು ಬಿಳಿ ಕೂವಲಲ್ಲಿ ಕಾಣುತ್ತದೆಯೆ ವಿನಾ ಬೇರಾವ ರೀತಿಯಲ್ಲೂ ಕಾಣುವುದಿಲ್ಲ.

ಕೆಲ ತಿಂಗಳ ಹಿಂದೆ ಸಂಸಾರದೊಂದಿಗೆ ನಾನಿರುವ ಪೂರ್ವೋತ್ತರ ಸೀಮೆಷಿಲ್ಲಾಂಗ್‌ಗೆ ಬಂದಿದ್ದ. ಒಂದು ವಾರ ಕಳೆದ. ಊರು ಜಾಗ ನೋಡಬೇಕೆನ್ನುವ ಆತನ ಕುತೂಹಲ ಕಷ್ಟ ಸಹಿಷ್ಣುತೆ ಸರಳತೆ ನಮ್ಮನ್ನೆಲ್ಲ ಬೆರಗು ಮಾಡಿದವು. ನನಗಂತೂ ಸರಿಯೆ ನಮ್ಮ ಮನೆಯವರ ಮನೆಮಕ್ಕಳ ಮನಸೂರೆಮಾಡುವಂಥ ಅವನ ಹಸನ್ಮುಖ ಪ್ರವೃತ್ತಿ !

ತುಂಬ ಹತ್ತಿರದ ಗೆಳೆಯನ ಬಗ್ಗೆ ತುಂಬ ಬರೆಯಲು ಸಾಧ್ಯವಿಲ್ಲ. ಮನದ ಭಾವನೆಗಳ ತುಡಿತಕ್ಕೆ ಕೈಯ ಲೇಖನಿಯ ಗತಿ ಸಾಲದು. ಅಂತೇ ಈ ನಾಲ್ಕು ಮಾತುಗಳು. ಅವನ ವ್ಯಕ್ತಿತ್ವದ ಏನೇನೂ ಪರಿಚಯ ಕೊಡಲಾರವು. ನನ್ನ ಅವನ ಗೆಳೆತನ ನಿಕಟತೆ ಭಾಷೆಗೆ ಮೀರಿ ನಿಂತಿವೆ. ನನಗೆ ಅವನ ಗೆಳೆತನ ಜೀವನಕ್ಕೆ ಒಂದು ಪೂರ್ಣತೆ ಕೊಟ್ಟಿದೆ. ನಮ್ಮೆಲ್ಲರನ್ನ ನಡೆಸುವ ಆ ದಿವ್ಯಶಕ್ತಿ ಭಗವಂತ ಅವನಿಗೆ ಕುಟುಂಬಕ್ಕೆ ಪೂರ್ಣ ಆಯುರಾರೋಗ್ಯ ಕೊಡಲಿ, ನಮ್ಮ ಗೆಳೆತನ ಕುಂದದಿರಲಿ ಎಂದು ಪ್ರಾರ್ಥಿಸುತ್ತೇನೆ.

# ವ್ಯಕ್ತಿತ್ವದ ಕಿಂಡಿನೋಟ

ವೈ. ಎಸ್. ಕೆ. ರಾವ್

ಕೆಲ ವ್ಯಕ್ತಿಗಳ ಪರಿಚಯದ ಹಿಂದೆ ತುಸು ಸೋಜಿಗ ಅಡಗಿರುತ್ತದೆ. ಅವರ ಪರಿಚಯ ನೇರವಾಗಿ ಆಗದೆ ಕೆಲಸನ್ನಿವೇಶಗಳಲ್ಲಿ ಕೆಲ ಅನ್ಯ ವ್ಯಕ್ತಿಗಳ ಮೂಲಕ ಆಗುವುದುಂಟು. ನನಗೆ ಶ್ರೀ ಹೊ. ಶ್ರೀನಿವಾಸಯ್ಯನವರ ಪರಿಚಯವಾದುದು ಹಾಗೆ.

ಸುಮಾರು 20-22 ವರ್ಷ ಹಿಂದಿನ ಮಾತು. 1961ರ ಆಸು ಪಾಸು. ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮರು ಗಾಂಧಿ ಸಾಹಿತ್ಯ ಸಂಘದ ಸೂತ್ರಧಾರರಾಗಿದ್ದು ಯುವಜನ ತಂಡದ ನೇತಾರರೂ ಹಾಗೂ ಪಥದರ್ಶಕರೂ ಆಗಿದ್ದ ಕಾಲ. ನಾನೂ ಸಹ ಗಾಂಧಿ ಸಾಹಿತ್ಯ ಸಂಘದ ವಿವಿಧ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದೆ. ಶರ್ಮಾಜಿಯವರು 1942 ರ ಸ್ವಾತಂತ್ರ್ಯ ಚಳುವಳಿ ಕಾಲದಲ್ಲಿ ಸಿಂಹ ಘರ್ಜನೆಯ ವೀರ, ಯುವಜನರ ಸ್ಫೂರ್ತಿ, ಹೋರಾಟಗಾರರ ಆಶಾಕಿರಣ ಹಾಗೂ ಪೋಲೀಸರ ಕಣ್ಣಿನ ಕಿರುಕುಳ. ಆದರೆ 60 ರ ಸುಮಾರಿಗಾಗಲೇ ಅವರು ರಾಜಕೀಯದಿಂದ (ಆವೇಳೆಗೆ ಪ್ರಾಯಃ ರಾಜಕೀಯದ ಪಟ್ಟು ಪಗಡದಸ್ತುಗಳನ್ನು ಕಂಡು ಅವರ ಮನಸ್ಸು ರೋಸಿದ್ದಿರಬಹುದು) ದೂರ ಸರಿದು ಕರ್ಮಯೋಗಿಯಾಗಿ ಮಲ್ಲೇಶ್ವರದಲ್ಲಿ ನೆಲೆಸಿದ್ದರು. ಗಾಂಧಿ ಸಾಹಿತ್ಯ ಸಂಘ ಅವರ ಸಮಾಜಸೇವಾಕಾರ್ಯ ಚಟುವಟಿಕೆಗಳ ಕೇಂದ್ರ ಬಿಂದು.

ಅಂದು ಮಹತ್ವ ಪೂರ್ಣ ವಿಷಯವೊಂದರ ಬಗ್ಗೆ ಶರ್ಮಾಜಿಯವರು ನಮ್ಮೊಡನೆ ಮಾತನಾಡುತ್ತಿದ್ದರು. ನಮಗೆ ತಿಳಿದಂತೆ ನಾವು ಸಹ ಕೆಲವರು ಸೂಚನೆಕೊಡುತ್ತಿದ್ದೆವು. ಕೊನೆಗೆ ಶರ್ಮಾಜಿಯವರು ತೀರ್ಮಾನ ಕೊಡಬೇಕಿತ್ತು, ಆದರೆ ಅವರು 'ಆಗಲಿ ನೋಡೋಣ ! ಶ್ರೀನಿವಾಸಯ್ಯ ಬರಲಿ. ಒಂದು ತೀರ್ಮಾನಕ್ಕೆ ಬರೋಣ' ಎಂದು ಸುಮ್ಮನಿದ್ದರು. ಶರ್ಮಾಜಿಯವರು ಇಷ್ಟು ಆತ್ಮೀಯರೆಂದು ಹೆಸರಿಸಿದ ಶ್ರೀನಿವಾಸಯ್ಯ ಯಾರೆಂದು ನೋಡಬೇಕೆಂದು ಕುತೂಹಲ ನನಗಾದುದು ಅಂದೇ.

ಅದು ಕಳೆದ ಸುಮಾರು ಒಂದುವಾರದ ಅಂತರದಲ್ಲಿ ಶ್ರೀ ಶರ್ಮಾಜಿಯವರು ನಾವು ಕೆಲವರು ಸೇರಿದ್ದ ಗೋಷ್ಠಿಯಲ್ಲಿ, ಶಿಕ್ಷಣ, ಶಾಲಾಕಾಲೇಜುಗಳು ಮತ್ತು

ಮಾನವನ ಪ್ರಗತಿ ಬಗ್ಗೆ ಮಾತನಾಡುತ್ತ ಅಪೂರ್ವ ಮೌಲಿಕ ವಿಷಯುಗಳನ್ನು ಹೊರಗೆಡಹಿದರು. ನನಗೆ ನಾನು ಶಿಕ್ಷಣ ಕ್ಷೇತ್ರವಲ್ಲಿ ಸಾಕಷ್ಟು ಪಾರಂಗತನೆಂಬ ಭಾವನೆ ಇತ್ತು. ಆದರೆ ಅಂದು ಶರ್ಮಾಜಿಯವರು ಚೆಲ್ಲಿದಂಥ ನೈಜ ಹಾಗೂ ಸಮೀಚೀನ ವಿಚಾರಧಾರೆಯನ್ನು ಹಿಂದೆಂದೂ ನಾನು ಕೇಳಿರಲಿಲ್ಲ. ಅಂದು ಸಹ "ಶ್ರೀನಿವಾಸಯ್ಯ ಏಕೋ ಕೆಲದಿನಗಳಿಂದ ಕಾಣಲಿಲ್ಲ" ಎಂದರು ಶರ್ಮಾಜಿ ! ಇದ ರಿಂದಾಗಿ ಶ್ರೀನಿವಾಸಯ್ಯನವರು ಯಾರೆಂದು ನೋಡಬೇಕೆಂಬ ಕುತೂಹಲ ನನ್ನಲ್ಲಿ ಇಮ್ಮಡಿಸಿತು.

ಪ್ರಾಯಃ ಶರ್ಮಾಜಿಯವರಿಗೆ ಅಂದು ತಾವು ಹೊರಗೆಡಹಿದ ಸ್ವಂತ ವಿಚಾರ ಗಳಿಗೆ ಮೂರ್ತರೂಪ ಕೊಡಬೇಕೆಂಬ ಭಾವನೆ ಇತ್ತೋ ಏನೋ ! ಅದು ಸಂಭವಿಸಿ ದ್ದರೆ ಎಂತಹ ಮಹತ್ವಪೂರ್ಣ ವಿದ್ಯಾಪೀಠದ ನಿರ್ಮಾಣವಾಗುತ್ತಿತ್ತೋ ! ಆದರೆ ಕನಸು ನನಸಾಗುವ ಮೊದಲೆ ಅವರನ್ನು ವಿಧಿ ಸೆಳೆದುಕೊಂಡಿತ್ತು.

ಮುಂದೆ ಕೆಲವು ದಿನಗಳಲ್ಲಿಯೇ ನನಗೆ ಶ್ರೀನಿವಾಸಯ್ಯ ಅವರ ಪರಿಚಯವಾ ಯಿತು. ಅಂದು ನಾನು ಗಾಂಧೀ ಸಾಹಿತ್ಯ ಸಂಘಕ್ಕೆ ಹೋದಾಗ ಶ್ರೀ ಕಸ್ತೂರಿ ಮತ್ತು ಇತರ ಕೆಲವರೊಡನೆ ಶರ್ಮಾಜಿ ಮಾತನಾಡುತ್ತಿದ್ದರು. ಅವರ ಹೆಚ್ಚು ವಿಚಾರ ಮಂಥನ ಸನಿಹದಲ್ಲೇ ಗೋಡೆಯೋರಗಿ ಮೌನವಾಗಿ ನಿಂತಿದ್ದ ವ್ಯಕ್ತಿಯೊಬ್ಬ ರತ್ತ ಕೇಂದ್ರೀಕೃತವಾಗಿತ್ತು. ಶರ್ಮಾಜಿ ಕೊನೆಯಲ್ಲಿ ಕೊಟ್ಟ ತೀರ್ಮಾನಕ್ಕೆ ಆವ್ಯಕ್ತಿ ಗೋಣಲ್ಲಾಡಿಸಿ ಸಮ್ಮತಿ ಸೂಚಿಸಿತು. ಅಂದು ನನಗೆ ಪರಿಚಯವಾಯಿತು ಶ್ರೀನಿವಾಸಯ್ಯ ಯಾರೆಂದು.

ಅಂದಿನಿಂದ ಇಂದಿನವರೆಗೆ ನಾನು ಶ್ರೀ ಶ್ರೀನಿವಾಸಯ್ಯ ಅವರೊಡನೆ ಬೆಳೆಸಿ ಕೊಂಡ ಸಂಪರ್ಕ ಸಹ ಅಷ್ಟೇನೂ ಹೇಳಿಕೊಳ್ಳುವಂಥದಲ್ಲ. ಸರಕಾರಿ ನೌಕರಿಯ ಸುಳಿಯಲ್ಲಿ ಸಿಕ್ಕಿ 'ದಿಲ್ಲಿ–ದ್ವೀಪಾಂತರ' ಎನ್ನುವಂತೆ ದೇಶದ ನಾನಾ ಭಾಗಗಳಲ್ಲಿದ್ದು ಬರಬೇಕಾದ ಬವಣೆಯಲ್ಲಿ ಆ ಸದವಕಾಶ ನನಗೆ ಅಷ್ಟಾಗಿ ದೊರಕಲಿಲ್ಲ. ಆದರೆ ಶ್ರೀನಿವಾಸಯ್ಯ ಅವರ ವ್ಯಕ್ತಿತ್ವ ನನ್ನ ಮನಸ್ಸಿನಲ್ಲಿ ಅಚ್ಚಳಿಯದಂತೆ ಉಳಿಯಿತು. ಸ್ಥೂಲವಾಗಿ ನಿಂತಿರುವ ಅದರ ರೂಪ-ಶ್ರೀನಿವಾಸಯ್ಯ, ಮಿತಭಾಷಿ, ಸೇವಾಕಾಂಕ್ಷಿ, ಕರ್ಮ ನಿಷ್ಠಾಪರ, ಮತ್ತು ಹಿರಿಯ ಹುದ್ದೆಯಲ್ಲಿದ್ದರೂ ಅತ್ಯಂತ ಕೆಳದರ್ಜೆಯ ಕೆಲಸಗಾರರ ಕಷ್ಟ-ಸುಖಗಳಲ್ಲೂ ಪಾಲ್ಗೊಳ್ಳುವ ಉದಾತ್ತ ವ್ಯಕ್ತಿ, ಆಡುವ ಮಾತಿನ ಅರ್ಥ ತಿಳಿದ ವ್ಯಕ್ತಿ. ಅವರ ವ್ಯಕ್ತಿತ್ವದ ಹೊರಮೈ ತುಸು ಕಠಿಣವಾಗಿ ತೋರಿದರೆ ಒಳಮೈ ಅಷ್ಟೇ ಮೃದು ಹಾಗೂ ಸ್ಪಂದನ ಶೀಲ.

"ಎನಿತುವನು ಬಣ್ಣಿಸಲೊಪ್ಪದಯ್ಯ" ಎಂದು ಕವಿ ರಾಘವಾಂಕ ಹರಿಶ್ಚಂದ್ರನನ್ನು ಕುರಿತು ವಸಿಷ್ಠವಾಣಿಯಲ್ಲಿ ಹೇಳುತ್ತಾನೆ. ಆದರೆ ವ್ಯಕ್ತಿಯೊಬ್ಬರ ಬಗ್ಗೆ ಬರೆಯುವಾಗ ಉತ್ಪ್ರೇಕ್ಷೆ ಅಪಚಾರವಾಗಬಹುದೇ ಹೊರತು ಮೆಚ್ಚಿಕೆ ಅಪರಾಧವಾಗಲಾರದು. ನೈಜ ಅನಿಸಿಕೆ ಹಾಗೂ ಮೆಚ್ಚಿಕೆಯನ್ನು ಒಬ್ಬ ಕ್ರಿಯಾಶೀಲ ವ್ಯಕ್ತಿ ಬಗ್ಗೆ ಸೂಚಿಸುವುದು ಅಪೇಕ್ಷಣೀಯ. ಏಕೆಂದರೆ ಅದು ಸಂಯಮದಿಂದ ಕೂಡಿದ ನಿರಪೇಕ್ಷ ಅಭಿವ್ಯಕ್ತಿಯೇ ಹೊರತು ಉತ್ಪ್ರೇಕ್ಷೆಯಲ್ಲ. ಈ ನಿಟ್ಟಿನಲ್ಲಿ ಶ್ರೀ ಹೊ. ಶ್ರೀನಿವಾಸಯ್ಯ ಅವರದು ಅಭಿನಂದನೀಯ ವ್ಯಕ್ತಿತ್ವ. ಅವರ ಒಂದು ಮುಖ ತುಂಬು ಗಂಗೆಯ ಗಾಂಭೀರ್ಯ ಎಂದರೆ ಇನ್ನೊಂದು ಎಲ್ಲಡೆಯೂ ಹರಿವ ತೊರೆಯ ಮಧುರನಾದ. ಸಾಮಾನ್ಯವಾಗಿ ಅವರು ಪ್ರವೇಶಿಸದ ಸೇವಾ ಕ್ಷೇತ್ರವಿಲ್ಲ; ಮಾಡದ ಸೇವೆಯಿಲ್ಲ. ಎಲ್ಲಿ ಕಾರ್ಖಾನೆ, ಎಲ್ಲಿ ಗಾಂಧಿ ಸಾಹಿತ್ಯ ಸಂಘ ; ಎಲ್ಲಿ ಸಹಕಾರ ಸಂಸ್ಥೆಗಳು ಎಲ್ಲಿ ದೇವಸ್ಥಾನಗಳ ಜೀರ್ಣೋದ್ಧಾರ ! ಎಲ್ಲಿ ಸ್ವಾತಂತ್ರ್ಯ ಸಂಗ್ರಾಮ ರಂಗ ಎಲ್ಲಿ ಪ್ರಕೃತಿ ಜೀವನ ಕೇಂದ್ರ ಹಾಗೂ ಯೋಗಾಸನ ! ಎಲ್ಲಿ ಶಿಕ್ಷಣ ಸಂಸ್ಥೆಗಳು ಎಲ್ಲಿ ಗ್ರಾಮಾಂತರ ಅಭಿವೃದ್ಧಿ ಸಂಸ್ಥೆಗಳು ! ಮತ್ತು ಎಲ್ಲ ವಿವಿಧ ಕ್ಷೇತ್ರಗಳ ಕನ್ನಡ ಸಂಘಗಳು, ಬಡ ವಿದ್ಯಾರ್ಥಿಗಳ ನೆರವಿಗಾಗಿ ಟ್ರಸ್ಟುಗಳು, ಯಾರಿಗಾದರೂ ಇದು ಬಹುಮುಖಿ, ಪ್ರತಿಭೆ ಅನಿಸಲು ಸಾಕು ಮತ್ತು ಇವೆಲ್ಲದರಲ್ಲೂ ಕಾರ್ಯನಿಷ್ಠೆಯಿಂದಾಗಿ ಗಳಿಸಿದ ಕೀರ್ತಿ ಹಾಗೂ ಸಫಲತೆ ಶ್ರೀನಿವಾಸಯ್ಯನವರ ವ್ಯಕ್ತಿತ್ವಕ್ಕೆ ಕಲಶವಿಟ್ಟಂತೆ. ನೋಟಕ್ಕೆ ಅತ್ಯಂತ ಸರಳ ವ್ಯಕ್ತಿ, ಆದರೆ ಅತೀವ ಧರ್ಮ ಶ್ರದ್ಧೆಯುಳ್ಳ ವ್ಯಕ್ತಿತ್ವ. ಕಾವ್ಯ ಭಾಷೆಯಲ್ಲಿ ಹೇಳುವುದಾದರೆ ಇದು ಮಣಿ ಕಾಂಚನ ಸಂಯೋಗ.

ಈಚೆಗೆ ಸಂಯೋಗದಿಂದ ಕಾರ್ಯ ಕ್ಷೇತ್ರದಲ್ಲಿ ನನಗೆ ಅವರ ವ್ಯಕ್ತಿತ್ವ ಪರಿಚಯ ಹೆಚ್ಚಾಗ ತೊಡಗಿದೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ತೊಡಗಿದ್ದಾಗ ಅವರು ಭಾಗವಹಿಸಿದ್ದ ವಿಭಿನ್ನ ಚಟುವಟಿಕೆಗಳನ್ನು ಕುರಿತ ಸಾಕ್ಷ್ಯಗಳ ಒಂದೆರಡು ಕಡತಗಳನ್ನು ನೋಡುವ ಅವಕಾಶ ನನಗೊದಗಿತು. ನಾನು 1942 ರ ಚಳುವಳಿಯಲ್ಲಿ ಸೇರಿದ್ದು ಜೈಲು ಕಂಡಿದ್ದವನು. ಅವರ ಕಡತಗಳನ್ನು ಕಂಡು ನನಗೆ ಅವರ ಬಗ್ಗೆ ಬಹಳ ಶ್ರದ್ಧೆಯುಂಟಾಯಿತು. ಸ್ವಾತಂತ್ರ್ಯ ಸಂಗ್ರಾಮ ಕಾಲದ ಅನೇಕ ಚಟುವಟಿಕೆಗಳ ಪೂರ್ಣ ಚಿತ್ರ ಕಣ್ಣ ಮುಂದೆ ಸುಳಿದಂತಾಯಿತು. ಆ ಕಡತಗಳು ಒಂದು ಅಪೂರ್ವ ಸಂಗ್ರಹ. ಶೋಧಕಾರ್ಯ ಮಾಡುವವರಿಗೆ ಒಂದು ನಿಧಿ. ಮೊನ್ನೆ ಕಾರ್ಯ ನಿಮಿತ್ತ ಅವರನ್ನು ಭೇಟಿಯಾಗುವ ಸಲುವಾಗಿ ಅವರ ನಿವಾಸಕ್ಕೆ ಹೋದೆ. ಸುಮಾರು 15-20 ಜನರನ್ನೊಳಗೊಂಡ ಸಭೆ ನಡೆದಿತ್ತು. ಶ್ರೀನಿವಾಸಯ್ಯನವರ ಅಧ್ಯಕ್ಷತೆ. ಸಮಯ ಹೊಂದಲಿಲ್ಲವೆಂದು ಬಗೆದು ಹಿಂದಿರುಗಲನುವಾದೆ. ಆದರೆ

ಶ್ರೀನಿವಾಸಯ್ಯನವರು ಆತ್ಮೀಯತೆಯಿಂದ ನನ್ನನ್ನು ಕರೆದು ಕುಳ್ಳಿರಿಸಿದರು. ಅದು ಚೌದರಿ ಕೊಪ್ಪಲಿನ ಶ್ರೀರಾಮ ಯುವಕ ರೈತರ ಸಂಘದ ಪ್ರತಿ ತಿಂಗಳೂ ನಡೆಯುವ ಒಂದು ಸಭೆ. ಅಂದು ಅವರ ಗೃಹದಲ್ಲಿ ಸೇರಿತ್ತು. ಶ್ರೀನಿವಾಸಯ್ಯನವರ ಹುಟ್ಟೂರು ಚೌದರಿ ಕೊಪ್ಪಲಿನಿಂದ ಬೆಂಗಳೂರಿಗೆ ಉದ್ಯೋಗದ ಕಾರಣದಿಂದಾಗಿ ಸಿಡಿದು ಬಂದ ವಿದ್ಯಾವಂತರು ಆ ಸಂಘದ ಸದಸ್ಯರು. ಈವರೆಗಾಗಲೇ ಈ ಸಂಘದ ಪ್ರಯತ್ನ ದಿಂದಾಗಿ ಚೌದರಿ ಕೊಪ್ಪಲು ಆಧುನಿಕ ಸೌಲಭ್ಯಗಳನ್ನು ಪಡೆದ ಪ್ರಗತಿಪರ ಗ್ರಾಮ ವಾಗಿ ಪರಿಣತವಾಗಿದೆ.

ಉದ್ಯೋಗದ ಕಾರಣದಿಂದ ಪಟ್ಟಣಗಳನ್ನು ಸೇರಿದ ವಿದ್ಯಾವಂತರು ತಮ್ಮ ಹುಟ್ಟೂರನ್ನು ನೆನಪಿಟ್ಟುಕೊಂಡು ಅದರ ಅಭಿವೃದ್ಧಿಯ ಸಲುವಾಗಿ ಶ್ರಮಿಸುವ ಇಂತಹ ಉದಾತ್ತ ಉದಾಹರಣೆಗಳು ಬಹು ವಿರಳ ಇದರ ಅಧ್ವರ್ಯು ಶ್ರೀ ಶ್ರೀನಿ ವಾಸಯ್ಯ. "ವಿದ್ಯಾವಂತರೇ ನಿಮ್ಮ ಹಳ್ಳಿಗಳಿಗೆ ಹಿಂದಿರುಗಿ ಅದು ನಿಮ್ಮನ್ನು ಕರೆಯು ತ್ತಿದೆ" ಎಂದು ಗಾಂಧೀಜಿಯವರು ಬೋಧಿಸುತ್ತಿದ್ದರು. ಆದರೆ ಈ ಸಭೆಯನ್ನು ಕಂಡು ಪಟ್ಟಣಗಳಲ್ಲಿದ್ದು ವಿದ್ಯಾವಂತರು ತಮ್ಮ ಹಳ್ಳಿಗಳ ಅಭ್ಯುದಯಕ್ಕಾಗಿ ಶ್ರಮಿಸಬಹುದು ಮತ್ತು ಇದರಿಂದ ಸಹ ಗಾಂಜೀಜಿಯವರ ಧ್ಯೇಯ ನೆರವೇರುವುದು ಸಾಧ್ಯ ಎನಿಸಿತು ನನಗೆ.

ಥಕ್ಕರ್ ಬಾಪಾ ಅವರಿಂದ ಸ್ಫೂರ್ತಿಗೊಂಡು ದಲಿತ ಪ್ರದೇಶ ನಿರ್ಮಲೀಕರಣ ಹಾಗೂ ದಲಿತೋದ್ಧಾರಕ್ಕಾಗಿ ತಮ್ಮ ಪ್ರಾಯದ ದಿನಗಳಲ್ಲಿ ಅನೇಕ ವರ್ಷ ಶ್ರಮಿಸಿದ ರೆಂಬುದು ಶ್ರೀ ಶ್ರೀನಿವಾಸಯ್ಯನವರು ಶೋಷಿತರ ಹಾಗೂ ದಲಿತರ್ಬಂಧುವೆಂಬುದಕ್ಕೆ ಸಾಕ್ಷಿಯಾಗಿದ್ದು ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಲ್ಲಿ ಅವರಿಗಿರುವ ನಿಷ್ಠೆ ಯನ್ನು ಸೂಚಿಸುತ್ತದೆ.

ಇದಿಷ್ಟು ವಿಭಿನ್ನ ಸೇವಾಸಂಸ್ಥೆಗಳ ಸುರುಳಿಯಲ್ಲಿ ಸುತ್ತಿಕೊಂಡಿರುವ ಈ ಸಮಾಜ ಸೇವಾ ಧುರೀಣ ವ್ಯಕ್ತಿಗೆ ಲೇಖನ ಹಾಗೂ ಪುಸ್ತಕಗಳ ಬರಹಕ್ಕೆಂದು ಹೇಗೆ ಸಮಯ ಸಿಕ್ಕಿದೆಯೋ ಅದೊಂದು ಸೋಜಿಗ. ಅವರ ನಾಕಂಡ ಜರ್ಮನಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿದೆಯಾದರೆ ಅವರ ಇತರೆ ಕೆಲವು ಪುಸ್ತಕ ಗಳೇ ಅಲ್ಲದೆ ವಿವಿಧ ವಿಷಯಗಳನ್ನು ಕುರಿತು ಅನೇಕ ವಿಚಾರ ಪೂರಿತ ಲೇಖನಗಳು ಪ್ರಕಾಶನ ಕಂಡಿವೆ.

ಈ ನನ್ನ ಲೇಖನವನ್ನು ಸಮಾಪ್ತಿಯತ್ತ ಹೊರಳಿಸುವ ಮೊದಲು ಒಂದು ಮಾತು ಹೇಳದಿರಲಾರೆ.

ಅರ್ಹತೆ ಇರದಿದ್ದರೂ ಸನ್ಮಾನಿತರಾಗುವವರು ಹಲವರು. ಅರ್ಹತೆಯಿದ್ದೂ ಸನ್ಮಾನಿತರಾಗದವರು ಅನೇಕರು. ಆದರೆ ಅರ್ಹತೆ ಇದ್ದು ಸನ್ಮಾನಿತರೂ ಆಗುವವರು ಬಹುತೇಕ ಕಡಿಮೆ. ಈ ಅಲ್ಪ ಸಂಖ್ಯಾಕರಲ್ಲಿ ನಮ್ಮ ನೆಚ್ಚಿನ ಶ್ರೀನಿವಾಸಯ್ಯನವರು ಗಣನೆಗೊಂಡುದು ಅವರ ಪುಣ್ಯ ಮತ್ತು ನಮ್ಮ ಭಾಗ್ಯವೆಂದರೆ ಅಸಹಜವಾಗದೆಂದೇ ನನ್ನ ಅನಿಸಿಕೆ.

ದೇವರು ಶ್ರೀಯುತರಿಗೆ ದೀರ್ಘಾಯಸ್ಸು ಮತ್ತು ಆರೋಗ್ಯ ಇಕೋತೋಪ್ಯಸ್ಯ ತಿಶಯವಾದ ಸಮಾಜ ಸೇವಾ ಶಕ್ತಿ ಹಾಗೂ ಸಫಲತೆ ಕರುಣಿಸಲೆಂದು ಬಿಚ್ಚು ಹೃದಯದಿಂದ ಹಾರೈಸುತ್ತೇನೆ.



# ಸ್ವದೇಶಾಭಿಮಾನಿ

ಎಸ್. ಎಂ. ಕೆ

ಸುಮಾರು ಹನ್ನೊಂದು ವರ್ಷಗಳ ಹಿಂದೆ ನನಗೆ ಕೆಲಸಕ್ಕಾಗಿ ಒಂದು ಕಡೆ ಸಂದರ್ಶನದ ಕರೆ ಬಂದಿತ್ತು. ಪರಿಚಿತರೊಬ್ಬರು ನನ್ನನ್ನು ಶ್ರೀನಿವಾಸಯ್ಯನವರ ಮನೆಗೆ ಕರೆದುಕೊಂಡು ಹೋಗಿ ಪರಿಚಯ ಮಾಡಿಸಿ ಕೆಲಸ ಕೊಡಿಸುವಂತೆ ಹೇಳಿದ್ದರು. ಅಲ್ಲದೆ ಆಗಾಗ್ಗೆ ಹೋಗಿ ಅವರನ್ನು ನೋಡಿ ಬರಲು ನನಗೆ ತಿಳಿಸಿದ್ದರು. ಅದರಂತೆ ನಾನು ಎರಡು ಮೂರು ದಿನಕ್ಕೊಮ್ಮೆ ಹೋಗಿ ಅವರನ್ನು ಕಂಡು ಬರುತ್ತಿದ್ದೆ. ಬೆಳಿಗ್ಗೆ ನಾನು ಹೋಗುವಷ್ಟರಲ್ಲಿ ಅವರು ಬೆಳಗಿನ ವಾಯು ವಿಹಾರ ಮುಗಿಸಿಕೊಂಡು ಮನೆಯಲ್ಲಿ ವ್ಯಾಯಾಮ, ಯೋಗಾಸನ, ಪೂಜಾಕಾರ್ಯಗಳಲ್ಲಿ ಮಗ್ನರಾಗಿರುತ್ತಿದ್ದರು. ಅಂದು ನಾನು ಕಂಡ ಅವರ ಸರಳತೆ, ಸಹೃದಯತೆ, ಶಿಸ್ತಿಗೆ ಆಕರ್ಷಿತನಾದೆ. ಇವರ ಮಡಿ. ಆಚಾರವಂತಿಕೆ ಪೂಜಾ ವಿಧಿಗಳನ್ನು ಕಂಡು ಶ್ರೀನಿವಾಸಯ್ಯನವರು ಸಂಪ್ರದಾಯಸ್ತ ಬ್ರಾಹ್ಮಣರೆಂದೇ ತಿಳಿದಿದ್ದೆ. ಅನಂತರ ಇವರು ಸಾಮಾನ್ಯ ರೈತ ಕುಟುಂಬಕ್ಕೆ ಸೇರಿದ ವ್ಯಕ್ತಿ ಎಂದು ತಿಳಿಯಿತು.

ಹೊ. ಶ್ರೀನಿವಾಸಯ್ಯನವರು ಸಿದ್ದವನಹಳ್ಳಿ ಕೃಷ್ಣಶರ್ಮರ ಶಿಷ್ಯರು. ಗಾಂಧೀ ಅನುಯಾಯಿಗಳು. ಇಂತಹವರ ಆಶ್ರಯದಲ್ಲಿ ಬೆಳೆದು ಬಂದ ಶ್ರೀನಿವಾಸಯ್ಯನವರು ವಿದ್ಯಾರ್ಥಿ ದಿಸೆಯಿಂದಲೂ ಸಮಾಜ ಸೇವಕರು ಬರಹಗಾರರೂ ಆಗಿದ್ದಾರೆ. ಅವರ ಗುರುಗಳಾದ ಕೃಷ್ಣಶರ್ಮರೇ ಹೇಳಿರುವಂತೆ ಶ್ರೀನಿವಾಸಯ್ಯನವರು ಬರೀ ಬರಹಗಾರರಲ್ಲ, ಕೆಲಸಗಾರರು ಕೂಡ ಆಗಿದ್ದಾರೆ. ಇದಕ್ಕೆ ಸಾಕ್ಷಿಯಾಗಿ ಅವರು ಶರ್ಮಾಜಿಯವರೊಡನೆ ನಿಂತು ಸ್ಥಾಪಿಸಿ, ಬೆಳೆಸಿ, ಪೋಷಿಸುತ್ತಿರುವ ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘ, ಶ್ರೀರಾಮ ಸಹಕಾರಿ ಬ್ಯಾಂಕು, ಶ್ರೀ ಆಂಜನೇಯ ಸಹಕಾರಿ ಬ್ಯಾಂಕು ಬಡಜನರಿಗಾಗಿ ಸೇವೆ ಸಲ್ಲಿಸುತ್ತಿವೆ. ಇಂತಹ ಹಲವಾರು ಸಂಘ ಸಂಸ್ಥೆಗಳು ಅವರ ಸಮಾಜ ಕಾರ್ಯ ಪ್ರವೃತ್ತಿಗೆ ಸಾಕ್ಷಿಯಾಗಿವೆ.

ಶ್ರೀನಿವಾಸಯ್ಯನವರದು ಸ್ನೇಹ ಸ್ವಭಾವ, ಸಣ್ಣವರೆಂದ ಹಿಡಿದು ದೊಡ್ಡವರವರೆಗೂ ಒಂದೇ ರೀತಿ ಕಾಣುವರು. ಮಕ್ಕಳುಗಳೇ ಆಗಲಿ ದೊಡ್ಡವರೇ ಆಗಲಿ ಅವರ

ಜೊತೆ ಕಲೆತು, ಬೆರೆತು ಮಾತಾಡುತ್ತಾರೆ. ಅವರ ಸರಳತೆ ಎಲ್ಲರಿಗೂ ಆಕರ್ಷಕ, ಅವರ ಜೊತೆ ಮಾತಾಡುತ್ತ ಕುಳಿತರೆ ವೇಳೆ ಕಳೆದದ್ದೇ ಗೊತ್ತಾಗುವುದಿಲ್ಲ. ರಾಜಕೀಯದಿಂದ ಹಿಡಿದು ಸಾಹಿತ್ಯ, ಸಾಮಾಜಿಕ, ತಾಂತ್ರಿಕ ವಿಚಾರವಾಗಿ ಚೆನ್ನಾಗಿ ಬಲ್ಲವರು.

ಶ್ರೀನಿವಾಸಯ್ಯನವರಿಗೆ ಛಾಯಾಚಿತ್ರ ತೆಗೆಯುವುದರಲ್ಲಿ ವಿಶೇಷ ಆಸಕ್ತಿ, ಯಾವುದೇ ಕಾರ್ಯಕ್ರಮಕ್ಕೆ ಹೋಗಲಿ, ಪ್ರವಾಸವೇ ಆಗಲಿ, ವಿವಾಹ ಸಮಾರಂಭಗಳಿಗೆ ಹೋಗಲಿ ಇವರ ಜೊತೆ ಕ್ಯಾಮರಾ ಇದ್ದೇ ಇರುತ್ತದೆ. ಇವರು ತೆಗೆದ ಸಾವಿರಾರು ಚಿತ್ರಗಳನ್ನು ಆಲ್ಬಂಗಳಲ್ಲಿ ಶೇಖರಿಸಿಟ್ಟದ್ದಾರೆ. ಸಭೆ ಸಮಾರಂಭಗಳ ಕಾರ್ಯಕ್ರಮವನ್ನು ಹಿರಿಯರ ಭಾಷಣಗಳನ್ನು ಧ್ವನಿ ಮುದ್ರಿಸಿಕೊಂಡು ಬರುತ್ತಾರೆ. ಮನೆಯಲ್ಲಿ ಬಿಡುವು ಸಿಕ್ಕಿದಾಗಲೆಲ್ಲಾ ಇತರರ ಜೊತೆ ಕೇಳುವ ಪರಿಪಾಠ ಇವರದು, ಎಂದು ನಾನು ಕೇಳಿದ್ದೇನೆ.

ಪ್ರಕೃತಿ ಚಿಕಿತ್ಸೆಯಲ್ಲಿ ಶ್ರೀನಿವಾಸಯ್ಯನವರಿಗೆ ವಿಶೇಷ ಒಲವು. ಕರ್ನಾಟಕ ಪ್ರಾಂತ್ಯದ ಪ್ರಕೃತಿ ಜೀವನ ಕೇಂದ್ರದ ಸ್ಥಾಪಕರಲೊಬ್ಬರಾಗಿದ್ದಾರೆ. ಇತ್ತೀಚೆಗೆ ಇವರಿಗೆ ಪ್ರಕೃತಿ ಚಿಕಿತ್ಸಾ ವಿಷಯದಲ್ಲಿ ಡಾಕ್ಟರೇಟ್ ಪ್ರಶಸ್ತಿಯು ಲಭಿಸಿದೆ. ಇವರಿಂದ ಹಲವಾರು ಜನ ಆರೋಗ್ಯದ ಬಗ್ಗೆ ಸಲಹೆ ಪಡೆದು ಖಾಯಿಲೆ ವಾಸಿಮಾಡಿಕೊಂಡಿದ್ದಾರೆ. ನಾನು ನನ್ನ ಸ್ನೇಹಿತರು ಇವರ ಸಲಹೆಯಿಂದ ಪ್ರಯೋಜನ ಪಡೆದಿದ್ದೇವೆ. ಪ್ರಕೃತಿ ಚಿಕಿತ್ಸೆಯ ವಿಷಯದಲ್ಲಿ ನಂಬಿಕೆಯೂ ಬಂದಿದೆ. ಆರೋಗ್ಯದ ಬಗ್ಗೆ ಇವರ ಜತೆ ಮಾತಾಡಲು ಕುಳಿತರೆ ಅರ್ಧ ಖಾಯಿಲೇ ವಾಸಿಯಾದಂತೆ ಅನುಭವ. ಯಾರಿಗಾದರೂ ಸರಿ ಪ್ರಕೃತಿ ಚಿಕಿತ್ಸೆಯಿಲ್ಲಿ ನಂಬಿಕೆ ಬರುವಂತೆ ಮಾಡುವ ನೈಪುಣ್ಯ ಇವರಲ್ಲಿದೆ. ಇವರ ಸಲಹೆ ಕೇಳಿ ಅನೇಕರು ಪತ್ರ ಬರೆಯುವುದು ಉಂಟು. "ಪ್ರಕೃತಿ ಜೀವನ" ತ್ರೈಮಾಸಿಕ ಪತ್ರಿಕೆಯ ಪ್ರಕಟಣೆ ಇವರದೆ. ಹೀಗಾಗಿ ಶ್ರೀನಿವಾಸಯ್ಯನವರು ಬರೀ ಇಂಜಿನಿಯರೇ ಅಲ್ಲ ವೈದ್ಯರೂ ಆಗಿದ್ದಾರೆ.

ಶ್ರೀನಿವಾಸಯ್ಯನವರು ರೈತ ಕುಟುಂಬಕ್ಕೆ ಸೇರಿದ ವ್ಯಕ್ತಿಗಳು. ಆದರೂ ಶುದ್ಧ ಸಸ್ಯಾಹಾರಿ, ಅಷ್ಟೇ ಅಚ್ಚುಕಟ್ಟು. ಸಂಪ್ರದಾಯದಲ್ಲಿ ಯಾರಿಗೂ ಕಡಿಮೆ ಇಲ್ಲ. ಈಗ ವಿವಿಧ ಉದ್ದೇಶಗಳಿಗಾಗಿ ಸಾವಿರಾರು ಜನರು ವಿದೇಶಗಳಿಗೆ ಹೋಗಿ ಬರುತ್ತಾರೆ. ಅಲ್ಲಿನ ಬೆಡಗಿನ ವ್ಯಾಮೋಹಕ್ಕೆ ಮೈಮರೆತು ತಾವು ಹುಟ್ಟಿ ಬೆಳೆದ ನೆಲದ ಸಂಪ್ರದಾಯವನ್ನೇ ಮರೆಯುವ ಜನರೇ ಹೆಚ್ಚು. ಪಾಶ್ಚಿಮಾತ್ಯ ದೇಶಗಳಿಗೆ

ಹೋದರೆ, ಮಾಂಸಾಹಾರವಿಲ್ಲದೇ ಮದ್ಯ ಸೇವಿಸದೇ ಜೀವಿಸಲು ಕಷ್ಟ ಎಂದು ಹೇಳುವವರಿಗೇನು ಕಡಿಮೆ ಇಲ್ಲ. ಶ್ರೀನಿವಾಸಯ್ಯನವರು ಈ ಮಾತನ್ನು ಸುಳ್ಳಾಗಿಸಿ ವಿದೇಶಗಳಲ್ಲೂ ಸಸ್ಯಾಹಾರದಿಂದಲೇ ಬದುಕ ಬಹುದು ಎಂಬುದನ್ನು ತೋರಿಸಿದ್ದಾರೆ.

ಶ್ರೀನಿವಾಸಯ್ಯನವರ ಮುಖ್ಯ ಧ್ಯೇಯ ಸಮಾಜ ಸೇವೆ. ಅವರ ಜೀವನ ಸರಳ ಸಾತ್ವಿಕ ಸೇವಾಮಯ ಪ್ರಾಕೃತಿಕ ಜೀವನ. ಅವರ ವಿಚಾರ ಗಾಂಧೀ ತತ್ವೋಪಚಾರ, ಖಾದಿ. ಪ್ರಿಯತೆ, ಸ್ವದೇಶಾಭಿಮಾನ.



# ಸೌಜನ್ಯ ಸಾಕಾರ ಮೂರ್ತಿ

ಮ. ನಾಗರಾಜ್

ಮಾಡಿದ ಕೆಲಸ ಫಲವನ್ನು ಕೊಡುತ್ತದೆ. ಬೇಕು–ಬೇಡ ಎನ್ನುವ ಅಪೇಕ್ಷೆ ಇಲ್ಲದೆ ಕೆಲಸಮಾಡುವುದೇ ಯೋಗ್ಯ ಮಾರ್ಗ ಎಂದು ತಿಳಿದು ಕರ್ತವ್ಯವನ್ನು ನಿಷ್ಠೆಯಿಂದ ಮಾಡಲು ತನ್ನ ಜೀವನವನ್ನೇ ಮುಡಿಪಾಗಿಟ್ಟ ಧೀಮಂತ ವ್ಯಕ್ತಿ ಹೊನ್ನಪ್ಪ ಶ್ರೀನಿವಾಸಯ್ಯನವರು.

ಪಂಪ ಮಹಾಭಾರತದಲ್ಲಿ, ಪಂಪ ಕನ್ನಡಿಗರ ಮಾತುಗಾರಿಕೆಯನ್ನ ಒಂದೇ ಒಂದು ಸಾಲಿನಲ್ಲಿ ಭೀಮನ ಮೂಲಕ "ಎನ್ನ ನುಡಿ ಟಾಠಡಾಢಣ" ಎಂದು ಹೇಳಿಸಿದ್ದಾನೆ. ಹಾಗೆ ಹೊ. ಶ್ರೀ ಯವರ ಮಾತು ನೇರ ಹಾಗೂಸ್ಪಷ್ಟ. ಯಾರೇ ಬರಲಿ, ಅವರು ಬಡವರಾಗಿರಲಿ, ಬಲ್ಲಿದರಾಗಿರಲಿ, ತನ್ನ ಕೈಲಾಗುವ ಕೆಲಸವನ್ನು ನೇರವಾಗಿ ತಿಳಿಸುವ ಮನೋಭಾವ ಇವರದು. ಬಿ.ಇ.ಎಂ.ಎಲ್.ನ ರೈಲುಕೋಚ್ ವಿಭಾಗದ ಡೆಪ್ಯುಟಿ ಜನರಲ್ ಮ್ಯಾನೇಜರ್ ಅಂತಹ ಹುದ್ದೆಯನ್ನ ಅಲಂಕರಿಸಿರುವ ಇವರಲ್ಲಿಗೆ ನಿತ್ಯವೂ ಕೆಲಸ ಕೇಳಲು ಹಲವರು ಬರುವುದುಂಟು ಆಗ ಅವರೇ "ನಮ್ಮ ತಂದೆ ಜಮೇದಾರರಾಗಿದ್ದರು. ಹೆಚ್ಚು ಜನರಿಗೆ ಕೆಲಸ ಕೊಡಿಸಿದ್ದಾರೆ. ನಾನು ಇಂದು ದೊಡ್ಡ ಹುದ್ದೆಯಲ್ಲಿದ್ದರೂ ಆ ಕೆಲಸ ನನ್ನ ಕೈಲಿ ಆಗಲಿಲ್ಲ" ಎಂದಿದ್ದಾರೆ.

ಸಾಹಿತ್ಯಾಭ್ಯಾಸಿಯಾದ ನನಗೆ ಮೊದಲು ಹೊ. ಶ್ರೀಯವರ ಪರಿಚಯವಿರಲಿಲ್ಲ. ಅವರ ಪುಸ್ತಕ ಪರಿಚಯವಿತ್ತು. ಅವರ ಮನೆಗೆ ಎಷ್ಟೋಸಾರಿ ಹೋಗಿದ್ದೆ. ಪರಿಚಯ ಮಾಡಿಕೊಳ್ಳಲು ಪ್ರಯತ್ನಿಸಲೇ ಇಲ್ಲ. ಕಾರಣ ನನ್ನದು ಸಂಕೋಚ ಸ್ವಭಾವ. ಆದರೂ ಸುದೈವದಿಂದ ಅವರೊಡನೆ ಸಾಹಿತ್ಯದ ಬಗ್ಗೆ ಚಿಂತಿಸುವ, ಚರ್ಚಿಸುವ ಅವಕಾಶ ಇತ್ತೀಚೆಗೆ ದೊರೆತಿದೆ. ನನ್ನ ಸುಕೃತ ಪುಣ್ಯ ಎಂದೇ ತಿಳಿದಿದ್ದೇನೆ.

ಹೊ. ಶ್ರೀಯವರು ಹುಟ್ಟು ಹೋರಾಟ ಸ್ವಭಾವದವರು. ಇದು ಅವರ ತಂದೆಯಿಂದ ಬಂದ ಗುಣವಿರಬಹುದು. 1942ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ವಿದ್ಯಾರ್ಥಿಯಾಗಿದ್ದ ಇವರು ಭಾಗವಹಿಸಿದ್ದರು. ಬ್ರಿಟಿಷರ ವಿರುದ್ಧ ಸೊಲ್ಲೆತ್ತದ ಆ ಕಾಲದಲ್ಲಿ ಕಳ್ಳಪತ್ರಿಕೆಯ ಮೂಲಕ ಪ್ರಚಾರ ಮಾಡಿದ್ದಾರೆ. ಅದಕೋಸ್ಕರ

ತನ್ನ ಪ್ರಾಣವನ್ನೇ ಕಳೆದು ಕೊಳ್ಳುವಂತಹ ಸಂದರ್ಭವನ್ನೂ, ಧೈರ್ಯದಿಂದ ಎದುರಿಸಿದ ಮಹಾನುಭಾವರು. ಇವರು ತನ್ನ ಸ್ನೇಹಿತರುಗಳನ್ನ ಸಂಘಟಿಸಿ, ಕೈಬರಹದ ಪತ್ರಿಕೆಗಳನ್ನು ಅವರ ಮೂಲಕ ಮನೆಮನೆಗೆ ಹಾಕಿಸಿ, ತಾವೂ ಸಕ್ರಿಯವಾದ ಈ ಕೆಲಸದಲ್ಲಿ ತೊಡಗಿ ಬ್ರಿಟಿಷರ ವಿರುದ್ಧ ಪ್ರಚಾರ ಮಾಡಿದ್ದಾರೆ. ವಿದ್ಯಾರ್ಥಿ ಕಾಂಗ್ರೆಸ್ ಎಂಬ ಸಂಸ್ಥೆಯೊಂದನ್ನ ಸ್ಥಾಪಿಸಿ ತಾವೇ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸಿ, ಜನರಿಗ ನ್ಯಾಯಬೆಲೆಯಲ್ಲಿ ದವಸ ಧಾನ್ಯ ಹಂಚುವ ಪದ್ಧತಿ ಜಾರಿಗೆ ತಂದರು.

ಹೊ. ಶ್ರೀಯವರನ್ನು ಸಮಾಜ ಸುಧಾರಕ ಎನ್ನಬಹುದು. ಇವರ ತಂದೆಯವರೂ ಸಹ ಸಮಾಜ ಸೇವೆಯಲ್ಲಿ ತೊಡಗಿದವರು. ಬೆಳಿಗ್ಗೆಯಿಂದ ಸಂಜೆಯವರೆವಿಗೂ ಸರ್ಕಾರ ಕೆಲಸ. ಆದರೆ ಅನಂತರ ಸಮಾಜ ಸೇವೆಯಲ್ಲಿ ನಿರತರಾಗುತ್ತಿದ್ದರು ಅಂತವರ ಮಗನಾಗಿ ಹುಟ್ಟಿರುವ ಇವರೂ ಸಹ ತಂದೆಯಂತೆಯೇ ಸಮಾಜ ಸೇವೆಗೆ ತನ್ನ ಬದುಕನ್ನ ಮುಡಿಪಾಗಿಟ್ಟಿದ್ದಾರೆ. ಇವರು ಸಂಘಟನಾ ಚತುರರು. ಹೆಚ್ಚು ಹೆಚ್ಚು ಜನರನ್ನ ಪರಿಚಯ ಮಾಡಿಕೊಳ್ಳುವ ಸ್ವಭಾವ ಇವರ ವ್ಯಕ್ತಿತ್ವವೇ ಜನರನ್ನ ಆಕರ್ಷಿಸುವಂತಹದು. ಇಂತಹ ಗುಣ ಹೊಂದಿರುವ ಇವರು ಸಹಕಾರಿ ಬ್ಯಾಂಕುಗಳ ಶಿಲ್ಪಿಗಳಾಗಿದ್ದಾರೆ. ಏನೂ ಅರಿಯದ ಅನಕ್ಷರಕುಕ್ಷಿಗಳಿಗೆ ಹಣದ ಸೌಲಭ್ಯ ದೊರಕಿಸಿಕೊಡಲು, ಜನರನ್ನ ಸಂಘಟಿಸಿ ಅವರಿಂದ ಷೇರು ಹಣ ಸಂಗ್ರಹಿಸಿ ಒಳ್ಳೆಯ ಸೇವೆ ನೀಡುವಂತಹ ಬ್ಯಾಂಕುಗಳನ್ನು ಸ್ಥಾಪಿಸಿದ್ದಾರೆ. ಇಂತಹ ಬ್ಯಾಂಕುಗಳಲ್ಲಿ ಮಲ್ಲೇಶ್ವರದ ಶ್ರೀರಾಮ ಕೋ ಆಪರೇಟಿವ್ ಬ್ಯಾಂಕ್, ಆಂಜನೇಯ ಕೋ ಆಪರೇಟಿವ್ ಬ್ಯಾಂಕ್, ಪ್ರಮುಖವಾಗಿವೆ.

ಸಹಕಾರ ಕ್ಷೇತ್ರದಲ್ಲಿ ಹೆಚ್ಚು ವರ್ಷ ಅಧಿಕಾರದಲ್ಲಿರಲು ಕಷ್ಟ ಸಾಧ್ಯ. ಏನಾದರೊಂದು ಅಪವಾದ ಇದ್ದೇ ಇರುತ್ತವೆ. ಆದರೆ ಶ್ರೀಮಾನ್ ಹೊ. ಶ್ರೀನಿವಾಸಯ್ಯನವರು ಯಾವ ಅಪವಾದಗಳೂ ಇಲ್ಲದೆ ಹೆಚ್ಚು ವರ್ಷ ಸಹಕಾರ ಕ್ಷೇತ್ರದಲ್ಲಿ ದುಡಿದಿದ್ದಾರೆಂದರೆ ನಿಜಕ್ಕೂ ಸ್ತುತ್ಯಾರ್ಹ ಎಂದು ಶ್ರೀಮಾನ್ ಜಿ. ನಾರಾಯಣರವರು, ಒಂದು ಸಭೆಯಲ್ಲಿ ಹೇಳಿದ್ದರು. ಈಮಾತು ಎಂತವರೂ ಮೆಲುಕು ಹಾಕುವಂತಹದು. ಅಷ್ಟೊಂದು ಪ್ರಾಮಾಣಿಕತೆ. ಎಷ್ಟಾದರೂ ಗಾಂಧೀಜಿಯ ಅನುಯಾಯಿಯಲ್ಲವೆ ?

ಹೊ. ಶ್ರೀ. ಸಹೃದಯ, ಸೌಜನ್ಯ ಮೂರ್ತಿ. ಒಮ್ಮೆ ಜಿಮೆಲ್ ಕನ್ನಡ ಸಂಘದವರು ರವೀಂದ್ರ ಕಲಾಕ್ಷೇತ್ರದಲ್ಲಿ, 1979 ರಲ್ಲಿ ಹೊ. ಶ್ರೀಯವರಿಗೆ ಸನ್ಮಾನ ಏರ್ಪಡಿಸಿದ್ದರು. ಹಂಪನಾ ಅಧ್ಯಕ್ಷತೆ ವಹಿಸಿದ್ದರು. ಹಾಸ್ಯ ನಟ ಶಿವರಾಂ ಮುಖ್ಯ ಅತಿಥಿಗಳಾಗಿದ್ದರು. ನಾನೂ ಸಹ ಹೋಗಿದ್ದೆ. ಕಾರ್ಯಕ್ರಮ ಯಶಸ್ವಿಯಾಗಿ ಜರುಗಿತು. ಎರಡು ಗಂಟೆಗಳ ಕಾಲ ನಡೆದ ಆ ಕಾರ್ಯಕ್ರಮ ಕಾಲಕಳೆದುದೇ ಗೊತ್ತಾ

ಗಲಿಲ್ಲ. ಕಾರ್ಯಕ್ರಮದ ಕೊನೆಯಲ್ಲಿ ಮೈಸೂರು ಅನಂತಸ್ವಾಮಿಯವರಿಂದ ಭಾವಗೀತೆ ಕಾರ್ಯಕ್ರಮವಿತ್ತು. ರಾತ್ರಿ ಹತ್ತುಗಂಟೆ ಆಗಿತ್ತು. ನಾನೊಬ್ಬನೇ ಅಷ್ಟರಿಂದ, ಬಸ್ಸುಹಿಡಿದು ರೂಮಿಗೆ ಹೋಗಲು ಯೋಚಿಸಿದ್ದೆ. ಸನ್ಮಾನಿತರಾದ ಹೊ. ಶ್ರೀ, ವೇದಿಕೆ ಮೇಲೆಯೇ ನನ್ನನ್ನ ನೋಡಿ, ಮಲ್ಲೇಶ್ವರಂ ಕಡೆ ಕಾರಿನಲ್ಲಿ ಜೊತೆಯಲ್ಲಿ ಹೋಗೋಣ ಎಂದು ಹೇಳಿ ಕಳಿಸಿದ್ದರು. ನನಗೆ ಸಂತೋಷವೋ ಸಂತೋಷ. ಇಂತಹ ಸಂತೋಷ ಸಮಾರಂಭದಲ್ಲಿ ಅಲ್ಪನಾದ ನನ್ನನ್ನ ಆತ್ಮೀಯವಾಗಿ ಕಂಡು ನನ್ನ ಬಗ್ಗೆ ತೋರಿಸಿದ ವಿಶ್ವಾಸಕ್ಕೆ ನಿಜಕ್ಕೂ ನಾನು ಚಿರಋಣಿ.ಪ್ರತಿಯೊಬ್ಬರನ್ನೂ ಗೌರವದಿಂದ ಕಾಣುವ ಸದ್ಗುಣ. ಇವರ ಬದುಕೇ ನಮಗೊಂದು ಆದರ್ಶ.

ಒಮ್ಮೆ ಹೊ. ಶ್ರೀಯವರನ್ನ ನೋಡಬೇಕಾದ ಪ್ರಸಂಗ ಬಂತು. ರಾತ್ರಿ ಭೆಟ್ಟಿಯಾಗಬಹುದಲ್ಲಾ ಅಂದುಕೊಂಡೆ. ರಾತ್ರಿ ಹತ್ತುಗಂಟೆ ಆಯಿತು ಬರಲಿಲ್ಲ. ಅವರು ಮನೆಯವರನ್ನು ವಿಚಾರಿಸಿದೆ. ಅನಂತರ ವಿಷಯ ತಿಳಿದೆ. ಹೆಚ್ಚು ಕೆಲಸ ಮಾಡಿಸಬೇಕಾದ ಸಂದರ್ಭ ಒದಗಿದಾಗ ರಾತ್ರಿಯೆಲ್ಲಾ ಕಾರ್ಖಾನೆಯಲ್ಲಿಯೇ ಇರುತ್ತಾರೆಂಬುದು. ಇವರ ಸೇವಾ ಮನೋಭಾವಕ್ಕೆ ಕರ್ತವ್ಯ ನಿಷ್ಠೆಗೆ ಇದಕ್ಕಿಂತ ಮತ್ತೊಂದು ಉದಾಹರಣೆ ಇಲ್ಲ. ಎಡೆಬಿಡದೆ ದುಡಿಯುವ ಮನೋಭಾವ ಅವರದು. ದುಡಿಯುವವರ ಜೊತೆಯಲ್ಲಿದ್ದು ಅವರಿಗೆ ಹುರುಪು, ಹುಮ್ಮಸ್ಸು ನೀಡುವ ಮನೋಭಾವ ಇಂತಹ ಕೆಲಸ ಆಗೋದಿಲ್ಲ ಅನ್ನುವ ಹಾಗಿಲ್ಲ. ಎಲ್ಲಕ್ಕೂ ಪ್ರಯತ್ನ ಒಮ್ಮೊಮ್ಮೆ ರಾತ್ರಿ 1ರಿಂದ 2ಗಂಟೆಯಾದರೂ ಕಾರ್ಖಾನೆಯಲ್ಲಿಯೇ ಮೇಲ್ವಿಚಾರಣೆ ನೋಡಿಕೊಂಡು ಇದ್ದು ಬಿಡುತ್ತಾರೆ.

ಹೊ. ಶ್ರೀಯವರಿಗೆ ಪ್ರತಿನಿತ್ಯವೂ ಯಾವುದಾದರೂ ಸಂಘಸಂಸ್ಥೆಗಳಿಂದ ಆಮಂತ್ರಣ ಇದ್ದೇ ಇರುತ್ತದೆ. ಹಲವಾರು ಕಾರ್ಯಕ್ರಮ. ಯಾವುದಕ್ಕೂ ಗೈರು ಹಾಜರಾಗುವುದಿಲ್ಲ. ಆಮಂತ್ರಿಸಿದ ಕಾರ್ಯಕ್ರಮಕ್ಕೆ ಏನೇ ಕಷ್ಟವಾದರೂ ಹೋಗಲೇಬೇಕು. ಆಗಲೇ ಅವರಿಗೆ ಸಮಾಧಾನ. ಮುಂಜಾನೆ 5ಕ್ಕೆ ಎದ್ದರೆ ರಾತ್ರಿ 11ರ ತನಕ ಒಂದಲ್ಲ ಒಂದು ಕಾರ್ಯಕ್ರಮ ಇರುತ್ತದೆ. ಬೆಳಿಗ್ಗೆ 5-30ಕ್ಕೆ ವಾಯು ವಿಹಾರ. ಪ್ರಕೃತಿಯ ಸಹಜ ಸೌಂದರ್ಯ ಆಸ್ವಾದಿಸಿ ಬರುವಾಗ ಆ ದಿನಕ್ಕೆ ಬೇಕಾಗುವ ತರಕಾರಿಯನ್ನ ತರುವರು. ನಾನೂ ಸಹ ಅವರ ಜೊತೆ ವಿಹಾರ ಹೋಗಬೇಕೆಂದು ನಿರ್ಧರಿಸಿದ್ದೆ. ಅವರ ವೇಗವಾದ ನಡಿಗೆ ನನಗೆ ಬೆರಗುಗೊಳಿಸಿದುದಲ್ಲದೆ ಇಷ್ಟೊಂದು ವೇಗದಲ್ಲಿ ನಡೆಯಲು ನನಗೆ ಸಾಧ್ಯವಿಲ್ಲವೆಂದು ನಾನೇ ಸುಮ್ಮನಾದೆ. ಐವತ್ತೈದು ವರ್ಷ ಮೀರಿರುವ ಹೊ. ಶ್ರೀ ಜೊತೆ ಹುಡುಗರಾದ ನಮಗೂ ಹೋಗಲು ಸ್ವಲ್ಪ ಕಷ್ಟವೇ. ದೇಹ ಧಾರ್ಡ್ಯ, ಶಾರೀರಿಕ ಮೈಕಟ್ಟು, ಪ್ರಾಕೃತಿಕ ಜೀವನದಿಂದ ಬಳುವಳಿಯಾಗಿ ಬಂದಿದೆ. ವಾಯುವಿಹಾರವಾದ ಮೇಲೆ ಮನೆಗೆ ಬಂದು ಸ್ವಲ್ಪಕಾಲ

ದಿನಪತ್ರಿಕೆಯನ್ನು ಓದಿ, ಸ್ನಾನಮಾಡಿ ದೇವರ ಪೂಜೆಗೆ ಅಣಿಯಾಗುವರು. ಹೊ. ಶ್ರೀ ದೈವಭಕ್ತರು. ಸಾಧು ಸಂತರ ಆರಾಧಕರು, ಆದಿಚುಂಚನಗಿರಿ ಶ್ರೀಬಾಲ ಗಂಗಾಧರನಾಥಸ್ವಾಮಿಯವರ ಶಿಷ್ಯರು. ಮಠಕ್ಕೆ ತಮ್ಮಿಂದ ಆಗಬೇಕಾದ ಎಲ್ಲಾ ಅನುಕೂಲಗಳನ್ನ ಮಾಡಿದ್ದಾರೆ. ಬೆಂಗಳೂರು ವಿಭಾಗದ ಆದಿಚುಂಚನಗಿರಿಮಠದ ಕಾರ್ಯಕಾರಿ ಸಮಿತಿ ಸದಸ್ಯರೂ ಆಗಿದ್ದರೆ.

ಸಂಸ್ಕೃತ ಅಭ್ಯಾಸ ಮಾಡಿರುವ ಹೊ. ಶ್ರೀಯವರು ಶ್ಲೋಕಗಳನ್ನು ಹೇಳಿ ಕೊಂಡು, ದೃಢ ಚಿತ್ತತೆಯಿಂದ ಪೂಜೆಮಾಡಿ ದೇವರನ್ನ ಬೇಡುವರು. ಮತ್ತೇ ನನ್ನೂ ಅಲ್ಲ. ಕಾರ್ಖಾನೆಯಲ್ಲಿ ಉತ್ಪಾದನೆ ಹೆಚ್ಚಾಗಿ ಆಗಲಿ ಎಂದು.

ಕಾರ್ಖಾನೆಯ ಕೆಲಸ ಮುಗಿಸಿಕೊಂಡು ಮನೆಗೆ ಬಂದರೆ ಸಾಕಲ್ಲಪ್ಪಾ ಅನ್ನುವ ವರು ಕೆಲವರು. ಇವರ ಸ್ವಭಾವವೇ ಬೇರೆ. ಕೆಲಸ ಮುಗಿಸಿಕೊಂಡು ಮನೆಗೆ ಬಂದಮೇಲೆ ಇವರ ಕಾರ್ಯ ಕ್ಷೇತ್ರ ಬೇರೆಯದು. ಸಾಹಿತಿಗಳಿಗೆ ಸನ್ಮಾನ, ಬ್ಯಾಂಕಿ ನಲ್ಲಿ ಸಭೆ, ಸ್ವಾಮಿಜಿಗಳಿಂದ ಕರೆ, ಗೃಹಪ್ರವೇಶ, ಮದುವೆ, ರಾಜಕಾರಣಿಗಳಿಗೆ ಸನ್ಮಾನ, ಈತರಹದ ಹಲವಾರು ಕಾರ್ಯಕ್ರಮ. ಕಾರ್ಖಾನೆಯಿಂದ ಮನೆಗೆ ಬಂದ ತಕ್ಷಣ ಸಂಜೆಯೇ ಊಟ ಅನಂತರ ತಮ್ಮ ನಿಯೋಜಿತ ಕಾರ್ಯಕ್ರಮಕ್ಕೆ ಪತ್ನೀ ಸಮೇತ ಹೋಗುವರು.

ಇವರ ಧರ್ಮಪತ್ನಿಯವರೂ ಸಹ ಇವರ ಬಾಳಿನಲ್ಲಿ ಅನ್ಯೋನ್ಯ ಸಾಹಿತ್ಯಿಕ ಚಟುವಟಿಕೆಗೆ ಸಂಪೂರ್ಣ ಸಹಕರಿಸುವರು. ಕಾಯಾ, ವಾಚಾ, ಮನಸಾ ಅನ್ಯೋ ನ್ಯವಾಗಿರುವ ಇವರು, ಹೋ. ಶ್ರೀಯವರಿಗೆ ಸಂಪೂರ್ಣ ಸಹಕರಿಸಿದುದರಿಂದಲೇ ಮನೆಯ ಬಗ್ಗೆ ಇವರಿಗೆ ಸ್ವಲ್ಪವೂ ಚಿಂತೆ ಇಲ್ಲ. ಇದರಿಂದ ಸಾರ್ವಜನಿಕ ಕೆಲಸ ಮಾಡಲು, ಪ್ರಾಮಾಣಿಕವಾಗಿ ಕರ್ತವ್ಯನಿಷ್ಠೆಯಿಂದ ದುಡಿಯಲು ಹುಮ್ಮಸ್ಸು. ಮನೆಗೆ ರಾತ್ರಿ ಬರುವುದು ಒಂಬತ್ತಾದರೂ ಆಗಬಹುದು. ಬಂದು ಸುಮ್ಮನೆ ಕಾಲ ಕಳೆಯುವುದಿಲ್ಲ. ಸಾಹಿತ್ಯದ ಬಗ್ಗೆ, ವೈಜ್ಞಾನಿಕ ವಿಚಾರದ ಬಗ್ಗೆ ಚಿಂತಿಸಿ, ಬರೆ ಯುವ ಅಭ್ಯಾಸ. ಹಲವಾರು ರೇಡಿಯೋ ಕಾರ್ಯಕ್ರಮಗಳು, ಪ್ರವಾಸಸಾಹಿತ್ಯ ಪ್ರಕೃತಿ ಜೀವನದ ಬಗ್ಗೆ ಪುಸ್ತಕಗಳನ್ನ ಪ್ರಕಟಿಸಿ ಸಾಹಿತ್ಯ ಸೇವೆ ಮಾಡುತ್ತಿದ್ದಾರೆ. ಇವರ ಕಾರ್ಯಚಟುವಟಿಕೆ ಆಶ್ಚರ್ಯತರುವಂತಹದು. ಇಷ್ಟೊಂದು ಕೆಲಸವನ್ನ ಒಬ್ಬರೇ ಹೇಗೆ ನಿಭಾಯಿಸುತ್ತಾರೆ. ಸ್ವಲ್ಪವೂ ಬೇಸರವೇ ಆಗೋದಿಲ್ಲವೇ ಎಂದು ನಮಗನಿಸಿದರೂ ಅವರಿಗೆ ಇದು ಪ್ರತಿದಿನದ ಕೆಲಸ.

1979 ರಲ್ಲಿ ಒಂದು ಶುಕ್ರವಾರ ಸಂಜೆ ಹೊ. ಶ್ರೀಯವರನ್ನು ಅವರ ಮನೆ ಯಲ್ಲಿ ಭೆಟ್ಟಿ ಆದೆ. ಮನೆಯಲ್ಲಿ ಯಾವುದೋ ಸಭೆ ನಡೆಯುತ್ತಿತ್ತು. ಇದೇನಿದು.

ಮನೆಯಲ್ಲೂ ಸಭೆ ನಡೆಸುತ್ತಿದ್ದರಲ್ಲಾ ಎಂದು ನನ್ನ ಸ್ನೇಹಿತರನ್ನು ಕೇಳಿದೆ. "ಇವರ ಹಿರಿಯರ ಊರು ಚೌಡರಿ ಕೊಪ್ಪಲು ಅಂತ, ಒಂದು ಸಣ್ಣ ಗ್ರಾಮ. ಓದಿ ವಿದ್ಯಾವಂತರಾದ, ಕೆಲಸಕ್ಕೆ ಸೇರಿರುವ ಜನರನ್ನ ಸಂಘಟಿಸಿ, ಅವರಿಂದ ನಿಧಿ ಸಂಗ್ರಹಿಸಿ ಊರಿಗೆ ಏನಾದರೂ ತಮ್ಮಿಂದ ಅನುಕೂಲವಾಗುವ ಸೌಲಭ್ಯವನ್ನು ಆ ಊರಿನ ಜನತೆಗೆ ಮಾಡಲು ಯುವಕ ರೈತಸಂಘ ಎಂದು ಸ್ಥಾಪಿಸಿದ್ದಾರೆ. ಪ್ರತಿ ತಿಂಗಳು ಒಬ್ಬೊಬ್ಬರ ಮನೆಯಲ್ಲಿ ಸೇರಿ ವಿಚಾರಮಾಡಿ, ಊರಿಗೆ ಅನುಕೂಲ ಮಾಡಿಕೊಡುತ್ತಿದ್ದಾರೆ. ಇಂದು ಇವರ ಸರದಿ ಎಂದರು. ಎಂತಹ ಮನೋಭಾವ, ನಿಜಕ್ಕೂ ಹಳ್ಳಿಯಿಂದ ಬಂದ ನಾವೆಲ್ಲರೂ ಅನುಕರಿಸುವಂತಹ, ಮಾರ್ಗದರ್ಶನ ನೀಡುತ್ತಿದ್ದಾರೆ, ಅನಂತರ ಅವರನ್ನ ಭೇಟಿ ಆದೆ. ಅವರು ಹೇಳಿದರು. 'ನಾವು ಊರಿನಿಂದ ಏನು ಸಹಕಾರ ಪಡೆಯುವೆವೋ ಹಾಗೆ ನಮ್ಮಿಂದ ಊರಿಗೆ ಏನು ಸಹಕಾರ ಮಾಡಿದ್ದೇವೆ ಅನ್ನೋದನ್ನ ಪ್ರಶ್ನೆ ಹಾಕಬೇಕು. ಊರಿನ ಋಣವನ್ನು ತೀರಿಸಬೇಕು. ನಮ್ಮ ಕೈಲಾದ ಸಹಾಯ ಮಾಡಬೇಕು" ಅಂದರು.

ಪ್ರಕೃತಿ ಜೀವನ ಇವರ ಉಸಿರಾಗಿದೆ. ಮಲ್ಲೇಶ್ವರದಲ್ಲಿ ಒಂದು ಸಂಘ ಸ್ಥಾಪಿಸಿದ್ದಾರೆ. ಪ್ರಕೃತಿ ಜೀವನ ಕೇಂದ್ರದಲ್ಲಿ ಮಾರ್ಗದರ್ಶಕರಾಗಿ ಸೇವೆಸಲ್ಲಿಸುತ್ತಿದ್ದಾರೆ. ನನ್ನ ಸ್ನೇಹಿತನೊಬ್ಬನಿಗೆ ಆಗಾಗ್ಯೆ ಕೆಮ್ಮು ಬರುತ್ತಿತ್ತು. ಯಾವ ಆಂಗ್ಲ ಔಷಧಿಗೂ ವಾಸಿಯಾಗಿರಲಿಲ್ಲ. ನಾನು ನನ್ನ ಸ್ನೇಹಿತನೊಡನೆ ಶ್ರೀಯುವರ ಮನೆಗೆ ಹೋದೆ. ಭೇಟಿ ಆದರು. ವಿಷಯ ತಿಳಿಸಿದೆ. ಮಾತನಾಡುತ್ತಾ ಸುಮಾರು ಒಂದು ಗಂಟೆ ಪ್ರಕೃತಿ ಚಿಕಿತ್ಸೆ ಬಗ್ಗೆ ಭಾಷಣವನ್ನೇ ಮಾಡಿದರು. ನಮಗೂ ಅವರ ಮಾತು ಅಂದರೆ ಕೇಳಲು ಇಷ್ಟ ಕೇಳಿದೆವು. ಕೊನೆಯಲ್ಲಿ ಹೇಳಿದರು. 'ನಾನು ಹೇಳಿದೆನಲ್ಲ ಅದನ್ನೆಲ್ಲಾ ಕೇಳಿ ಸುಮ್ಮನೆ ಇರಬೇಡಿ. ಆ ರೀತಿ ಪಾಲಿಸಿ. ಕ್ರಮ ಬದ್ಧನಾಗಿ ಆಹಾರ ತೆಗೆದುಕೊಳ್ಳಿ, ಸ್ವಲ್ಪದಿನ ಪಥ್ಯ ಇರಿ' ಅಂದರು. ಅದೇ ರೀತಿ ಇದ್ದುದರಿಂದ ಕೆಮ್ಮು ವಾಸಿಯಾಯಿತು. ಶ್ರೀಯುತರು ಪ್ರಕೃತಿ ಜೀವನದ ಬಗ್ಗೆ ಹಲವು ಪುಸ್ತಕಗಳನ್ನು ಬರೆದಿದ್ದಾರೆ.

ಹೂ. ಶ್ರೀಯುವರು ಹಲವಾರು ದೇವಸ್ಥಾನಗಳ ಧರ್ಮದರ್ಶಿಗಳು. ಕೆಲವರು ಹೆಸರಿಗೆ ಮಾತ್ರ ಧರ್ಮದರ್ಶಿಗಳಾಗಿರುತ್ತಾರೆ. ಯಾವ ಕೆಲಸಕ್ಕೂ ಅವರು ಭಾಗವಹಿಸುವುದಿಲ್ಲ. ಇವರ ಕಾರ್ಯ ಪ್ರವೃತ್ತಿಯೇ ಬೇರೆ. ದೇವಸ್ಥಾನಗಳನ್ನು ಊರ್ಜಿತಗೊಳಿಸುವುದು, ಕಾರ್ಯಕ್ರಮಗಳನ್ನು ಅನುಗೊಳಿಸುವುದು, ಭಕ್ತಾದಿಗಳಿಂದ ಹಣ ಸಂಗ್ರಹಿಸಿ ದೇವಸ್ಥಾನ ಜೀರ್ಣೋದ್ಧಾರ ಮಾಡುವುದು. ಹೀಗೆ ಕೆಲಸವನ್ನು ಮುದುಕಿಕೊಂಡು ಮಾಡುವಂತಹ ಪ್ರವೃತ್ತಿ. ಇವರ ಕಾರ್ಯ ದಕ್ಷತೆಗೆ ಜೀರ್ಣೋ

ದ್ಧಾರದ ವ್ಯವಸ್ಥಾಪನೆಗೆ, ಮೈಸೂರು ಬ್ಯಾಂಕಿನ ಬಳಿ ಇರುವ ಭವ್ಯವಾದ ಯಲಹಂಕ ಗೇಟ್ ಆಂಜನೇಯ ಸ್ವಾಮಿ ದೇವಸ್ಥಾನವೇ ಸಾಕ್ಷಿ.

ಅಧಿಕಾರ ಬಂಸೊಡನೆ ಬದಲಾಗುವ ಜನರೇ ಇಂದು ಹೆಚ್ಚು. ಹೊ. ಶ್ರೀಯವರಲ್ಲಿ ಮಾತ್ರ ಇದು ಮಿಥ್ಯ. ತಾವು ಯಾವುದೇ ಹುದ್ದೆಯಲ್ಲಿರಲಿ, ಜನರೊಡನೆ ಬೆರೆಯುತ್ತಾರೆ. ಸರಸವಾಗಿ ಮಾತನಾಡುತ್ತಾರೆ. ಹೆಚ್ಚು ಹೆಚ್ಚು ಜನ ಸಂಪರ್ಕ ಕಲ್ಪಿಸಿಕೊಳುತ್ತಾರೆ. ಹೆಚ್ಚು ಜನರ ಪರಿಚಯ ಮಾಡಿಕೊಳ್ಳುತ್ತಾರೆ. ಅವರ ಕೈಲಾದ ಸಹಾಯ ಮಾಡುವರು. ಇಲ್ಲದಿದ್ದರೆ ಅವರಿಂದ ಧೈರ್ಯವಾಗಿ ಆಗುವಂತ ಕೆಲಸವನ್ನ ಕೇಳುತ್ತಾರೆ. ಇದು ನಮ್ಮ ಜನಗಳಲ್ಲಿ ಬರಬೇಕು.

ಕಾರ್ಮಿಕರೊಡನೆ ಇವರ ಸಂಪರ್ಕ ದಿನನಿತ್ಯ. ಯಾವ ಕಾರ್ಮಿಕನಾಗಲಿ ಹೊ. ಶ್ರೀಯವರನ್ನ ಕಂಡರೆ ತುಂಬಾ ಗೌರವ. ಇವರನ್ನ 'ಜಿಮೆಲ್ ಗಾಂಧಿ" ಎಂತಲೇ ಕರೆಯುವರು. ಅಷ್ಟು ಜನಪ್ರಿಯ. ಕಾರ್ಮಿಕರನ್ನು ಕುರಿತು ರೇಡಿಯೊಗಳಲ್ಲಿ ಭಾಷಣ ಮಾಡಿದ್ದಾರೆ. ಕಾರ್ಮಿಕರ ಸಮಸ್ಯೆ ತಿಳಿಸಿದ್ದಾರೆ. ಅವರ ಬದುಕನ್ನು ಅರ್ಥಮಾಡಿಕೊಂಡಿದ್ದಾರೆ. ಅವರಿಂದಲೇ ಕಾರ್ಮಿಕರಿಗೂ ಇವರಿಗೂ ಬಹಳ ನೆಂಟು. ಅಂತೆಯೇ ಇವರನ್ನು ಕಂಡರೆ ತುಂಬಾ ಗೌರವ.

ಕಾರ್ಮಿಕರೊಡನೆ ಇದ್ದು ಅವರಿಂದ ಹೇಗೆ ಕೆಲಸ ತೆಗೆದುಕೊಳ್ಳಬೇಕು ಅನ್ನುವುದು ಇವರಿಗೆ ಚೆನ್ನಾಗಿ ಗೊತ್ತು. ಒಮ್ಮೆ ಇವರ ಕಾರ್ಖಾನೆಯಲ್ಲಿ ಹೆಚ್ಚು ಉತ್ಪಾದನೆ ಮಾಡಬೇಕಾಗಿ ಬಂತು. ಕಾಲಾವಧಿ ಕಡಿಮೆ ಇತ್ತು. ಆದರೂ ಮನಸ್ಸು ಮಾಡಿ, ಕಾರ್ಮಿಕರನ್ನು ಹುರಿದುಂಬಿಸಿದರು. ಅವರೊಡನೆ ಹಗಲೂ ಇರುಳೂ ಇದ್ದರು. ಅವರನ್ನು ಚೆನ್ನಾಗಿ ಕಂಡರು. ಅಷ್ಟೇ ಅಲ್ಲ ಕೆಲಸವನ್ನು ಮಾಡಿಸಿದರು. ನಿಗದಿಯಾದ ಕಾಲಕ್ಕಿಂತ ಮೊದಲೇ ಮಾಡಬೇಕಿದ್ದಷ್ಟು ಉತ್ಪಾದನೆ ಮಾಡಿಸಿದರು. ಇವರ ರೀತಿಯನ್ನು ಎಲ್ಲರೂ ಮೆಚ್ಚಿದರಂತೆ.

ಹೊ. ಶ್ರೀ ಯವರು ಆಗಾಗ ಹೇಳುತ್ತಿರುತ್ತಾರೆ. "ಮನುಷ್ಯನು ಮನಸ್ಸು ಬಹಳ ಮುಖ್ಯ. ಮಾನವ ಏನು ಬೇಕಾದರೂ ಸಾಧನೆ ಮಾಡಬಲ್ಲ. ಅದಕ್ಕೆ ತಕ್ಕ ಅವಕಾಶವಿರಬೇಕು ಮತ್ತು ಪ್ರೋತ್ಸಾಹಿಸಬೇಕು. ಆಗ ತನ್ನ ಕೆಲಸ ತಾನು ಮಾಡಬೇಕಾದುದು ಅನ್ನುವ ಮನವರಿಕೆ ಮಾಡಿಕೊಂಡು ಕಾರ್ಮಿಕ ಕಾರ್ಯತತ್ಪರನಾಗುತ್ತಾನೆ. ಅದಕ್ಕೆ ಹೇಳೋದಿಲ್ಲವೆ. ಮನಸ್ಸಿನಂತೆ ಮಹಾದೇವ" ಇದೂ ನಿಜಕ್ಕೂ ಸತ್ಯವಾದ ನುಡಿ.

ಆಳವಾದ ವಿಚಾರ, ಸಮತೂಕದ ವಿವೇಚನೆ ಇವರಲ್ಲಿ ಕಾಣಬಹುದಾಗಿದೆ. ಹೊ. ಶ್ರೀಯವರ ಬಗ್ಗೆ ಬರೆಯುತ್ತಾ ಹೋದರೆ ಪುಸ್ತಕವನ್ನೇ ಬರೆಯಬಹುದು. ಅವರ ಕಾರ್ಯಕ್ಷೇತ್ರ ಅಷ್ಟೊಂದು ವಿಶಾಲ. ಗಾಂಧೀ ಅನುಯಾಯಿ, ಸಹಕಾರಿ ಬ್ಯಾಂಕುಗಳ ಶಿಲ್ಪಿ. ಯಾಂತ್ರಿಕ ತಜ್ಞ, ಇಂಜಿನಿಯರ್ ಹೊ. ಶ್ರೀಯವರು ಸದಾ ಹಸನ್ಮುಖಿಗಳು. ಅವರು ತೋರಿಸಿರುವ ಮಾರ್ಗ, ಯುವಜನತೆಗೆ ದಾರಿದೀಪ, ಇಂತಹ ನಾಯಕರ ಮಾರ್ಗದರ್ಶನ ಇಂದಿನ ಜನತೆಗೆ ಅತ್ಯವಶ್ಯ.



# ನಿರಾಡಂಬರ ಸೌಜನ್ಯಮೂರ್ತಿ

**ಬಿ. ಎನ್. ಚಿನ್ನಪ್ಪ**

ಅದೊಂದು ಅಪೂರ್ವ ದಿನ. ಶ್ರೀ ಮತ್ತೂರು ಕೃಷ್ಣಮೂರ್ತಿ ಅವರು, (ಈಗ ಲಂಡನ್ನಿನ ಭಾರತೀಯ ವಿದ್ಯಾಭವನದ ರಿಜಿಸ್ಟ್ರಾರ್ ಆಗಿರುವ) ನನ್ನನ್ನು ಶ್ರೀ ಹೊ. ಶ್ರೀನಿವಾಸಯ್ಯ ಅವರಿಗೆ ಪರಿಚಯಿಸಿ ಕೊಟ್ಟರು. "ಆಕಾಶವಾಣಿಯಲ್ಲಿ ನಿಮ್ಮ ಧ್ವನಿಯನ್ನು ಕೇಳಿ ನಾನೂ ನಿಮ್ಮನ್ನು ಕಾಣುವ ಕುತೂಹಲದಿಂದಿದ್ದೆ. ಕಂಡು ಸಂತೋಷವಾಯಿತು" ಎಂದು ತುಂಬಿದ ಪ್ರೇಮದಿಂದ ನುಡಿದರು, ಶ್ರೀನಿವಾಸಯ್ಯ.

"ಇವರಿಗೆ ಮನೆಯ ಪ್ಲಾನ್ ಮತ್ತು ಹೌಸಿಂಗ್ ಬೋರ್ಡ್ಗೆ ಕೊಡಲು ಡೀಟೇಲ್ಡ್ ಎಸ್ಟಿಮೇಟ್ ನೀವು ಮಾಡಿಕೊಡಬೇಕು, ಎಂದೂ ಹೇಳಿದರು, ಶ್ರೀ ಮತ್ತೂರು. ಈ ಕಾರ್ಯ ಮಾಡಿಕೊಡಲು ಬಲು ಸಂತೋಷದಿಂದ ಒಪ್ಪಿಕೊಂಡರು ಶ್ರೀನಿವಾಸಯ್ಯ ಅವರು. ಅವರ ಸೌಜನ್ಯ ಆತ್ಮೀಯ ಭಾವನೆಯನ್ನು ಕಂಡು ನಾನು ದಂಗು ಬಡಿದು ಹೋದೆ. ಮೂರು ನಾಲ್ಕು ದಿನ ತಾಳಿ ಬನ್ನಿ ಎಲ್ಲವನ್ನು ಕೊಡುತ್ತೇನೆಎಂದರು.

ಹೃದಯ ಸ್ಪರ್ಶಿಯಾದ ಅವರ ನಡೆನುಡಿಗಳನ್ನು ಮೆಲುಕು ಹಾಕುತ್ತ ಎಂತಹ ಅಪರೂಪದ ವಾತ್ಸಲ್ಯದ ಬಂಧು ನನಗೆ ದೊರೆತರು, ಎಂದು ಹಿಗ್ಗಿತು ಈ ಜೀವ. ಅವರ ಮಾತಿನಂತೆ ಮತ್ತೆ ನಾನು ಅವರ ಮನೆಗೆ ಹೋದಾಗ, ಮನೆಯ ಪ್ಲಾನೂ, ಎಸ್ಟಿಮೇಟ್ ನನಗಾಗಿ ಕಾಯುತ್ತಿತ್ತು.

ಶ್ರೀನಿವಾಸಯ್ಯ ಅವರಿಂದ ಆತ್ಮೀಯ ಸ್ವಾಗತ ಸಿಕ್ಕಿತು. ಕಾಫಿ ಉಪಹಾರವೂ ಆಯಿತು.

"ಶ್ರೀನಿವಾಸಯ್ಯನವರೇ ನಿಮ್ಮಿಂದ ಮಹದುಪಕಾರವಾಯಿತು. ನಿಮ್ಮಂತಹ ಆತ್ಮೀಯರು ನನ್ನಂತಹ ನಾಟಕದವನಿಗೆ ದೊರೆತದ್ದು ನನ್ನ ಪುಣ್ಯ"–ಎಂದೆ.

"ಅಯ್ಯೋ ಹಾಗನ್ನಬೇಡಿ ಸ್ವಾಮಿ", "ನೀವು ಕಲಾವಿದರು ನಾಡಿನ ಜನತೆಗೆ ಆನಂದವನ್ನು ಕೊಡುವವರು ನಿಮ್ಮ ಸ್ನೇಹ ಆದದ್ದು ನನ್ನ ಪುಣ್ಯ" ಎಂದರು.

ಅವರ ಈ ಮಾತು ಅವರನ್ನು ಬಲು ಎತ್ತರಕ್ಕೆ ಏರಿಸಿತು. ಅವರ ಮುಂದೆನಾನು ಬಲು ಕುಬ್ಜನಾದೆ.

ನಮ್ಮ ಸ್ನೇಹ ದಿನೇದಿನೇ ಬಲುಗಾಢವಾಯಿತು, ಹೃದಯಗಳು ಸಮೀಪಿಸಿದವು. ಅವರ ವ್ಯಕ್ತಿತ್ವದ ಎದುರು ನಾನು "ರಂಗನ ಮುಂದೆ ಸಿಂಗನೇ" ಎನ್ನುವಂತಿದ್ದರೂ ಶ್ರೀನಿವಾಸಯ್ಯ ಅವರ ದೃಷ್ಟಿಯಲ್ಲಿ ಸರ್ವರೂ ಸಮಾನ.

ನನ್ನ ಹೊಸ ಮನೆಯ ಕೆಲಸ ನಡೆಯುತ್ತಿರುವಲ್ಲಿಗೆ ಆಗಾಗ ಕಾರಿನಲ್ಲಿ ಬಂದು, ಮೇಸ್ತ್ರಿಗೆ ಸಲಹೆ ಸೂಚನೆಗಳನ್ನು ಕೊಡುತ್ತಾ "ಚಿನ್ನಪ್ಪನವರು ದೊಡ್ಡ ಕಲಾವಿದರು ಆದರೆ ಬಡವರು. ಸ್ವಲ್ಪ ಎಚ್ಚರ ವಹಿಸಿ ಚೆನ್ನಾಗಿ ಕೆಲಸ ಮಾಡಿಸು. ಅವರಿಗೆ ನಷ್ಟ ವನ್ನುಂಟು ಮಾಡಬೇಡ" ಎಂದು ಸಾರಿ ಸಾರಿ ಹೇಳುತ್ತಿದ್ದರು. ಇವರು ಮತ್ತು ಇವರ ಆಪ್ತ ಗೆಳೆಯರಾದ ಶ್ರೀ ಭೋಜರಾಜರ (ಬೆಂಗಳೂರು ಕಾರ್ಪೊರೇಷನ್ನಿನ ಎಕ್ಸಿಕುಟಿವ್ ಇಂಜಿನಿಯರ್) ಸಹಾಯ ಸಹಕಾರದಿಂದ ನನಗೊಂದು ಗೂಡಾ ಯಿತು. ಸಮಾಜದ ದೃಷ್ಟಿಯಲ್ಲಿ ನಾನೂ ಒಬ್ಬ ಮನುಷ್ಯನಾದೆ.

ನನ್ನ ತಂಗಿ ಗಂಡನನ್ನು ಕಳೆದು ಕೊಂಡು ತಬ್ಬಲಿಯಾದಳು. ಆಕೆಗೆ ಮೂರು ಮಕ್ಕಳು. ಅವರು ವಾಸವಾಗಿದ್ದುದು ಒಂದು ಚಿಕ್ಕ ಹಳ್ಳಿ. ಅವರಿವರ ಹೊಲ, ಗದ್ದೆಗಳಲ್ಲಿ ಕೂಲಿ ಕೆಲಸ ಮಾಡಿ ತನ್ನ ದುರ್ದಿನಗಳನ್ನು ದೂಡುತ್ತಿದ್ದಳು ಆಕೆ ಹಿರಿಯ ಮಗಳು ಮದುವೆಗೆ ಸಿದ್ಧಳಾಗಿ ನಿಂತಳು. ಸಮಯಕ್ಕೆ ಸರಿಯಾಗಿ ವರನೂ ಬಂದ. ಬಂದವರು ಕೂಡಿದ ಮಟ್ಟಿಗೆ ಅನುಕೂಲಸ್ಥರಾದರೂ ನಾವೇ ಮದುವೆ ಮಾಡಿಕೊಟ್ಟರೆ ಮಾತ್ರ ಅವರು ಹೆಣ್ಣನ್ನು ಮನೆ ತುಂಬಿಸಿಕೊಳ್ಳುವವರು. ನತದೃಷ್ಟಳಾದ ನನ್ನ ತಂಗಿ ಹೇಗೆ ಮದುವೆ ಮಾಡಿಕೊಟ್ಟಾಳು ? ಮನೆಗೆ ಬಂದ ವರನನ್ನು ಹೇಗೆ ಬಿಟ್ಟಾಳು ? ನನಗೆ ಸುದ್ದಿ ಮುಟ್ಟಿತು. ಆ ನತದೃಷ್ಟಳ ಅಣ್ಣನಾನು ತಾನೇ ಏನು ಮಾಡಲಿ ?

ನನ್ನ ಶ್ರೀನಿವಾಸ ದೇವರು ಇರುವರಲ್ಲಾ ಎಂದು ಓಡಿದೆ. ಅವರ ಮನೆಗೆ ಎಂದಿನಂತೆ ಹೃದಯವನ್ನು ತಣಿಸುವ ಅದೇ ತುಂಬು ಮುಖದ ನಗೆಯೊಂದಿಗೆ ನನ್ನ ಕುಶಲವನ್ನು ವಿಚಾರಿಸಿದರು. ಹೇಳಿದೆ ನನ್ನ ತಂಗಿಯ ಕರುಣೆ ಕಥೆಯನ್ನು. ನನ್ನ ಮಾತು ಕೇಳಿ ಅವರ ಅಂತಃಕರಣ ತಳಮಳಿಸಿತು, "ಈಗ ತಾವೇ ನನಗೆ ದಿಕ್ಕು, ಒಂದು ಸಾವಿರ ರೂಪಾಯಿಗಳ ಸಹಾಯ ತಮ್ಮಿಂದಾಗಬೇಕು ಸ್ವಾಮಿ" ಅನಾಥ ಮಗುವಿಗೆ ಮದುವೆ ಮಾಡಿದ ಪುಣ್ಯ ನಿಮ್ಮದಾಗಬೇಕು ಸ್ವಾಮಿ" ಎಂದು ಬೇಡಿದೆ.

ಎರಡೇ ನಿಮಿಷಗಳಲ್ಲಿ ಒಳಗೆ ಹೋಗಿ ಬಂದು ಒಂದು ಸಾವಿರರೂಪಾಯಿಗಳನ್ನು ತಂದು ನನ್ನ ಕೈಲಿ ಹಾಕಿದರು.

ನನ್ನ ಬಾಯಿ ಕಟ್ಟಿತು, ಕಣ್ಣೀರಿನ ಕಟ್ಟೆ ಒಡೆಯಿತು.

"ಇದ್ಯಾಕೆ ಸ್ವಾಮಿ ಅಳ್ತೀರಿ, ಇಂತಹ ಕಾರ್ಯಕ್ಕೆ ಸಹಾಯ ಮಾಡದೆ ಇನ್ಯಾವು ದಕ್ಕೆ ಮಾಡಬೇಕು? ಸಂತೋಷವಾಗಿ ಹೋಗಿ, ನಿಮ್ಮ ತಂಗಿ ಮಗಳ ಮದುವೆ ಮಾಡಿ. ದೇವರು ಎಲ್ಲ ಒಳ್ಳೇದೇ ಮಾಡ್ತಾನೆ" ಎಂದು ನನ್ನ ಬೆನ್ನ ತಟ್ಟಿ, ಅನ್ನ ಇಟ್ಟು ಕಳುಹಿಸಿದರು.

ಅವರಿಗೆ ಸಲ್ಲುತ್ತಿರುವ ಸನ್ಮಾನ ಸಮಾರಂಭ ಔಚಿತ್ಯ ಪೂರ್ಣವಾದದ್ದು. ಈ ಕಾರ್ಯಕ್ಕಾಗಿ ಟೊಂಕ ಕಟ್ಟಿನಿಂತು ದುಡಿದವರೆಲ್ಲರಿಗೂ ಸರ್ವೇಶ್ವರನು ಸನ್ಮಂಗಳವನ್ನುಂಟು ಮಾಡುವನೆಂಬ ದೃಢ ವಿಶ್ವಾಸ ನನ್ನದು. ಅಂತೆಯೇ ಶ್ರೀನಿವಾಸಯ್ಯ ಅವರಿಗೂ, ಅವರ ಕುಟುಂಬ ವರ್ಗದ ಸಮಸ್ತರಿಗೂ ಪರಮ ದಯಾಮಯನಾದ ಪರಶಿವನು ನಿತ್ಯಸುಖ ಸಂತಸಗಳನ್ನಿತ್ತು ಅನುಗ್ರಹಿಸಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.



# ನಾ ಕಂಡ ಜರ್ಮನಿ

---

**ದೇ. ಜ. ಗೌ**

ಶ್ರೀ ಶ್ರೀನಿವಾಸಯ್ಯನವರು ವೃತ್ತಿಯಿಂದ ಇಂಜಿನಿಯರು, ಪ್ರವೃತ್ತಿಯಿಂದ ಗಾಂಧೀತತ್ತ್ವೋಪಾಸಕರು; ಸಾಹಿತ್ಯ ಕೃಷಿ ಅವರ ಪ್ರೀತಿಯ ಹವ್ಯಾಸ, ಯಾರೊ ಕೊಟ್ಟ ತಿಂಡಿಯಲ್ಲೊಂದು ತುಣುಕನ್ನು ತಿಂದು, ಉಳಿದಿದ್ದನ್ನು ಸೊಂಟದಲ್ಲಿ ಬಚ್ಚಿಟ್ಟುಕೊಂಡು ಬಂದು ಮಕ್ಕಳಿಗೆ ಹಂಚುವ ಮುಗ್ಧ ತಂದೆಯಂತೆ ತಾವು ಜರ್ಮನಿಯಲ್ಲಿ ಕಂಡದ್ದನ್ನು ಅನುಭವಿಸಿದ್ದನ್ನು ಯಾವ ಬಿಂಕಬಿಗುಮಾನಗಳೂ ಇಲ್ಲದೆ ನೇರವಾಗಿ ಸರಳವಾಗಿ ತಮ್ಮ ಜನರಿಗೆ ತಿಳಿಸುತ್ತಾರೆ. ಅವರು ಒಂದಲ್ಲ ಎರಡು ಸಾರಿ ಜರ್ಮನಿಗೆ ಹೋಗಿ, ಸುಮಾರು ಒಂದೆರಡು ವರ್ಷ ಆ ಜನರ ನಡುವೆ ನೆಲಸಿ, ಆ ನೆಲದ ನೀರು ಗಾಳಿಗಳನ್ನು ಕುಡಿದು, ಅವರಿಗೆ ಕೃತಜ್ಞತೆಯನ್ನೂ ಈ ಮೂಲಕ ತೀರಿಸಿದ್ದಾರೆ. ಅವರು ತಮ್ಮ ಅನುಭವ ನಿರೂಪಣೆಗಾಗಿ ಕೈಗೊಂಡಿರುವ ವಿಧಾನ ಕಥನ ರೀತಿಯದು. ಅವರು ಸಾಕಷ್ಟು ದೀರ್ಘಕಾಲ ಅಲ್ಲಿ ತಂಗಿದ್ದುದರಿಂದ ಅವರ ಅನುಭವಗಳು ನೆನದು ಬಸಿರಿನಲ್ಲಿ ಮಾಗಿದುವಾಗಿವೆ; ಅವರು ಸತ್ಯನಿಷ್ಠರಾದ್ದರಿಂದ ಅನಾವಶ್ಯಕವಾದ ಅವಹೇಳನವಾಗಲಿ ಉತ್ಪ್ರೇಕ್ಷೆಯಾಗಲಿ ಯಾವ ಭಾಗದಲ್ಲಿಯೂ ಕಾಣುವುದಿಲ್ಲ. ಅವರು ವಿದೇಶದಲ್ಲಿ ಬಹುಕಾಲವಿದ್ದರೂ ಭಾರತೀಯರಾಗುಳಿದರೇ ಹೊರತು ಅಭಾರತೀಯರಾಗಿ ಹಿಂದಿರುಗಲಿಲ್ಲ.

ಸಾಮಾನ್ಯವಾಗಿ ಭಾರತೀಯರು ಮುಂಬಯಿಯಲ್ಲಿ ಹಡಗನ್ನೊ ವಿಮಾನವನ್ನೋ ಹತ್ತಿದ ಕೂಡಲೇ ಭಾರತೀಯತ್ವವನ್ನು ಮರೆತು ಆಂಗ್ಲ ಮೋಹಿಗಳಾಗುವುದು ಅತಿಶಯೋಕ್ತಿಯ ಮಾತಲ್ಲ. ಅವರ ಬೌದ್ಧಿಕ ಕ್ಷೇತ್ರದಲ್ಲಿ ಮೂಲಭೂತ ಪರಿವರ್ತನೆ ಕಾಣದಿದ್ದರೂ ಅಂಗಾಗ ಭಂಗಿಯಲ್ಲಿ, ಮಾತುಗಾರಿಕೆಯಲ್ಲಿ ವೇಷ ಭೂಷಣಗಳಲ್ಲಿ ಹೊಸ ಗತ್ತು ಗಮ್ಮತ್ತುಗಳು ಎದ್ದು ಕಾಣುತ್ತವೆ. ಶ್ರೀನಿವಾಸಯ್ಯನವರು ಇಂಥ ಸಂಗತಿಗಳನ್ನು ಮುಚ್ಚುಮರೆಯಿಲ್ಲದೆ ತಿಳಿಸುತ್ತಾರೆ. ಆಂಗ್ಲಕರ ಸಂಜಾತರಿಗೆ ಅವರ ಮಾತು ಕಹಿಯಾಗಿ ಕಂಡರೂ ಅದು ಅಪ್ರಿಯ ಸತ್ಯವೆನ್ನುವುದನ್ನು ಮರೆಯುವಂತಿಲ್ಲ. ಸಂಯಮರಹಿತರಾದ ಭಾರತೀಯ ತರುಣರಿಗೆ ಹಡಗಿನಲ್ಲಿಯೇ ಹೊಸ ಬಾಳಿನ ಪ್ರಥಮ ಪಾಠಗಳು ಪ್ರಾರಂಭವಾಗುತ್ತವೆ. "ಇಲ್ಲಿ

